ಕುವೆಂಪು ಶತಮಾನೋತ್ಸವ ಮಾಲಿಕೆ -೨೦೦೪

# ದಕ್ಷಿಣ ಕನ್ನಡದ ಸಾರಸ್ವತ ಪರಂಪರೆ

ಡಾ. ಶ್ರೀನಿವಾಸ ಹಾವನೂರ









ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦ ೦೧೮

ಕುವೆಂಪು ಶತಮಾನೋತ್ಸವ ಮಾಲಿಕೆ-೨೦೦೪

# ದಕ್ಷಿಣ ಕನ್ನಡದ ಸಾರಸ್ವತ ಪರಂಪರೆ

(ಮುದ್ದಣನಿಂದ ಕಾರಂತರ ವರೆಗಿನ ಹಿರಿಯ ಸಾಹಿತ್ಯಿಕರ ಸಾಧನೆ)

ಡಾ. ಶ್ರೀನಿವಾಸ ಹಾವನೂರ



ಶುಭವಾಗಲಿ

ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು- ೫೬೦೦೧೮

DAKSHINA KANNADA SARASWATA PARAMPARE
(Analysis of the Contribution of senior writers from Dakshina kannada Region) by : Dr. Shrinivas HAVANUR
Published by : Kannada Sahitya Parishat
Pampa Mahakavi Road, Chamarajapet, Bangalore - 560018
Pages : 188+viii Price : Rs. 50=00 : 2004

ಪ್ರಥಮ ಮುದ್ರಣ : ೨೦೦೪
ಪ್ರತಿಗಳು : ೧೦೦೦
ಬೆಲೆ : ಐವತ್ತು ರೂಪಾಯಿಗಳು



ಕುವೆಂಪು ಶತಮಾನೋತ್ಸವ ಮಾಲಿಕೆ-೨೦೦೪



ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮

## ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯಕ್ಕೆ ಕೊಡಲಾಗಿರುವ ದೇಶದ ಬಹುತೇಕ ಎಲ್ಲ ಪ್ರತಿಷ್ಠಿತ ಸಾಹಿತ್ಯ ಪ್ರಶಸ್ತಿಗೆ ಮೊದಲು ಪಾತ್ರರಾದ ಗಣ್ಯ ಸಾಹಿತಿ ರಾಷ್ಟ್ರಕವಿ ಕುವೆಂಪು ಅವರು ಕನ್ನಡದ ವರ್ಡ್ಸ್‌ವರ್ತ್ ಎಂದು ಪ್ರಖ್ಯಾತರಾಗಿದ್ದಾರೆ. ಈ ಕವಿಯನ್ನು ಸ್ಮರಿಸುವುದೇ ಒಂದು ಚೇತೋಹಾರಿ ಅನುಭವ.

ಕರ್ನಾಟಕ ಸರ್ಕಾರ ಈ ಮಹಾಕವಿಯ ಶತಮಾನೋತ್ಸವವನ್ನು ಸಾಹಿತ್ಯಕವಾಗಿ ವರ್ಷವಿಡೀ ಆಚರಿಸುತ್ತಿರುವ ಹಿನ್ನೆಲೆಯಲ್ಲಿ, ಸಾರ್ವಜನಿಕ ವಿಶ್ವವಿದ್ಯಾಲಯವೆಂದು ಪರಿಗಣಿತವಾಗಿರುವ ಕನ್ನಡ ಸಾಹಿತ್ಯ ಪರಿಷತ್ತು, ಸರ್ಕಾರ ನೀಡಿರುವ ಉದಾರ ಅನುದಾನವನ್ನು ರಚನಾತ್ಮಕವಾಗಿ ಬಳಸಿಕೊಳ್ಳಲು ಈ ಮಹತ್ವದ ಕವಿಯ ಹೆಸರಿನಲ್ಲಿ **"ಕುವೆಂಪು ಶತಮಾನೋತ್ಸವ ಮಾಲಿಕೆ"** ಯೊಂದನ್ನು ಆರಂಭಮಾಡಿದೆ. ಅಪರೂಪದ ಮೌಲಿಕವಾದ ೧೦೦ ಕೃತಿಗಳನ್ನು ಪ್ರಕಟಿಸುವ ಯೋಜನೆಯೊಂದನ್ನು ಹಾಕಿಕೊಂಡಿದೆ. ಹಲವಾರು ಅಲಭ್ಯ ಪ್ರತಿಷ್ಠಿತ ಕೃತಿಗಳನ್ನು ಮರುಮುದ್ರಣಮಾಡುವುದರ, ಜತೆಗೆ ಇತ್ತೀಚಿನ ಉತ್ತಮ ಕೃತಿಗಳನ್ನು ಮಾಲಿಕೆಯಡಿ ಪ್ರಕಟಿಸಲು ಉದ್ದೇಶಿಸಲಾಗಿದೆ.

ಈ ಕೃತಿಯನ್ನು ರಚಿಸಿರುವ ಡಾ. ಶ್ರೀನಿವಾಸ ಹಾವನೂರ ಅವರಿಗೆ ಧನ್ಯವಾದಗಳು. ಪುಸ್ತಕ ಪ್ರಕಟಣೆಗೆ ಆರ್ಥಿಕ ನೆರವು ನೀಡಿ ಉಪಕರಿಸಿರುವ ಕರ್ನಾಟಕ ರಾಜ್ಯ ಸರ್ಕಾರಕ್ಕೆ ವಿನಯ ಪೂರ್ವಕ ಕೃತಜ್ಞತೆ ಸಲ್ಲಿಸುವ ಆದ್ಯ ಕರ್ತವ್ಯ ನಿರ್ವಹಿಸಿ, ಪ್ರಕಟಣೆಗೆ ಹಸಿರುನಿಶಾನೆ ತೋರಿದ ಪ್ರಕಟಣಾ ಸಮಿತಿಗೂ, ಅಚ್ಚುಕಟ್ಟಾಗಿ ಮುದ್ರಿಸಿದ ಮುದ್ರಣಾಲಯಕ್ಕೂ ಪ್ರೀತಿ ಪೂರ್ವಕ ವಂದನೆಗಳು.

ಧರ್ಮದರ್ಶಿ ಹರಿಕೃಷ್ಣ ಪುನರೂರು
ಅಧ್ಯಕ್ಷರು

# ಒಂದಿಷ್ಟು ಸ್ಪಷ್ಟೀಕರಣ

ಅಪ್ಪಟ ಉತ್ತರಕರ್ನಾಟಕದವನಾದ ನನಗೆ ದಕ್ಷಿಣ ಕನ್ನಡ ಪ್ರದೇಶದ ಬಗ್ಗೆ ಒಂದು ಬಗೆಯ ಆಪ್ತಭಾವನೆ ಇದ್ದುದರ ಕಾರಣ ನನಗೇ ಸ್ಪಷ್ಟವಾಗಿ ಹೊಳೆದಿಲ್ಲ. ಈ ಭಾವನೆ ಕಳೆದ ನಾಲ್ಕು ದಶಕಗಳಿಂದ ಉಳಿದುಕೊಂಡು ಬಂದಿದೆ. ಇದೇ ಕಾರಣದಿಂದ ಮುಂಬಯಿಯ ದೊಡ್ಡ ನೌಕರಿಯನ್ನು ಬಿಟ್ಟು ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಕ್ಕೆ ಬಂದದ್ದು (೧೯೮೨-೮೪). ಈಗಂತೂ ಇಲ್ಲಿಯೇ ನೆಲೆಸಿದ್ದೇನೆ.

"ಯಾಕೆ ನೀವು ಇಲ್ಲಿಗೆ ಬಂದಿರಿ?" ಎಂದು ಕು. ಶಿ. ಹರಿದಾಸಭಟ್ಟರು, ನಾನು ಈ ಯುನಿವರ್ಸಿಟಿಗೆಂದು ಬಂದಾಗ ಕೇಳಿದ್ದರು.

"ಹಿಂದಿನ ತಲೆಮಾರಿನ ಇಲ್ಲಿಯ ಸಾಹಿತ್ಯಿಕರು ಮೌಲಿಕ ವಿಚಾರವುಳ್ಳವರು. ಪ್ರತ್ಯುತ್ಪನ್ನಮತಿಗಳಾಗಿದ್ದ ಅವರು ಹೊಸತೇನನ್ನಾದರೂ ನಿರ್ಮಿಸಬಲ್ಲವರಾಗಿದ್ದರು. ಅದಕ್ಕಿಂತ ಹೆಚ್ಚಾಗಿ ಮನವಿದ್ದಂತೆ ಮಾತು-ಕೃತಿಯವರು. ಅವರ ಜೀವನ, ಕೃತಿಗಳ ಬಗ್ಗೆ ತಿಳಿಯಬೇಕಾದ ಅನೇಕ ಅಂಶಗಳಿವೆ. ಅವನ್ನು ಕಂಡುಹಿಡಿಯುವುದು ನನ್ನ ಅಪೇಕ್ಷೆಯಾಗಿದೆ." ಎಂದಿದ್ದೆ.

ಈ ಹಿರಿಯರ ಬಗ್ಗೆ ನನಗಿದ್ದ ಅತ್ಯಾದರವೇ ಮುದ್ದಣನಿಂದ ಹಿಡಿದು ಕಾರಂತರ ವರೆಗಿನ ಅವರ ಜೀವನ ಮತ್ತು ಕಾರ್ಯಸಾಧನೆಯ ಬಗ್ಗೆ ಅಭ್ಯಾಸ ಮಾಡಲು ನನ್ನನ್ನು ತೊಡಗಿಸಿತು.

ಇಲ್ಲಿಯ ೧೬ ಲೇಖನಗಳನ್ನು ಒಂದು ನಿರ್ದಿಷ್ಟ ಉದ್ದೇಶದಿಂದ ತಂದದ್ದಾಗಿದೆ. ಅದುವೆ ದಕ್ಷಿಣ ಕನ್ನಡ ಪರಿಸರದ ಆರಂಭಕಾಲದ ಸಾಹಿತ್ಯಿಕ ವಾತಾವರಣವನ್ನೂ, ಹಾಗೆ ಮೊದಲ್ಗೊಂಡ ಪರಂಪರೆಯನ್ನೂ ರೂಪಿಸುವುದಾಗಿದೆ. ಆದರೆ ಇದು ಪೂರ್ಣವಾದ ಚಿತ್ರಣವಲ್ಲ. ಒಬ್ಬ ರತ್ನಾಕರವರ್ಣಿಯನ್ನು ಬಿಟ್ಟರೆ ಈ ಕಡೆಯ ಯಾವ ಕವಿಯ ಹೆಸರೂ ಹಳಗನ್ನಡ ಚರಿತ್ರೆಯಲ್ಲಿ ಎದ್ದುಕಾಣುವಂತೆ ಕಾಣಿಸಿಕೊಂಡಿಲ್ಲ. ಆದರೆ ೧೮೪೩ರಿಂದ (ಬಾಸೆಲ್ ಮಿಶನ್ನಿನ ಮೊವ್‌ಗ್ಲಿಂಗ್ ಕನ್ನಡ ಪತ್ರಿಕೆಯನ್ನು ಆರಂಭಿಸಿದ ವರ್ಷ) ಈಚಿನ ಎಂದರೆ ೨೦ನೆಯ ಶತಮಾನದ ಕೊನೆಯವರೆಗೆ ಬಾಳಿದ ಈ ಹಿರಿಯರ ಪರಂಪರೆ ನನಗಂತೂ ಅಭಿಮಾನ ಪುರಸ್ಸರವಾಗಿದೆ. ಸಾಹಿತ್ಯ ಪ್ರಪಂಚದಲ್ಲಿ ಹೊಸ ಹೊಸ ಪ್ರಯೋಗಗಳು ಕಾಣಿಸಿಕೊಂಡಿವೆ. ಶಿಕ್ಷಣ ಕ್ಷೇತ್ರದಲ್ಲಿಯೂ ಆ ಸ್ಥಿತಿ.

ಇಲ್ಲಿ ವಿವೇಚನೆಗೆ ಒಳಗೊಂಡ ಐವರಲ್ಲದೆ ಸಾಹಿತ್ಯ ಪರಂಪರೆಯನ್ನು ಇಲ್ಲಿ ನೆಲೆಗೊಳಿಸಿದ ಇನ್ನೂ ಅನೇಕರಿರುವುದನ್ನು ಬಲ್ಲೆ. ರೆ. ಕಿಟೆಲ್, ಮುಳಿಯ ತಿಮ್ಮಪ್ಪಯ್ಯ, ಕಡೆಂಗೋಡ್ಲು ಶಂಕರಭಟ್ಟ, ಎಂ.ಎನ್. ಕಾಮತ, ಸೇಡಿಯಾಪು ಅವರು, ಕು.ಶಿ. ಹರಿದಾಸ ಭಟ್ಟ ಇವರ ಸಾಹಿತ್ಯದ ಕೊಡುಗೆ ಯಾವ ಕಾಲಕ್ಕೂ ಮಸಕಾಗುವಂತಹದಲ್ಲ. ಆ ಹಿರಿಯರ ಪೈಕಿ ನಮ್ಮ ಸುದೈವಕ್ಕೆ ಕಯ್ಯಾರ ಕಿಞ್ಞಣ್ಣ ರೈಗಳು ಇನ್ನೂ ನಮ್ಮ ಮಧ್ಯದಲ್ಲಿ ಇದ್ದಾರೆ. ಆದರೆ ನನ್ನ ವ್ಯಾಸಂಗದ ಮಿತಿಯಿಂದಾಗಿ ಈ ಐವರು ಮಾತ್ರ ಇಲ್ಲಿ ಕಾಣಿಸಿಕೊಂಡಿದ್ದಾರೆ. ಉದಾ.ಗೆ ಪಂಜೆಯವರನ್ನು - ಸಣ್ಣಕತೆ, ಮಕ್ಕಳ ಸಾಹಿತ್ಯ, ಕನ್ನಡದಲ್ಲಿ ಪದ್ಯಾನುವಾದ, ಹರಟೆ ಅಣಕ ಬರಹ - ಮುಂತಾದ ಆದ್ಯತನದ ಉಪಕ್ರಮಗಳಿಗೆ ಕಾರಣರಾದವರನ್ನು ಬಿಡಲಿಕ್ಕುಂಟೆ? ನನ್ನ ಸಮಾಧಾನಕ್ಕಾಗಿ ಅವರನ್ನು 'ಅನುಬಂಧ' ದಲ್ಲಿಯಾದರೂ ಸೇರಿಸಿದ್ದೇನೆ. ಅವರಂತೆಯೇ ಕಿಟೆಲ್ಲರ ವಿಷಯ. (ಅವರ ಬಗ್ಗೆ ಬೇರೆ ಗ್ರಂಥವನ್ನೇ ಬರೆಯುತ್ತ ಇದ್ದೇನೆ).

ಇಲ್ಲಿಯ ಐವರಲ್ಲಿ ಮೂವರ ಪತ್ರ ಸಂಗ್ರಹಗಳು ಸೇರಿಕೊಂಡಿವೆ. ಪತ್ರ ಸಾಹಿತ್ಯ ಲೇಖಕನೊಬ್ಬನ ಜೀವನ, ಕೃತಿಗಳನ್ನು ಪೂರ್ಣವಾಗಿ ತಿಳಿಯುವುದಕ್ಕೆ ಅವಶ್ಯವೆಂದು ಪರಿಗಣಿಸಿದ್ದೇನೆ. ಅಂತಾಗಿ ಈ ಪತ್ರ ಬಾಹುಳ್ಯ.

ಇನ್ನೀಗ ಕೃತಜ್ಞತಾ ಸಮರ್ಪಣೆ. ಪರಿಷದಧ್ಯಕ್ಷ ಶ್ರೀ ಪುನರೂರ ಅವರು ಪರಿಷತ್ತಿನ ವತಿಯಿಂದ ಪ್ರಕಟಿಸಲು ಮುಂದೆ ಬಂದರು. ಪಾದೇಕಲ್ಲು ವಿಷ್ಣುಭಟ್ಟರು ವಯಸ್ಸಿನಲ್ಲಿ ನನಗಿಂತ ಚಿಕ್ಕವರಾದರೂ ಯಾವುದೇ ಸಾಹಿತ್ಯ ಕಾರ್ಯವನ್ನು ಗಟ್ಟಿ ನೆಲೆಯಲ್ಲಿ ಎತ್ತಿಕೊಳ್ಳುವವರು. ಇಲ್ಲಿಯ ಹಿರಿಯರ ಬಗ್ಗೆ ಚೆನ್ನಾಗಿ ತಿಳಿದವರು. ತಮ್ಮ ಅಭಿಮತವನ್ನು ಕೊಡಲು ಕೇಳಿಕೊಂಡೆ. ಡಾ. ನಾ. ದಾಮೋದರ ಶೆಟ್ಟಿಯವರದು ಎಂದಿನಂತೆ ಅನೂನವಾದ ಅನನ್ವಿತ ಸಹಾಯ. ಶ್ರೀಮತಿ ಕೆ. ನಾಗವೇಣಿ ಅವರ ಸಲಹೆಯೊಂದು ನನಗೆ ತುಂಬಾ ಉಪಯೋಗಕ್ಕೆ ಬಂದಿತು. ಇವರೆಲ್ಲರನ್ನು ಈ ಪ್ರಕಟನ ಸಂದರ್ಭದಲ್ಲಿ ನೆನೆಯುವೆ.

ವಿಶೇಷ ಕೃತಜ್ಞತೆ ಸಲ್ಲಬೇಕಾದದ್ದು ಡಾ. ಪಾದೇಕಲ್ಲು ವಿಷ್ಣುಭಟ್ಟರಿಗೆ. ಅವರ ಕ್ಷಮೆಯನ್ನೂ ನಾನು ಕೇಳಬೇಕು - ಮುನ್ನುಡಿ ಬರೆಯಲು ತೀರಾ ಕಡಿಮೆ ಅವಧಿ ಕೊಟ್ಟದ್ದಕ್ಕಾಗಿ.

ಕರ್ನಾಟಕ ತಿಯೋಲಾಜಿಕಲ್ ಕಾಲೇಜ್ — ಶ್ರೀನಿವಾಸ ಹಾವನೂರ
ಮಂಗಳೂರು - ೧
ಫೋನ್: (೮೨೪) ೨೪೧೯೭೭೨೮

# ಮುನ್ನುಡಿ

ಡಾ. ಶ್ರೀನಿವಾಸ ಹಾವನೂರ ಅವರು ಹಿರಿಯರು; ಹಿರಿಯ ಸಂಶೋಧಕರು. ಅವರು ಬರೆದಿರುವ ಈ ಕೃತಿ ದಕ್ಷಿಣ ಕನ್ನಡದ ಐವರು ಹಿರಿಯರ ಬಗೆಗೆ. ಈ ಕೃತಿಗೆ ಮುನ್ನುಡಿಯ ಮಾತುಗಳಿಗಾಗಿ ಅವರು ನನ್ನನ್ನು ಸಂಪರ್ಕಿಸಿದಾಗ ನಾನು ಸಹಜವಾಗಿಯೇ ಹಿಂಜರಿದೆ. ಯಾರಾದರೂ ಹಿರಿಯರೇ ಮುನ್ನುಡಿಯನ್ನು ಬರೆಯಬೇಕಾಗಿತ್ತೆಂಬ ಅಭಿಪ್ರಾಯವನ್ನು ತಿಳಿಸಿದೆ. ಹಾವನೂರರು ನಾನೇ ಬರೆಯಬೇಕೆಂದು ಅಪ್ಪಣೆಕೊಟ್ಟರು. ಡಾ. ಹಾವನೂರರು ದಿ. ಸೇಡಿಯಾಪು ಕೃಷ್ಣಭಟ್ಟರಿಗಿಂತ ಎಷ್ಟೋ ಕಿರಿಯರು. ಆದರೂ ಸೇಡಿಯಾಪು ಅವರು ಕೇಳಿಕೊಂಡ ಪ್ರಕಾರ ಹಾವನೂರರು 'ಛಂದೋಗತಿ' ಪುಸ್ತಕಕ್ಕೆ ಮುನ್ನುಡಿ ಬರೆದಿರುವುದನ್ನು ನೆನಪಿಸಿಕೊಂಡು ಒಪ್ಪಿಕೊಂಡೆ.

ಡಾ. ಹಾವನೂರರು ಬಹು ವಿಚಿತ್ರವಾದ ಮಾಹಿತಿಕೋಶವೆಂದರೆ ತಪ್ಪಾಗದು. ಎಲ್ಲೆಲ್ಲಿಂದಲೋ ಹೇಗೋ ಅವರು ಮಾಹಿತಿಗಳನ್ನು ಕಲೆಹಾಕುತ್ತಾರೆ; ಅವುಗಳನ್ನು ಬೇಕಾದಲ್ಲಿ ಜೋಡಿಸುತ್ತಾರೆ; ಅವುಗಳಿಗೆ ರೂಪಕೊಟ್ಟು ಅಮೂಲ್ಯ ವಿಷಯಗಳಾಗಿ ಪರಿವರ್ತಿಸುತ್ತಾರೆ. ಅವರು ಬರೆದಾಗ ಚಿಕ್ಕಪುಟ್ಟ ವಿವರಗಳೂ ನಮಗೆ ಮಹತ್ತ್ವಪೂರ್ಣವಾಗಿ ಕಾಣಿಸುತ್ತವೆ. ಬರೆದು ಹರಿದೆಸೆವ ಕಾಗದಗಳ ಚೂರುಗಳಲ್ಲಿಯೂ ಡಾ. ಹಾವನೂರರಿಗೆ ಮುಖ್ಯ ವಿಷಯಗಳು ಕಾಣಿಸುತ್ತವೆ. 'ಅಮಂತ್ರಮಕ್ಷರಂ ನಾಸ್ತಿ' ಎಂದು ತೊಡಗುವ ಸುಭಾಷಿತದಲ್ಲಿ. ನಿಷ್ಪ್ರಯೋಜಕಗಳೆಂದು ಭಾವಿಸಲಾಗುವ ವಸ್ತುಗಳನ್ನು ಜೋಡಿಸಿ ಅವುಗಳಿಗೆ ಬೆಲೆ ತರುವ 'ಯೋಜಕನು ಮಾತ್ರ ದುರ್ಲಭ' ಎಂದು ಹೇಳಿದೆ. ಡಾ. ಹಾವನೂರರು ಆ ದುರ್ಲಭವೆಂಬ 'ಯೋಜಕ'ರೊಳಗೊಬ್ಬರು.

ದಕ್ಷಿಣ ಕನ್ನಡದ ಸಾಹಿತ್ಯಕ್ಷೇತ್ರದಲ್ಲಿ ಕ್ರಿ.ಶ. ೧೯ನೆಯ ಶತಮಾನದ ಕೊನೆ ಹಾಗೂ ೨೦ನೆಯ ಶತಮಾನದಲ್ಲಿ ಮುಖ್ಯವ್ಯಕ್ತಿಗಳೆಂದು ವಿವಿಧ ಕಾರಣಗಳಿಂದ ಪರಿಗಣಿತರಾದ ಮುದ್ದಣ, ಹಟ್ಟಿಯಂಗಡಿ ನಾರಾಯಣರಾಯರು, ಪೇಜಾವರ ಸದಾಶಿವರಾಯರು. ಎಮ್. ಗೋವಿಂದ ಪೈಗಳು, ಶಿವರಾಮ ಕಾರಂತರು - ಈ ಐವರ ಬಗೆಗೆ ಈಗಾಗಲೇ 'ಸಾಕಷ್ಟು' ಎನ್ನುವಂತೆ ಬರವಣಿಗೆಗಳು ಬಂದಿವೆ. ಆದರೆ ಡಾ. ಹಾವನೂರರು ಬರೆದ ಈ ಲೇಖನಗಳಲ್ಲಿ ಮತ್ತೂ ಹೊಸ ವಿಷಯಗಳಿವೆ; ಹೊಸ ನೋಟಗಳು, ಹೊಳಹುಗಳು ಇವೆ. ಈ ಲೇಖಕರ ವೈಯಕ್ತಿಕ ಜೀವನದ ವಿವರಗಳು ಅವರನ್ನು ನಾವು ಇನ್ನಷ್ಟು ನೆನೆಯುವಂತೆ ಮಾಡಿವೆ. ಲೇಖಕರ ಜೀವನ ವಿವರಗಳು 'ಕವಿಚರಿತ್ರೆ'ಯ ಒಂದು ಭಾಗವೇ ಸರಿ. ಲೇಖಕರನ್ನು

ಗೌರವಿಸುವ ಓದುಗರ ಸಮುದಾಯದಲ್ಲಿ ಆ ಲೇಖಕರ ಜೀವನದ ಬಗೆಗೆ ಕುತೂಹಲವಿರುವುದು ಸಹಜ. ಹಾವನೂರರ ಬರಹಗಳು ಆ ವಿವರಗಳನ್ನು ಎಲ್ಲಿಯೂ 'ಇತಿಹಾಸಕ್ಕೆ ಅಪಚಾರ ಒದಗದಂತೆ' ನಿರೂಪಿಸುತ್ತವೆ; ತಪ್ಪಾದ ಮಾಹಿತಿಗಳನ್ನು ಸರಿಪಡಿಸುತ್ತವೆ.

ಡಾ. ಹಾವನೂರರಿಗೆ 'ಪತ್ರ'ಗಳ ಬಗೆಗೆ ವಿಶೇಷವಾದ ಒಲವು. ವೈಯಕ್ತಿಕ ಪತ್ರಗಳಲ್ಲಿ ಜೀವನದ ನೋವು ನಲಿವುಗಳು, ಆಸೆ ಆಕಾಂಕ್ಷೆಗಳು ತೆರೆದುಕೊಳ್ಳುವುದು ಮಾತ್ರವಲ್ಲ ಅವರ ವ್ಯಕ್ತಿತ್ವದ ನಿಜ ದರ್ಶನವಾಗುತ್ತದೆ. ಹಾವನೂರರು ಇಂತಹ ಪತ್ರಗಳನ್ನು ಪರಿಶ್ರಮದಿಂದ ಸಂಪಾದಿಸಿ ಲೇಖನಗಳಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಆ ಪತ್ರಗಳು ಹಲವು ದೃಷ್ಟಿಗಳಿಂದ ಹೇಗೆ ಐತಿಹಾಸಿಕ ಮಹತ್ತ್ವವನ್ನು ಪಡೆದಿವೆಯೆಂಬುದನ್ನು ತೋರಿಸಿಕೊಡುತ್ತಾರೆ. ಪ್ರಾದೇಶಿಕ ಅಧ್ಯಯನದ ದೃಷ್ಟಿಯಿಂದಲೂ ನಿಶ್ಚಿತ ಕಾಲದ ಸಾಹಿತ್ಯಕ ಪರಿಸರದ ಅಧ್ಯಯನದ ದೃಷ್ಟಿಯಿಂದಲೂ ಅವರು ಒಟ್ಟು ಕೂಡಿಸಿಕೊಟ್ಟ ಮಾಹಿತಿಗಳು ಅಮೂಲ್ಯವಾದುವೆಂಬುದರಲ್ಲಿ ಸಂದೇಹವಿಲ್ಲ.

ದಕ್ಷಿಣ ಕನ್ನಡದ ಐದು ಮಂದಿ ಹಿರಿಯರ ಕೃತಿಪರಿಚಯ - ವಿಮರ್ಶೆ ಡಾ. ಹಾವನೂರರ ಉದ್ದೇಶವಲ್ಲ. ಅವರ ಜೀವನ, ಆ ಹಿನ್ನೆಲೆಯಲ್ಲಿ ಅವರ ಸಾಧನೆಯ ನಿರೂಪಣೆ ಆ ಉದ್ದೇಶವನ್ನು ಹಾವನೂರರು ಇಲ್ಲಿಯ ಲೇಖನಗಳಲ್ಲಿ ಸಾಧಿಸಿದ್ದಾರೆ. ಪೈಗಳ ಮೊತ್ತಮೊದಲಿನ ಕವಿತೆ, ಪ್ರಥಮ ಅಂಕಣಕಾರ - ಪಂಜೆಯವರು, ಇಂತಹ ಮಾಹಿತಿಗಳನ್ನು ಡಾ. ಹಾವನೂರರಲ್ಲದೆ ಬೇರೆಯವರು ಕೊಡುವಂತಿಲ್ಲ.

ಇಲ್ಲಿಯ ಲೇಖನಗಳಲ್ಲಿ ಕೆಲವು ಆಂಶಿಕವಾಗಿ ಕೆಲವು ಪೂರ್ಣವಾಗಿ ಬೇರೆಡೆ ಪ್ರಕಟಗೊಂಡರೂ ಅವುಗಳನ್ನು ಪರಿಷ್ಕರಿಸಿ ಹೊಸ ಮಾಹಿತಿಗಳಿಂದ ಪರಿಪುಷ್ಟಗೊಳಿಸಿರುವ ಕಾರಣ ಅವು ಹೊಸ ಲೇಖನಗಳೇ ಆಗಿವೆ. ದಕ್ಷಿಣ ಕನ್ನಡದ ಹಿರಿಯರೆಂದರೂ ಇವರೆಲ್ಲರು ಅಖಿಲ ಕರ್ನಾಟಕ ಮಟ್ಟದಲ್ಲಿ ಗಮನಾರ್ಹರು. ಅವರ ಸಾಧನೆಗಳು ಆ ಮಟ್ಟದಲ್ಲಿಯೇ ಪರಿಗಣಿತವಾಗಬೇಕಾದುವು. ಈ ಐದು ಮಂದಿ ವಿಭಿನ್ನ ರೀತಿಗಳಲ್ಲಿ ಸಾಹಿತ್ಯಕ್ಷೇತ್ರದ ಸಾಧನೆಯನ್ನು ಮಾಡಿದವರು. ಯಾರೂ ಒಬ್ಬರನ್ನೊಬ್ಬರು ಅನುಕರಿಸಿದವರಲ್ಲ; ಯಾರೂ ಪಂಥ ಪಂಗಡಗಳನ್ನು ಕಟ್ಟಿಕೊಂಡವರಲ್ಲ; ಆದುದರಿಂದಲೇ ಎಲ್ಲರೂ ವಿಶಿಷ್ಟರು.

ಈ ವಿಶಿಷ್ಟರ ಬಗೆಗಿನ ಈ ಕೃತಿಯು ನಿಜವಾಗಿಯೂ ವಿಶಿಷ್ಟವಾಗಿದೆ. ಇಂತಹ ವಿಷಯದಲ್ಲಿ ಕುತೂಹಲ ಮೂಡಿಸಿ ಈ ರೀತಿಯ ಆಸಕ್ತಿಯುಳ್ಳ ಕಿರಿಯರು ಇಂತಹ ಕ್ಷೇತ್ರದಲ್ಲಿ 'ದುಡಿದು' ಬರವಣಿಗೆ ಮಾಡುವ ಪ್ರೇರಣೆಯನ್ನು ಈ ಕೃತಿ ಕೊಡುವಂತಿದೆ. ಡಾ. ಹಾವನೂರರಿಂದ ಇನ್ನೂ ಇಂತಹ ಕೃತಿಗಳನ್ನು ನಿರೀಕ್ಷಿಸುವುದು ತಪ್ಪಲ್ಲ.

ಪಾದೇಕಲ್ಲು ವಿಷ್ಣು ಭಟ್ಟ

# ಪರಿವಿಡಿ

# ೧ ಮುದ್ದಣ ಕವಿಯ ಕಾಲ, ಜೀವನ ಮತ್ತು ಕೃತಿರಚನೆಯ ಹಿನ್ನೆಲೆ

**ಸಮಕಾಲೀನ ಸಾಹಿತ್ಯ ಹಾಗೂ ಪರಿಸರದ ಪ್ರಭಾವ**

"ಮುದ್ದಣ ಕಾಣಿಸಿಕೊಳ್ಳುವುದಕ್ಕೆ ಮುಂಚೆ, ಕನ್ನಡ ಸಾಹಿತ್ಯ ಕಳೆಗುಂದಿದ ಕಾಲವದಾಗಿತ್ತು. ಅಂಧಕಾರ ಎಲ್ಲೆಲ್ಲೂ ಹರಡಿತ್ತು"

'ಮುದ್ದಣ ಪ್ರಭಾತ ರವಿ'

'ಕನ್ನಡ ನವೋದಯದ ಮುಂಗೋಳಿ'

'ಹೊಸಗನ್ನಡ ಕಾವ್ಯಾರಾಮದ ಮೊದಲ ಕೋಗಿಲೆ.'

ಮುದ್ದಣ ಪ್ರಶಸ್ತಿಯ ಸಂದರ್ಭದಲ್ಲಿ ಹೊರಟ ಉಕ್ತಿಗಳಿವು. ಅವನಿಗಿಂತ ಮುಂಚೆ ಕನ್ನಡ ಸಾಹಿತ್ಯಾಕಾಶದಲ್ಲಿ ನಿಜಕ್ಕೂ ಅಂಧಕಾರವಿದ್ದಿತೆ? ಮುದ್ದಣ ಕೋಗಿಲೆ; ಸರಿ. ಆದರೆ ಅವನದೇ ಮೊದಲ ಇಂಚರ ಎಂದು ಹೇಳುವಾಗ, ತತ್ಪೂರ್ವದ ಹೊಸಗನ್ನಡ ಕಾವ್ಯಾರಾಮವು ಅಪ್ಪಟ ಕಾಡಾಗಿದ್ದಿತೆನ್ನಬೇಕು. ಇಂಥ ಪರಿಸ್ಥಿತಿಯೇ ಇದ್ದಿತೆ? ಓರ್ವ ಕವಿ ಎಷ್ಟೇ ಪ್ರತಿಭಾಶಾಲಿಯಿರಲಿ, ಅವನೊಬ್ಬ ಪರಿಸರದ ಶಿಶು. ಆ ಅರ್ಥದಲ್ಲಿ ಮುದ್ದಣಪೂರ್ವದ ಸಾಹಿತ್ಯವನ್ನೂ ಅವನು ಬಾಳಿದ್ದ ಪರಿಸರವನ್ನೂ ಗಮನಿಸಬೇಕಾಗುತ್ತದೆ - ಅದೂ ಮೇಲ್ಕಂಡಂಥ ಅಭಿಪ್ರಾಯ ಅನೇಕರಲ್ಲಿ ಇರುವಾಗ.

ಕೊನೆಯ ಕೃತಿ - ರಾಮಾಶ್ವಮೇಧವನ್ನು ಮುದ್ದಣನು ಪ್ರಕಟನೆಗೆ ಕಳುಹಿಸಿದ್ದು ೧೮೯೭ರಲ್ಲಿ. ಅದಕ್ಕಿಂತ ೮೦ ವರ್ಷಗಳ ಪೂರ್ವದಲ್ಲಿ ಹೊಸಗನ್ನಡ ಆದ್ಯ ಗ್ರಂಥ ಪ್ರಕಟವಾಗಿದೆ (A Grammar of the Kurnata language, ೧೮೧೭). ಈ ಎಂಟು ದಶಕಗಳ ಅವಧಿಯಲ್ಲಿ ೧೫೦೦ಕ್ಕೆ ಮೇಲ್ಪಟ್ಟು ಕೃತಿಗಳ ರಚನೆಯಾಗಿದೆ. ಮುಕ್ಕಾಲುವಾಸಿ ಗ್ರಂಥಗಳು ಮುದ್ರಣಗೊಂಡಿವೆ. ಇಷ್ಟರಮಟ್ಟಿಗೆ ಗ್ರಂಥೋದ್ಯಮ ಬೆಳೆದುದಕ್ಕೆ ಪಾಶ್ಚಾತ್ಯ ಸಂಪರ್ಕವೇ ಮೂಲ ಕಾರಣ. ಅದರ ಸಾಧನಗಳೆಂದರೆ ದೇಶಾದ್ಯಂತ ಹರಡಿದ ಬ್ರಿಟಿಶರ ಆಡಳಿತ ಚಕ್ರ ಹಾಗೂ ಮಿಶನರಿ ಜನರ ಮತಪ್ರಸಾರ ಕಾರ್ಯ. ಇವೆರಡೂ ವರ್ಗದವರು ನಾಡಿನಲ್ಲಿ ಹೊಸ

ಬಗೆಯ ಶಿಕ್ಷಣವನ್ನು ರೂಢಿಸಿದರು. ಶಾಲೆಯ, ಅದರಂತೆ ಮತೀಯ ಪುಸ್ತಕಗಳನ್ನು ಪ್ರಕಟಿಸಿದರು. ಈ ಎತ್ತುಗಡೆಯಲ್ಲಿ ಮುದ್ರಣವು ಬೆನ್ನೆಲುಬಾಗಿ ನಿಂತಿತು. ಕ್ರಮೇಣ ಸಾಹಿತ್ಯಿಕವೆನ್ನಬಹುದಾದ ಗದ್ಯ, ಪದ್ಯ ಕೃತಿಗಳು ಬೆಳಕು ಕಂಡವು. ಇಂಗ್ಲಿಷ್ ಶಿಕ್ಷಣದ ಪ್ರಭಾವವು ವಿಸ್ತರಿಸಿದ ಹಾಗೆಲ್ಲ ಮಧ್ಯಮ ವರ್ಗೀಯರಲ್ಲಿ ವಿಚಾರ ಜಾಗೃತಿ ಉಂಟಾಯಿತು. ಸ್ವತಂತ್ರ ವಿಚಾರದ ನೂತನ ವಿಧಾನದ ಬರವಣಿಗೆ ತಲೆದೋರಿತು.

ಇದರ ಜೊತೆಗೆ ಪರಂಪರಾಗತ ಕಾವ್ಯರಚನೆ - ಎಂದರೆ, ಷಟ್ಪದಿ ಮೊದಲಾದ ಕಾವ್ಯ ರೂಪಗಳು, ಪೌರಾಣಿಕ ಕಥನಗಳು, ಧಾರ್ಮಿಕ ವಿವೇಚನೆಯ - ಕೃತಿಗಳು, ಇದರಂತೆ ಹಾಡು, ಕೀರ್ತನೆಗಳು, ಯಕ್ಷಗಾನಗಳು - ಇವುಗಳ ರಚನೆಯೂ ಮುಂದುವರಿಯಿತು. ಹೀಗೆ ಮುದ್ದಣ ಪೂರ್ವದ ೮೦ ವರ್ಷದ ಸಾಹಿತ್ಯವು ಅತ್ಯಂತ ಸಂಧಿಕಾಲದ್ದಾಗಿತ್ತು. ಆಗಿನಷ್ಟು ಸಮ್ಮಿಶ್ರ ಸಾಹಿತ್ಯ ರಚನೆಯು ಕನ್ನಡ ಸಾಹಿತ್ಯ ಚರಿತ್ರೆಯ ಯಾವ ಕಾಲಖಂಡದಲ್ಲಿಯೂ ಕಂಡು ಬರಲಾರದು. ಆಗಿನ ವಾಙ್ಮಯ ಸಮುದಾಯದಲ್ಲಿನ ಸಾಂಪ್ರದಾಯಿಕ ಮಾರ್ಗ ಹಾಗೂ ಆಧುನಿಕ ಮಾರ್ಗಗಳ ಬಗೆಯನ್ನು ಪರಿಶೀಲಿಸೋಣ.

ಕ್ರಿ.ಶ. ೧೮೬೮ರ ವರೆಗೆ ರಾಜ್ಯವಾಳಿದ ಮುಮ್ಮಡಿ ಕೃಷ್ಣರಾಜರು ಉಜ್ವಲ ಧರ್ಮಾಭಿಮಾನಿಗಳೂ ವಿದ್ವಜ್ಜನ ಪೋಷಕರೂ ಆಗಿದ್ದರೆಂಬುದು ಸರ್ವವಿದಿತ. ಅವರ ಪ್ರೋತ್ಸಾಹದಿಂದಾಗಿ ಕಾವ್ಯ, ಪುರಾಣಗಳ ಅನುವಾದಗಳು ಬಹು ದೊಡ್ಡ ಸಂಖ್ಯೆಯಲ್ಲಿ ಹೊರಬಂದುವು. ಪ್ರಾಚೀನ ಸಾಹಿತ್ಯವನ್ನು ಹೀಗೆ ಸುಲಭಗೊಳಿಸಿ ಪ್ರಕಟಿಸುವಲ್ಲಿ ಸಾಹಿತ್ಯವು ಹೆಚ್ಚೆಚ್ಚು ಜನಾಭಿಮುಖವಾಗುತ್ತಿರುವುದನ್ನು ನಾವು ಕಾಣುತ್ತೇವೆ. ಅದರಂತೆ ಕಾಳಿದಾಸನ ಕೃತಿಗಳು, ಪಂಚತಂತ್ರಾದಿ ಕಥೆಗಳು ಸಹ ಕನ್ನಡಿಗರ ವಾಚನಕ್ಕೆ ಒದಗಿಬಂದವು. ಮುದ್ದಣನು ಶೇಷರಾಮಾಯಣವನ್ನು ನೆಚ್ಚಿಕೊಂಡಿದ್ದ. ಇತರ, ಎಂದರೆ ಆನಂದರಾಮಾಯಣ, ಆಧ್ಯಾತ್ಮ ರಾಮಾಯಣ, ಪ್ರಾಕೃತ ರಾಮಾಯಣ, ಯೋಗವಾಸಿಷ್ಠ ರಾಮಾಯಣ - ಇವೇ ಮುಂತಾದವುಗಳತ್ತ ಕನ್ನಡ ಕವಿ - ಲೇಖಕರು ತಮ್ಮ ಗಮನ ಹರಿಯಿಸಿ, ವಿವಿಧ ರೂಪಗಳಲ್ಲಿ ಅವನ್ನು ಹೊರತಂದಿದ್ದಾರೆ.

ಈ ಮಾರ್ಗದಲ್ಲಿ ಎದ್ದು ಕಾಣುವ ರಚನೆಯೆಂದರೆ ದಾಸ ಸಾಹಿತ್ಯದ್ದು. ವಿಜಯದಾಸ - ಜಗನ್ನಾಥದಾಸರ ಮುಂದಿನ ಪೀಳಿಗೆಯ ಅನೇಕ ಜನ ದಾಸರು ಸಾವಿರಾರು ಹಾಡುಗಳನ್ನು ರಚಿಸಿದರು. ಇವರ ಕೃತಿಗಳಲ್ಲಿ ಪಾಶ್ಚಾತ್ಯ ಸಂಪರ್ಕದ ಯಾವುದೇ ಬಗೆಯ ಪಡಿನೆಳಲು ಕಾಣಿಸುವುದಿಲ್ಲ. ಅವರ ಪಾಲಿಗೆ ನವೋದಯದ ಗಂಧ ಗಾಳಿ ಇದ್ದಿರಲೇ ಇಲ್ಲವೇನೋ! (ಈ ಮಾತು ಅಂದಿನ ಯಕ್ಷಗಾನ ಕವಿಗಳಿಗೂ ಅನ್ವಯಿಸುತ್ತದೆ.) ಅಪರೂಪಕ್ಕೆಂಬಂತೆ ಹೊಸ ಯುಗದ ಅಪ್ರತ್ಯಕ್ಷ ಪ್ರಸ್ತಾಪವು ಬಂದಿದ್ದೀತು.

ಈ ಕಾಲಾವಧಿಯಲ್ಲಿ ಕೆಲವು ಕವಯಿತ್ರಿಯರ ಹೆಸರುಗಳು ಕೇಳಿಬರುತ್ತವೆ. ಹದಿನೆಂಟನೆಯ ಶತಮಾನದ ಹೆಳವನಕಟ್ಟೆ ಗಿರಿಯಮ್ಮನ ಕಾಲದಿಂದ ನಡೆದು ಬಂದ

ಪರಂಪರೆಯಿದು. ಹರಪನಹಳ್ಳಿ ಭೀಮವ್ವ ಎಂಬವಳು ವಿವಿಧ ಪೌರಾಣಿಕ ಕಥಾವಸ್ತುವುಳ್ಳ ೫೦ ಕಾವ್ಯಗಳನ್ನು ರಚಿಸಿದಳು.

ಇತ್ತ ದೇಶೀಯರು ಸಹ ಮುದ್ರಣದ ಪ್ರಯೋಜನವನ್ನು ಮನಗಂಡು ಜನಪ್ರಿಯ ಕಥೆ, ಕಾವ್ಯ, ಪಠ್ಯಪುಸ್ತಕಗಳನ್ನು ಪ್ರಕಟಿಸತೊಡಗಿದರು. ಸಂಸ್ಕೃತ ಇಂಗ್ಲಿಷ್ ಗ್ರಂಥಗಳ ಅನುವಾದಗಳೂ ಹೊರಬಂದುವು. ಹೀಗೆ ೧೮೧೭ರಿಂದ ೫೦-೬೦ ವರ್ಷಗಳವರೆಗೆ ಮತೀಯ ದೃಷ್ಟಿಯ ಹಾಗೂ ಅನುವಾದ - ಮರು ಪ್ರಕಟಣೆಗಳಿಂದ ತುಂಬಿದ ಅಗ್ಗದ ಸಾಹಿತ್ಯವು ಪ್ರಸಾರಗೊಂಡಿತು. ಈ ಮಾತು ಸಾಮಾನ್ಯವಾಗಿ ಆಗಿನ ಎಲ್ಲ ಭಾರತೀಯ ಸಾಹಿತ್ಯಗಳಿಗೆ ಅನ್ವಯಿಸುತ್ತದೆ.

ನಾಡವರಲ್ಲಿ ವಿಚಾರ ಜಾಗೃತಿಯು ತಲೆದೋರಿದುದು ೧೮೭೦ನೆಯ ದಶಕದಿಂದ ಈಚೆಗೆ. ಮಿಶನರಿಗಳ ಮತ ಪ್ರಸಾರವನ್ನು ಪ್ರತಿಭಟಿಸುವ ನಿಮಿತ್ತದಿಂದ ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಅಭಿಮಾನ ಜಾಗೃತವಾಯಿತು. ಪಡುವಣದ ಪ್ರಪಂಚವನ್ನು, ಅಲ್ಲಿಯ ಜ್ಞಾನ - ವಿಜ್ಞಾನವನ್ನು ತಿಳಿಯುವ ಹಂಬಲ, ರಾಷ್ಟ್ರೀಯ ಭಾವನೆ, ಸ್ತ್ರೀಯರ ಏಳ್ಗೆ ಮೊದಲಾದ ಸಮಾಜ ಸುಧಾರಣಾ ವಿಚಾರ - ಇವು ಅಂದಿನ ಶಿಕ್ಷಣವಂತರ ಮನದಲ್ಲಿ ಮೂಡಿ ಲೇಖನಿಯ ಮೂಲಕ ಅಭಿವ್ಯಕ್ತಿಯನ್ನು ಪಡೆದುವು. ಚಾಮರಾಜರಿಂದ ನಾಟಕ ಕಲೆಗೆ ಪ್ರೋತ್ಸಾಹ, ನಾಡಿನ ಶಾಸನಗಳ ಶೋಧ, (ರೈಸ್, ಫ್ಲೀಟ್) ರಾಜಕೀಯ ಸಾಮಾಜಿಕ ಪ್ರಜ್ಞೆಯನ್ನು ಮೈಗೂಡಿಸಿಕೊಂಡ ಪತ್ರಿಕೆಗಳ ಉದ್ಭವ, ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆ - ಇವುಗಳಿಂದಾಗಿ ಲೇಖಕರ ಸ್ವತಂತ್ರ ವಿಚಾರದ ಅಭಿವ್ಯಕ್ತಿಗೆ, ವಿವಿಧ ಪ್ರಕಾರಗಳ ವಿನೂತನ ಸಾಹಿತ್ಯ ರಚನೆಗೆ ಪ್ರೇರಣೆ ಒದಗಿ ಬಂತು. ಕಾದಂಬರಿಗಳು, ಅದರಂತೆ ಸ್ವತಂತ್ರ ಸಾಮಾಜಿಕ ನಾಟಕಗಳು ಕಾಣಿಸಿಕೊಂಡದ್ದು ಈವಾಗಲೇ. ಇಂತು, ಮುದ್ದಣನು ಸಾಹಿತ್ಯಿಕ ವ್ಯಾಸಂಗವನ್ನು ಕೈಕೊಳ್ಳುವ ವೇಳೆಗೆ (ಸು. ೧೮೮೭) ಇಂದು ನಾವು ತಿಳಿದಿರುವ ಹೊಸಗನ್ನಡ ಸ್ವರೂಪವು ಸುಸ್ಪಷ್ಟವಾಗಿ ಗೋಚರಿಸಿದ್ದಿತು. ಅವನ್ನು ತುಸು ವಿವರವಾಗಿ ಪರಿಶೀಲಿಸೋಣ.

ಇಂದು ಗ್ರಂಥ ರೂಪದಲ್ಲಿ ಪ್ರಚಲಿತವಿರುವ ಪ್ರಸಿದ್ಧ ಹಳಗನ್ನಡ ಕಾವ್ಯಗಳೊಳಗೆ ಅರ್ಧಕ್ಕೆ ಮೇಲ್ಪಟ್ಟು ಕೃತಿಗಳು ಮುದ್ದಣನ ಕಾಲಕ್ಕೆ ಬೆಳಕನ್ನು ಕಂಡಿದ್ದವು. ರಾಜಶೇಖರವಿಳಾಸ, ಜೈಮಿನಿಭಾರತ, ಕುಮಾರವ್ಯಾಸಭಾರತ, ತೊರವೆ ರಾಮಾಯಣ, ಅನುಭವಾಮೃತ, ದಾಸರ ಹಾಡುಗಳು - ಇವು ಹಲವಾರು ಆವೃತ್ತಿಗಳನ್ನು ಕಂಡ ಕೃತಿಗಳಾಗಿವೆ. ಜಗನ್ನಾಥ ವಿಜಯ, ನಾಗಚಂದ್ರನ ಕಾವ್ಯಗಳು, ಕಬ್ಬಿಗರ ಕಾವ, ಕರ್ನಾಟಕ ಕಾದಂಬರಿ, ಷಡಕ್ಷರಿಯ ಕೃತಿಗಳು ಕಾವ್ಯಾಭ್ಯಾಸಿಗಳಿಗೆ ಸುಲಭವಾಗಿ ಲಭ್ಯವಿದ್ದುವು. ಅದರಂತೆ ಶಬ್ದಮಣಿದರ್ಪಣ, ಛಂದೋಂಬುಧಿ, ಕರ್ಣಾಟಕ ಭಾಷಾಭೂಷಣ, ಶಬ್ದಾನುಶಾಸನ, ಚತುರಾಸ್ಯ ನಿಘಂಟು, ಕಬ್ಬಿಗರ ಕೈಪಿಡಿ, ಹಾಗೂ ರಸರತ್ನಾಕರ, ಶೃಂಗಾರ ರತ್ನಾಕರಗಳು ಸಹ ಮುದ್ರಣಗೊಂಡಿದ್ದುವು. ಈ ಸಮುದಾಯಕ್ಕೆ ಕರ್ಣಾಟಕ ಕಾವ್ಯಮಂಜರಿಯವರು ಹೊರತಂದ ಇನ್ನಿತರ ಕೃತಿಗಳನ್ನು

ಸೇರಿಸಬೇಕು. ಕವಿತಾ ಸಂಗ್ರಹದಲ್ಲಿ ವುರ್ಥ್‌ನ 'ಪ್ರಾಕ್ಕಾವ್ಯ ಮಾಲಿಕೆ' (೧೮೬೮), ಕಿಟೆಲ್ ಸಂಪಾದಿತ 'ಕರ್ಣಾಟಕ ಕಾವ್ಯಮಾಲೆ' ಮತ್ತು ತುರಮರಿಯವರ 'ಕವಿತಾ ಸಂಗ್ರಹ' (೧೮೭೪) ಇವನ್ನು ಹೆಸರಿಸಬೇಕು. ಭಾವಗೀತಾತ್ಮಕವಾದ ಹೊಸಗನ್ನಡ ಕಾವ್ಯವು ಮಾತ್ರ ಪಠ್ಯ ಪುಸ್ತಕ, ಕ್ರೈಸ್ತಗೀತೆ, ಜಯರಾಯಾಚಾರ್, ಎಸ್.ಜಿ. ನರಸಿಂಹಾಚಾರ್ - ಇವರ ಕವಿತೆಗಳಲ್ಲಿ ಅಷ್ಟಿಷ್ಟು ಇಣುಕಿ ನೋಡುತ್ತಿದ್ದಿತಲ್ಲದೆ ಇನ್ನೂ ಪೂರ್ತಿ ಜನ್ಮ ತಾಳಿರಲಿಲ್ಲವೆನ್ನಬೇಕು. ಆದರೆ ಲೌಕಿಕ ಮತ್ತು ಆಧುನಿಕ ಯುಗಕ್ಕೆ ಹತ್ತಿರವಾದ ಕವಿತೆಗಳನ್ನು ಮೊಪ್‌ಗ್ಲಿಂಗ್ (೧೮೪೮) ಮತ್ತು ಕಿಟೆಲ್(೧೮೬೨) ಸಾಕಷ್ಟು ಹಿಂದೆಯೂ ರಚಿಸಿದ್ದುದು ಈಚೆಗೆ ಬೆಳಕಿಗೆ ಬಂದಿದೆ.

ಕನ್ನಡ ಭಾಷೆಯ ವಿಶೇಷ ಅಧ್ಯಯನವು ಮುದ್ದಣಕಾಲೀನ ಸಾಹಿತ್ಯದ ಒಂದು ವೈಶಿಷ್ಟ್ಯ. ವಿದೇಶಿಯರ ಕನ್ನಡ ಅಭ್ಯಾಸದ ನಿಮಿತ್ತವಾಗಿ, ಹಲವಾರು ವ್ಯಾಕರಣ ಗ್ರಂಥಗಳು, ಶಬ್ದಕೋಶಗಳು ಪ್ರಕಟವಾದುವು. ಶಾಲೆಯ ವ್ಯಾಕರಣಗಳಂತೂ ಸರಿಯೇ. ಇತ್ತ ಕಾಲ್ಡ್‌ವೆಲ್‌ನ ದ್ರಾವಿಡ ಭಾಷಾಧ್ಯಯನ ಗ್ರಂಥವು ಪ್ರಕಟವಾದಂದಿನಿಂದ ಕನ್ನಡಕ್ಕೆ ಅನ್ವಯಿಸಿ ವಿವರಿಸುವ ಪ್ರಮೇಯ ತಲೆದೋರಿತು. ಹಳೆಯ ಚೌಕಟ್ಟಿನಲ್ಲಿಯೇ ಕಿಟೆಲ್, ಧೋ. ನ. ಮುಳಬಾಗಲ ಮತ್ತು ಟಿ.ಜಿ. ಮಾಬೆನ್ ಮುಂತಾದವರು ಆಧುನಿಕ ರೀತಿಯ ವ್ಯಾಕರಣ ಗ್ರಂಥಗಳನ್ನು ರಚಿಸಿದ್ದಾರೆ. ಆರ್. ರಘುನಾಥರಾಯರು ೧೮೯೪ರ ಸುಮಾರಿಗೆ ತಮ್ಮ ವ್ಯಾಕರಣೋಪನ್ಯಾಸಗಳ ಪ್ರಥಮ 'ಮಂಜರಿ'ಯನ್ನು ಸಾದರಪಡಿಸಿದ್ದಾರೆ. ಈ ರೀತಿಯ ಭಾಷಾಧ್ಯಯನದ ಜಾಡಿನಲ್ಲಿಯೇ ಮುದ್ದಣನ 'ಜೋ ಜೋ' ಪ್ರಬಂಧ ರೂಪುಗೊಂಡಿತು.

ಮುದ್ದಣನು ಪ್ರಾಯಶಃ ಗಮನಿಸದಿದ್ದ ಆಗಿನ ಒಂದು ಸಾಹಿತ್ಯ ಪ್ರಕಾರವೆಂದರೆ ನಾಟಕ. ಬಸವಪ್ಪ ಶಾಸ್ತ್ರಿ, ಚುರಮರಿ ಶೇಷಗಿರಿರಾಯರ ಶಾಕುಂತಲದ ಭಾಷಾಂತರಗಳಿಂದ ಆರಂಭವಾದ ಕನ್ನಡ ನಾಟಕ ಸೃಷ್ಟಿಯು ಇತರ ಸಂಸ್ಕೃತ ನಾಟಕಾನುವಾದಗಳನ್ನೂ ಒಳಗೊಂಡಿದ್ದಿತು. ಶೇಕ್ಸಪಿಯರನ ಪ್ರಮುಖ ನಾಟಕಗಳು - ಕೆಲವು ೨-೩ ಬಾರಿಗೆ ಕನ್ನಡದಲ್ಲಿ ಕಾಣಿಸಿಕೊಂಡವು. ಆ ಕಾಲದಲ್ಲಿ ಪೌರಾಣಿಕ ನಾಟಕಗಳದ್ದು ಸುರಿಮಳೆಯೇ ಸೈ. ವಿಷಯವು ಚರ್ವಿತ ಚರ್ವಣ ಎನಿಸಿದರೂ, 'ತಪತೀ ಪರಿಣಯ' (ಸರಗೂರು ವೆಂಕಟವರ - ದಾಚಾರ್ಯ)ದಂಥ ನಾಟಕಗಳಲ್ಲಿ ನಾವೀನ್ಯವು ವ್ಯಕ್ತವಾಗಿದೆ. ಸಾಮಾಜಿಕ ನಾಟಕದ ಮೊದಲ ಮೊಗ್ಗುಗಳೆಂದು 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಮತ್ತು 'ಕನ್ಯಾ ವಿಕ್ರಯ' (ಏಕಕಾಲಕ್ಕೆ ಮುಂಬಯಿಯಿಂದ ಪ್ರಕಟಿತ, ೧೮೮೭) ಹಾಗೂ 'ಕಲಹ ಪ್ರಿಯಾ ಪ್ರಹಸನ'ವೆಂಬ ಅನುವಾದಿತ ಏಕಾಂಕ ಇವನ್ನೂ ಪರಿಗಣಿಸಬೇಕು. ಈ ಏಕಾಂಕದ ಅನುವಾದಕರಾದ ಬೆನಗಲ್ ರಾಮರಾಯರು ಅದನ್ನು ಅಭಿಪ್ರಾಯಾರ್ಥವಾಗಿ ಮುದ್ದಣನಿಗೆ ಕಳಿಸಿಕೊಟ್ಟಿದ್ದರು.

ಇತ್ತ ಶಾಸನಗಳ ಪರಿಶೋಧನೆಯ ಫಲವಾಗಿ ಕರ್ನಾಟಕ ಇತಿಹಾಸದ ರೂಪುರೇಖೆಗಳು ದಟ್ಟವಾಗಿ ರೂಪಿತವಾಗಿದ್ದುವು. ಪ್ರಪಂಚದ ಹಾಗೂ ಭಾರತದ ಇತರ ಪ್ರದೇಶಗಳ ಪರಿಚಯವಾದದ್ದರ ಫಲವಾಗಿ ರಾ. ಹ. ದೇಶಪಾಂಡೆ ಮುಂತಾದವರು ಚರಿತ್ರ ಗ್ರಂಥಗಳನ್ನು

ಬರೆದರು. ಎಂ.ಎಸ್. ಪುಟ್ಟಣ್ಣ ಅವರ ಕಾಂಪ್ರೂಷನ ಚರಿತ್ರೆಯು ಇಂದಿಗೂ ಪ್ರಗತಿಪರ ಬರಹವಾಗಿ ನಿಲ್ಲಬಲ್ಲುದು. ಆಧುನಿಕ ವಿಜ್ಞಾನದ ವಿಷಯಗಳನ್ನು ಸಹ ಆರಿಸಿಕೊಂಡು ಕನ್ನಡ ಲೇಖಕರು ಗ್ರಂಥಗಳನ್ನು ಬರೆದಿದ್ದಾರೆ.

ಗದ್ಯದ ಕೃಷಿಯು ನಿಜವಾಗಿ ನಡೆದದ್ದು ಪತ್ರಿಕೆಗಳ ಮೂಲಕ. ಕನ್ನಡದ ಮೊತ್ತ ಮೊದಲಿನ ಪತ್ರಿಕೆಯ ಜನ್ಮ ವರ್ಷವು ೧೮೪೩ರಷ್ಟು ಹಳೆಯದು. ಪತ್ರಿಕಾ ವ್ಯವಸಾಯವು ಮೊದಲಾದದ್ದು ೧೮೬೦ರಿಂದ. ಮಿಶನರಿ ಜನರ 'ಅರುಣೋದಯ', 'ಸಭಾಪತ್ರ', 'ವೃತ್ತಾಂತ ಚಿಂತಾಮಣಿ'ಗಳು, ಭಾಷ್ಯಂ, ಎಮ್. ವೆಂಕಟಕೃಷ್ಣಯ್ಯ ಹಾಗೂ ವೆಂ. ರಂ. ಕಟ್ಟಿ ಜನಜಾಗೃತಿಯ ದೃಷ್ಟಿಯಿಂದ ಹೊರಡಿಸುತ್ತಿದ್ದ ಪತ್ರಿಕೆಗಳು; ರಾಜಕೀಯ ಪ್ರಜ್ಞೆಯನ್ನು ಆಳವಾಗಿ ಮೈಗೂಡಿಸಿಕೊಂಡಿದ್ದ 'ಹವ್ಯಕ ಸುಬೋಧ' ಹಾಗೂ 'ಕನ್ನಡ ಸುವಾರ್ತೆ' ಎಂಬ ಮುಂಬಯಿ ಪತ್ರಿಕೆಗಳು, ಧಾರವಾಡದ 'ಚಂದ್ರೋದಯ' - ಇವೆಲ್ಲ ಗದ್ಯದ ಹಾದಿಯನ್ನು ಸುಭದ್ರವಾಗಿ ನೆಲೆಗೊಳಿಸಿದ್ದುವು. ನೇರವಾದ ಪ್ರಾಸಾದಿಕ ಗದ್ಯವು ಲೇಖಕನ ವಿಚಾರಕ್ಕೆ ಸೂಕ್ತವಾಹಿನಿ ಯಾಗುವಲ್ಲಿ, ೧೮೬೦ - ೧೯೬೦ರ ಕಾಲಾವಧಿಯ ಮೇಲ್ಕಂಡ ಪತ್ರಿಕೆಗಳು ಸಲ್ಲಿಸಿದ ಸೇವೆಯು ಅನುಪಮವಾದುದು.

ಹೊಸಗನ್ನಡ ಸಾಹಿತ್ಯದ ಅಧಿಕೃತ ನಿದರ್ಶನವಾದ ಕಾದಂಬರಿಯು ಮುದ್ರಣನಿಗಿಂತ ತುಸು ಪೂರ್ವದ ಕಾಲದಲ್ಲಿ ತಲೆದೋರಿತು. ಅದಕ್ಕಿಂತ ೩೦-೪೦ ವರ್ಷಗಳಿಗೆ ಮುಂಚೆ ಪುರಾಣ ಕಥೆಗಳು, ಬೇತಾಳ ಕತೆಗಳು, ಸಂಸ್ಕೃತ ಇಂಗ್ಲಿಷ್ ನಾಟಕಗಳ ಕಥನ ರೂಪಗಳು ಪ್ರಕಟವಾಗಿ ಜನರಲ್ಲಿ ವಾಚನಾಭಿರುಚಿಯನ್ನು ಕುದುರಿಸಿದ್ದುವು. ಕಾದಂಬರಿ ರೂಪದಲ್ಲಿ ಮೊದಲು ಹೊರಬಂದದ್ದು ರಾಬಿನ್‌ಸನ್ ಕ್ರುಸೋ ಕಥೆ(೧೮೫೭). ತುರಮುರಿಯವರು ಬಾಣ ಕಾದಂಬರಿಯನ್ನು ೧೮೭೫ರಲ್ಲಿ ಹೊರತಂದರು. ಇಲ್ಲಿರುವುದು ಅದೆಂಥ ಹೃದ್ಯವಾದ ಹೊಸಗನ್ನಡ! ಬಾಣನ ಕ್ಲಿಷ್ಟವಾದ ಗದ್ಯವನ್ನು ಇಷ್ಟೊಂದು ಸುಲಭಗೊಳಿಸಿ ಹೇಳ ಸಾಧ್ಯವೆಂಬುದನ್ನು ನಂಬುವುದು ಸಹ ಕಷ್ಟವಾಗುತ್ತದೆ. ಆಗ ಹೊಸಗನ್ನಡ ಕಥನ ಗದ್ಯವು ನೆಲೆಗೊಂಡಿರಲೇ ಇಲ್ಲವೆಂಬುದನ್ನು ನೆನೆಯತಕ್ಕುದು.

ಬಂಗಾಲಿ ಕಾದಂಬರಿಗಳು ಬಿ. ವೆಂಕಟಾಚಾರ್ಯರ ಮೂಲಕ ಕನ್ನಡದಲ್ಲಿ ಬಂದ ವಿಷಯವು ಎಲ್ಲರಿಗೂ ತಿಳಿದ ಸಂಗತಿ. ಮುದ್ದಣನು ಕಂಡಿದ್ದ, ಓದಿರಬಹುದಾದ ಕೃತಿಗಳು: ಭ್ರಾಂತಿ ವಿಲಾಸ (೧೮೭೬); ಶಾಕುಂತಲ ಕಥೆ (೧೮೮೨); ಸೀತಾವನವಾಸ (೧೮೮೪); ದುರ್ಗೇಶ ನಂದಿನಿ (೧೮೮೫); ರಾಧಾರಾಣಿ (೧೮೯೧) ಮತ್ತು ಮನೋರಮೆ (೧೮೯೩)

- ಈ ಕೆಲವು ಮಾತ್ರ. ಬಿ. ವೆಂಕಟಾಚಾರ್ಯರ ಅನುವಾದಗಳಲ್ಲಿ ಪ್ರಸಿದ್ಧ ಕೃತಿಗಳಾದ ಆನಂದ ಮಠ, ದೇವಿ ಚೌಧುರಾಣಿ, ವಿಷವೃಕ್ಷ, ಇಂದಿರಾ, ರಜನಿ ಮುಂತಾದ ಕೃತಿಗಳು ಮುದ್ದಣನ ಕೃತಿರಚನೆಯ ಅನಂತರ ಪ್ರಕಟವಾಗಿವೆ.*

* ಅದರಂತೆ ತೆಲುಗು ಕಾದಂಬರಿಗಳಾದರೂ ೧೯೫೫ರಿಂದ ಅನಂತರ ಅನುವಾದಗೊಂಡಿದೆ.

ಇನ್ನು ಸ್ವತಂತ್ರ ಕಾದಂಬರಿಗಳು ಕೂಡ ಮುದ್ದಣನಿಗಿಂತ ಪೂರ್ವದಲ್ಲಿ ಕಾಣಿಸಿಕೊಂಡಿವೆ. ಗೋವಿಂದ ಪೈಯವರು ಆದ್ಯ ಕನ್ನಡ ಕಾದಂಬರಿಯೆಂದು ಕರೆದ ಕೃತಿಯೇ 'ಕಲಾವತಿ ಪರಿಣಯ'. ಕ್ರಿ.ಶ. ೧೮೧೦ರ ಸುಮಾರಿಗೆ ರಚಿತವಾದ ಈ ಕೃತಿಯ ಗದ್ಯವು ಮುದ್ದಣನದಕ್ಕೆ ಸಮೀಪವರ್ತಿಯಾಗಿದೆ. ಅದೇ ೧೮೩೩ರ ಸುಮಾರಿಗೆ ರಚಿತವಾದ, ಮುಮ್ಮಡಿ ಕೃಷ್ಣರಾಜರ 'ಸೌಗಂಧಿಕಾ ಪರಿಣಯ', ಕೆಂಪುನಾರಾಯಣನ ' ಮುದ್ರಾಮಂಜೂಷ' ಹೊಸಗನ್ನಡ ಗದ್ಯದ ನಡೆಯನ್ನು ಬೆಂಬಲಿಸಿವೆ. ಸಂಪೂರ್ಣವಾಗಿ ಹೊಸಗನ್ನಡ ಗದ್ಯದಲ್ಲಿದ್ದ ಪ್ರಥಮ ಸ್ವತಂತ್ರ ಕಾದಂಬರಿ 'ಸೂರ್ಯಕಾಂತ' ಎಂಬುದು ೧೮೯೨ರಲ್ಲಿ ಪ್ರಕಟವಾಯಿತು. ವಿವರಗಳು ಈ ಲೇಖಕನ 'ಹೊಸಗನ್ನಡ ಅರುಣೋದಯ'ದಲ್ಲಿವೆ. (ಪ್ರಕಟನೆ ೨೦೦೦)

ಹೀಗೆ ಮುದ್ದಣನಿಗಿಂತ ಪೂರ್ವದಲ್ಲಿ ಹೊಸಗನ್ನಡ ಸಾಹಿತ್ಯವು ಸ್ಪಷ್ಟವಾಗಿ ನೆಲೆಗೊಂಡಿದ್ದಿತು; ನಾಡಿನ ಎಲ್ಲ ಭಾಗಗಳಲ್ಲಿಯೂ ಅದರ ಕೃಷಿ ನಡೆದಿದ್ದಿತು. ಆದರೆ ಮುದ್ದಣನು ಎಷ್ಟರ ಮಟ್ಟಿಗೆ ಇದನ್ನು ಗ್ರಹಿಸಿದ್ದನು? ಅದೆಷ್ಟು ಮಟ್ಟಿಗೆ ಪ್ರಭಾವಿತನಾಗಿದ್ದನು? ವ್ಯಾಯಾಮ ತರಬೇತಿಗಾಗಿ ಮದ್ರಾಸ್ ನಗರಕ್ಕೆ, ಮಾವನ ಮನೆಯೆಂಬ ಕಾರಣದಿಂದ ಶಿವಮೊಗ್ಗ ಜಿಲ್ಲೆಯ ಕಾಗೆಕೋಡಮಗ್ಗಿ ಗ್ರಾಮಕ್ಕೆ ಹೋದದ್ದನ್ನು ಬಿಟ್ಟರೆ, ಮುದ್ದಣನು ದಕ್ಷಿಣ ಕನ್ನಡ ಜಿಲ್ಲೆಯ ಹೊರಗೆ ಕಾಲಿಟ್ಟಿದ್ದರ ಉಲ್ಲೇಖಗಳಿಲ್ಲ. ಅವನ ಮೇಲೆ ಪರಿಸರದ ಪ್ರಭಾವ ಬಿದ್ದುದಾದರೆ ಅದು ಆ ಜಿಲ್ಲೆಯದೇ. ಆದಕಾರಣ ಆಗಿನ ದಕ್ಷಿಣ ಕನ್ನಡ ಜಿಲ್ಲೆಯ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ವಾತಾವರಣ ಹೇಗಿದ್ದಿತೆಂಬುದನ್ನು ತಿಳಿಯೋಣ.

ಮುದ್ದಣನ ಮೇಲೆ ಗಾಢವಾಗಿ ಪರಿಣಾಮ ಮಾಡಿದ ಜಿಲ್ಲೆಯ ವಿವಿಧ ಸಾಂಸ್ಕೃತಿಕ ಸ್ತರಗಳಲ್ಲಿ ಯಕ್ಷಗಾನಕ್ಕೆ ಅಗ್ರಪಟ್ಟ. ಹದಿನಾರನೆಯ ಶತಮಾನದ ಪಾರಂಬಳ್ಳಿಯ ವಿಷ್ಣುವಿನಿಂದ ಮೊದಲ್ಗೊಂಡು, ನಗಿರೆಯ ಸುಬ್ಬ, ದೇವಿದಾಸ, ಧ್ವಜಪುರದ ನಾಗಪ್ಪಯ್ಯ, ಪಾರ್ತಿ ಸುಬ್ಬ, ಅಜಪುರದ ವೆಂಕಟ, ಹಟ್ಟಿಯಂಗಡಿ ರಾಮಭಟ್ಟ ಮೊದಲಾದ ಯಕ್ಷಗಾನ ಕವಿಗಳು ಅನೇಕ ಪ್ರಸಂಗಗಳನ್ನು ರಚಿಸಿ ರಂಗಪ್ರಯೋಗಕ್ಕೆ ಅನುಕೂಲ ಮಾಡಿಕೊಟ್ಟು ಈ ಜಾನಪದ ಕಲೆಯನ್ನು ಶ್ರೀಮಂತವಾಗಿಸಲು ಕಾರಣರಾದರು. ಹದಿನೆಂಟನೆಯ ಶತಮಾನದ ಅಂತ್ಯದ ಹೊತ್ತಿಗೆ ಮುಖ್ಯವಾದ ಎಲ್ಲ ಕಥಾನಕಗಳು ರಂಗಸ್ಥಳದ ಮೇಲೆ ಬಂದಿದ್ದುವು. ಮುಂದಿನ ೧೯ನೆಯ ಶತಮಾನವು ಯಕ್ಷಗಾನ ಸಾಹಿತ್ಯದ ವಿಸ್ತಾರ ಕಾಲವೆನ್ನಬಹುದು. ಎರಡೂ ಕನ್ನಡ ಜಿಲ್ಲೆಗಳನ್ನು ದಾಟಿ ಮೈಸೂರು ಸಂಸ್ಥಾನದಲ್ಲಿಯೂ ಅದು ಹಬ್ಬಿದುದರ ಫಲವಾಗಿ, ಅಳಿಯ ಲಿಂಗರಾಜ ಮತ್ತು ವೀರನಗೆರೆ ಪುಟ್ಟಣ್ಣ ಮೊದಲಾದವರು ಬಹುಸಂಖ್ಯೆಯಲ್ಲಿ ಯಕ್ಷಗಾನ ಪ್ರಸಂಗಗಳನ್ನು ರಚಿಸಿದರು.

ಯಕ್ಷಗಾನ ಕವಿಗಳಲ್ಲಿ ಅನೇಕರು ಶ್ರೀಸಾಮಾನ್ಯರು. ರಾಮಾಯಣಾದಿ ಪುರಾಣಗಳ ಕಥಾಂಶ ಹಾಗೂ ಅವುಗಳಲ್ಲಿಯ ನೀತಿಬೋಧೆಯನ್ನು ಕೇಳಿಯೇ ತಿಳಿದವರು. ಕನ್ನಡದಲ್ಲಿ ಅವರ ಕಾವ್ಯ ವ್ಯಾಸಂಗವು ಕುಮಾರವ್ಯಾಸ, ಲಕ್ಷ್ಮೀಶ, ಕುಮಾರ ವಾಲ್ಮೀಕಿ, ಚಾಟುವಿಠಲ

ಮೊದಲಾದ ಕವಿಗಳಿಗೆ ಪರಿಮಿತವಾದುದು. ಅವರ ಸ್ಫೂರ್ತಿವಿಶೇಷವೆಂದರೆ ತಮಗಿಂತ ಹಿಂದಿನವರ ಯಕ್ಷಗಾನ ಪ್ರಯೋಗಗಳೇ ಸೈ. ಇದಿಷ್ಟೆ ಸಾಧನ ಸಂಪತ್ತಿಯಿಂದ ಮುದ್ದಣನ ಕಾಲದ ವರೆಗೆ ೪೦೦ಕ್ಕೆ ಮಿಕ್ಕ ಯಕ್ಷಗಾನ ಕೃತಿಗಳು ಹುಟ್ಟಿಕೊಂಡಿವೆ.

ಯಕ್ಷಗಾನ ಕಥಾನಕಗಳಲ್ಲಿ ವೀರ, ಶೃಂಗಾರ ರಸಗಳೇ ಪ್ರಧಾನ. ಆದ್ದರಿಂದ ಪ್ರಚಲಿತ ಪುರಾಣಗಳಲ್ಲಿ ಯುದ್ಧದ ಹಾಗೂ ಪರಿಣಯದ ಸಂದರ್ಭಗಳೇ ಕಥಾವಸ್ತುಗಳಾಗಬಲ್ಲವು. ಯಕ್ಷಗಾನ ಕವಿಗಳ ಪ್ರತಿಭೆ ಅರಳುವುದಕ್ಕೆ ಈವೊಂದು ಪರಿಮಿತಿಯಿದ್ದುದರಿಂದ ಒಂದೇ ಕಥಾನಕವನ್ನು ಐದಾರು ಜನ ಪ್ರಸಂಗಕಾರರು ಬೇರೆ ಬೇರೆಯಾಗಿ ಬರೆದದ್ದೂ ಮೇಲೆ ಹೇಳಿದ ಹಿರಿಯ ಕನ್ನಡ ಕವಿಗಳ ಭಾವಗಳನ್ನು ಇದ್ದುದಿದ್ದಂತೆ ಸ್ವೀಕರಿಸಿದುದೂ ಕಂಡು ಬರುತ್ತದೆ.

ಈ ವಿಸ್ತಾರದ ಕಾಲದಲ್ಲಿ ಕಸ ಕಡ್ಡಿಗಳಿಗೂ ಕಳಪೆಗಳಿಗೂ ಕೊರತೆಯಿರಲಿಲ್ಲ. ಪೌರಾಣಿಕ ಕತೆಗಳು ಮಾತ್ರವೆ ಏಕೆ, ಯಾವ ಕಥಾ ವಸ್ತುವೂ ಆದೀತು ಎಂಬ ಮನೋಭಾವ ಬೆಳೆಯಿತು. ಅಂಥ ಪ್ರಸಂಗಗಳು ಬಯಲಾಟಕ್ಕೆ ಯೋಗ್ಯವಾದವೆ - ಎಂಬುದನ್ನು ಗಮನಿಸದೆ ಯಕ್ಷಗಾನ ರೂಪದಲ್ಲಿ ಕೃತಿ ರಚನೆಯಾಗತೊಡಗಿತು. ಇದರ ಒಂದು ಅತಿರೇಕವೆಂದರೆ, ಕಾರ್ಕಳದಲ್ಲಿ ಸಬ್‌ರಿಜಿಸ್ಟ್ರಾರ್ ಆಗಿದ್ದವರೊಬ್ಬರು ೧೮೭೭ರಲ್ಲಿ ವಿಕ್ಟೋರಿಯಾ ರಾಣಿಯ ಜ್ಯುಬಿಲಿ ಮಹೋತ್ಸವವನ್ನು ಯಕ್ಷಗಾನದಲ್ಲಿ ವರ್ಣಿಸಿದುದು! ಅದರ ಪದವೈಖರಿಗೆ ಇದೊಂದು ಮಾದರಿ:

ಮತ್ತಕಾಸಿನಿ ಶ್ರೇಣಿ -<br>
ಗುತ್ತಮದ ಕಟ್ಟಾಣಿ<br>
ವಿಕ್ಟೋರಿಯಾ ರಾಣಿ<br>
ನಿತ್ಯಕಲ್ಯಾಣೀ

ಇಂಥ ಕೃತಿಗಳ ಮುದ್ರಣವೂ ಅಷ್ಟೇ ಅಬದ್ಧವಾಗಿದ್ದಿತು. ಎಂತಲೇ ಬೆನಗಲ್ ರಾಮರಾಯರು ಮುದ್ದಣನ 'ಕುಮಾರ ವಿಜಯ'ವು ತಮಗೆ ಏಕೆ ಹಿಡಿಸಿತೆಂಬುದರ ಕಾರಣ ಕೊಡುವಾಗ ಹೀಗೆ ವಿವರಿಸಿದ್ದಾರೆ:

> ಸಾಮಾನ್ಯತಃ ಯಕ್ಷಗಾನ ಪ್ರಸಂಗದ ಪುಸ್ತಕಗಳು 'ಬಜಾರೀ ನಾಟಕ'ದ ಪುಸ್ತಕದ ಹಾಗೆಯೇ ಕೆಟ್ಟ ಕಾಗದದ ಮೇಲೆ ನೂರಾರು ತಪ್ಪುಗಳೊಡನೆ (ಆದರೆ 'ಪಂಡಿತರಿಂ ಪರಿಷ್ಕರಿಸಲ್ಪಟ್ಟು' ಎಂಬ ಮಾತನ್ನು ರಕ್ಷಾಪತ್ರದ ಮೇಲೆ ಹಾಕಲು ಮರೆಯದೆ) ಕಣ್ಣು ಬೇನೆ ತರತಕ್ಕ ವೊಳೆಗಳಿಂದ ಅಚ್ಚು ಹಾಕಲ್ಪಡುತ್ತಿದ್ದವು. ಅಂದವಾಗಿಯೂ ಶುದ್ಧವಾಗಿಯೂ ಒಳ್ಳೆಯ ಕಾಗದದ ಮೇಲೂ ಮುದ್ರಿತವಾದ ಯಕ್ಷಗಾನ ಪುಸ್ತಕಗಳೊಳಗೆ ನಾನೂ ನನ್ನ ಮಿತ್ರ ಮಂಡಲಿಯವರೂ ನೋಡಿದ ಮೊದಲನೆಯದು 'ಕುಮಾರ ವಿಜಯ'ವೇ ಸರಿ.

ಮುದ್ದಣನಿಗಿಂತ ಒಂದೆರಡು ತಲೆಮಾರಿನಷ್ಟು ಹಿಂದಣ ಪ್ರಸಿದ್ಧ ಯಕ್ಷಗಾನ

ಕವಿಗಳೆಂದು ಕಲ್ಯಾಣಿಯ ಭೀಮ, ಮಟ್ಟಿ ವಾಸುದೇವ ಪ್ರಭು, ಮಯ್ಯವಟಿಯ ವೆಂಕಟರಮಣ, ವಿಟ್ಲದ ಭಾಗವತ ಸಂಕಯ್ಯ ಮತ್ತು ಮೂಲ್ಕಿ ರಾಮಕೃಷ್ಣಯ್ಯ - ಇವರನ್ನು ಹೆಸರಿಸಬೇಕು. ಇವರಲ್ಲಿ ಮಯ್ಯವಟಿ ವೆಂಕಟರಮಣಯ್ಯನು ಅದಾಗಲೇ ಶೂರಪದ್ಮಾಸುರ ಕಾಳಗವನ್ನು (ಕುಮಾರ ವಿಜಯದ್ದೇ ಕಥೆ) ಬರೆದಿದ್ದನು. ಅಲ್ಲದೆ ಮುದ್ದಣನು ಅದ್ಭುತರಾಮಾಯಣದಲ್ಲಿ ಮತ್ತು ರಾಮಾಶ್ವಮೇಧದಲ್ಲಿ ಎತ್ತಿಕೊಂಡ ಕಥೆಗಳನ್ನು ಉತ್ತರ ಕನ್ನಡ ಜಿಲ್ಲೆಯ ವಿಷ್ಣು ಸಭಾಹಿತನು 'ಶತಾಸ್ಯ ರಾವಣ ಕಾಳಗ' ಮತ್ತು 'ರಾಮಾಶ್ವಮೇಧ ಯಾಗ' ಎಂಬ ತನ್ನ ಯಕ್ಷಗಾನ ಕೃತಿಗಳಲ್ಲಿ ತಂದದ್ದನ್ನೂ ಇಲ್ಲಿ ಪ್ರಾಸಂಗಿಕವಾಗಿ ನೆನೆಯಬೇಕು. ಮೇಲಣ ಯಕ್ಷಗಾನ ಕೃತಿಗಳನ್ನು ಮತ್ತು ಅವುಗಳ ಪ್ರಯೋಗಗಳನ್ನು ಮುದ್ದಣನು ಬಹ್ವಂಶವಾಗಿ ಗಮನಿಸಿಯೆ ಇದ್ದನು.

ಈ ಸಂದರ್ಭದಲ್ಲಿ ಎತ್ತಿ ಹೇಳಬೇಕಾದ ಹೆಸರೆಂದರೆ ಗೆರಸೊಪ್ಪೆ ಶಾಂತಯ್ಯನದು. ಪಾಶ್ಚಾತ್ಯ ಶಿಕ್ಷಣವನ್ನು ಹೊಂದಿ ನ್ಯಾಯಾಧೀಶ ಹುದ್ದೆಯಲ್ಲಿದ್ದರೂ ಯಕ್ಷಗಾನವೆಂದರೆ ಅವನಿಗೆ ಪಂಚಪ್ರಾಣ. ಅವನು ಪ್ರೌಢ ಗ್ರಂಥಗಳ ವ್ಯಾಸಂಗ ಮಾಡಿದ್ದನು. ಜೊತೆಗೆ ರಾಗ, ಮಟ್ಟುಗಳಲ್ಲಿ ಸಾಕಷ್ಟು ಪರಿಣತಿಯನ್ನು ಹೊಂದಿದ್ದನು. ಅವನು ರಚಿಸಿದ ಪ್ರಸಂಗಗಳಲ್ಲಿ 'ಕರ್ಣಪರ್ವ' ಹಾಗೂ 'ರಾವಣದಿಗ್ವಿಜಯ'ಗಳು ಹೆಚ್ಚು ಜನಪ್ರಿಯವಾಗಿವೆ. 'ರಾವಣ ದಿಗ್ವಿಜಯ'ವು ೧೮೪೮ರಷ್ಟು ಹಿಂದೆ ಮುದ್ರಿತವಾಯ್ತು. ಇದರ ಹಾಗೂ ಸೀತಾ ವಿಯೋಗ, ರಾವಣಸಂಹಾರಗಳೆಂಬ ಪ್ರಸಂಗಗಳ ಕಥಾವಸ್ತುವನ್ನು ಶಾಂತಪ್ಪಯ್ಯನು ಪ್ರಾಕೃತ ರಾಮಾಯಣದಿಂದ ಆಯ್ದುಕೊಂಡಿದ್ದಾನೆ. ಹೊಸ ಹೊಸ ಆಕರಗಳನ್ನು ಹುಡುಕುವ ಪ್ರವೃತ್ತಿಯು ಮುದ್ದಣನಂತೆ ಇನ್ನೂ ಹಲವರಿಗೆ ಇದ್ದಿತೆಂಬುದರ ನಿದರ್ಶನವಿದು. ತನ್ನ ಕವಿತ್ವ ರಚನೆಯಲ್ಲಿ ಶಾಂತಪ್ಪಯ್ಯನು ಕುಮಾರವ್ಯಾಸನಿಂದ ಭಾವಗಳನ್ನು ಸ್ವೀಕರಿಸಿದ್ದರೂ ಅವುಗಳಿಗೆ ಹೊಸ ಮೆರುಗನ್ನು ತಂದುಕೊಟ್ಟಿರುವ ಎಷ್ಟೋ ಉದಾಹರಣೆಗಳು ಸಿಕ್ಕುತ್ತವೆ. ಮುದ್ದಣನಾದರೂ ಇದೇ ಬಗೆಯ ಕಲಾವಂತಿಕೆಯನ್ನು ತೋರಿದ್ದಾನೆ.

ಆಗಿನ ದಕ್ಷಿಣ ಕನ್ನಡ ಜಿಲ್ಲೆಯ ಇನ್ನೊಂದು ಪ್ರಭಾವಪೂರ್ಣ ವಲಯವೆಂದರೆ ಕ್ರೈಸ್ತ ಮತೀಯರದು. ಸುಪ್ರಸಿದ್ಧ ಬಾಸೆಲ್ ಮಿಶನ್‌ದವರು ೧೮೩೪ರಲ್ಲಿ ಮಂಗಳೂರಿಗೆ ಬಂದು, ಸ್ವಮತ ಪ್ರಸಾರದಲ್ಲಿ ನಿರತರಾದರು. ಇವರ ಸಂಘಟನಾ ಶಕ್ತಿ, ಕಾರ್ಯನಿಷ್ಠೆಗಳು ಅತ್ಯಂತ ಗಣನೀಯವಾಗಿವೆ. ಮತಪ್ರಸಾರದ ಜೊತೆಗೆ ಶೈಕ್ಷಣಿಕ ಕಾರ್ಯ, ಮುದ್ರಣ, ಗ್ರಂಥ ಪ್ರಕಟನೆ ಕೈಕಸಬು - ಉದ್ದಿಮೆಗಳು - ಇವುಗಳ ವಿಚಾರದಲ್ಲಿ ಇತರ ಮಿಶನ್ ಸಂಸ್ಥೆಗಳಿಗಿಂತ ಮುಂದುವರಿದರು. ದ.ಕ. ಜಿಲ್ಲೆಯಲ್ಲಿ ಎಲ್ಲೆಡೆಗೆ ಪಸರಿಸಿದರಲ್ಲದೆ ಧಾರವಾಡ ಜಿಲ್ಲೆ ಮತ್ತು ಕೊಡಗು ಪ್ರದೇಶಗಳಲ್ಲಿಯೂ ಇವರು ಕೇಂದ್ರಗಳನ್ನು ಸ್ಥಾಪಿಸಿದರು. ಮುದ್ದಣನ ಕಾಲದವರೆಗೆ, ಎಂದರೆ ಅರ್ಧ ಶತಮಾನದ ಅವಧಿಯಲ್ಲಿ ಒಂದು ನೂರು ಜನ ಜರ್ಮನಿಗರು ಬಂದು ಇಲ್ಲಿಯ ವಿವಿಧ ಕೇಂದ್ರಗಳಲ್ಲಿ ಕಾರ್ಯನಿರತರಾಗಿದ್ದರು. ಇವರ ಗ್ರಂಥ ಮುದ್ರಣವು ಕಲ್ಲಚ್ಚಿನಿಂದ ಆರಂಭವಾಯಿತು (೧೮೪೨). ಕುಮಾರವ್ಯಾಸ ಭಾರತ, ಚೆನ್ನಬಸವ ಪುರಾಣ,

ಬಸವ ಪುರಾಣ, ಜೈಮಿನಿ ಭಾರತಗಳನ್ನು ಇವರೇ ಮೊದಲು ಪ್ರಕಾಶಪಡಿಸಿದರು. ಕ್ರಿ.ಶ. ೧೮೫೧ರಲ್ಲಿ ಬಿಡಿಮೊಳೆಗಳಿಂದ ಮುದ್ರಣ ಆರಂಭವಾದಾಗ ಇವರ ಗ್ರಂಥೋದ್ಯಮವು ನಾಲ್ಕಾರು ಭಾಷೆಗಳಿಗೆ ವಿಸ್ತರಿಸಿತು. ೧೯ನೆಯ ಶತಮಾನಾಂತ್ಯದ ಕಾಲಕ್ಕೆ ಅವರು ೨೦೦ಕ್ಕೆ ಮೇಲ್ಪಟ್ಟು ಗ್ರಂಥಗಳನ್ನು ಸಹಸ್ರಗಟ್ಟಲೆ ಪ್ರತಿಗಳ ಲೆಕ್ಕದಲ್ಲಿ ಹೊರತಂದಿದ್ದಾರೆ. ಅವುಗಳಲ್ಲಿ ಸಂಶೋಧನ ಗ್ರಂಥಗಳೂ ಇವೆ. ಲಿಪಿ ಸುಧಾರಣೆಗೂ ಅವರು ಮನಸ್ಸುಗೊಟ್ಟರು. ವಿದ್ಯಾಕ್ಷೇತ್ರದಲ್ಲಿಯ ಪ್ರಗತಿಯೂ ಅನುಪಮವಾಗಿದೆ. ಮಿಶನ್ನಿನ ಕ್ರಿ.ಶ. ೧೮೫೩ರ ವಾರ್ಷಿಕ ವರದಿಯ ಪ್ರಕಾರ ೫೦ ಪ್ರಾಥಮಿಕ ಶಾಲೆಗಳನ್ನು ೮ ಹೈಸ್ಕೂಲುಗಳನ್ನು ಅವರು ನಡೆಸುತ್ತಿದ್ದರು.

ಬಾಸೆಲ್ ಮಿಶನ್ನಿನ ಕಾರ್ಯಕರ್ತರಲ್ಲಿ ಎದ್ದು ಕಾಣುವ ಹೆಸರುಗಳೆಂದರೆ ಮೊಗ್ಲಿಂಗ್ ಮತ್ತು ಕಿಟೆಲ್. ಕ್ರಿ.ಶ. ೧೮೪೬ ರಿಂದ ೧೮೫೮ರವರೆಗೆ ಇಲ್ಲಿ ಮಿಶನರಿಯಾಗಿದ್ದ ಮೊಗ್ಲಿಂಗನೇ ಮೇಲೆ ಹೇಳಿದ ಪ್ರಾಚೀನ ಕಾವ್ಯಗಳನ್ನು ಪ್ರಕಟಿಸಿದನು. ಕನ್ನಡದ ಆದ್ಯ ಪತ್ರಿಕೆಯನ್ನು (ಮಂಗಳೂರು ಸಮಾಚಾರ) ಹೊರಡಿಸಿದವನು ಇವನೇ. ಕನ್ನಡ ವಾಙ್ಮಯ ವಿಚಾರದಲ್ಲಿ ನಿಜವಾದ ಆದರವಿದ್ದುದರಿಂದ ಆತನು ಜೈಮಿನಿ ಭಾರತವನ್ನು ಮತ್ತು ಅನೇಕ ದಾಸರ ಹಾಡುಗಳನ್ನು ಜರ್ಮನ್ ಭಾಷೆಗೆ ಪರಿವರ್ತಿಸಿದನು. ಕಿಟೆಲ್ಲರ ಕಾರ್ಯವು (೧೮೫೩- ೧೮೯೨) ಸುಪರಿಚಿತವಾದದ್ದೇ. ಅವರ ನಿಘಂಟು ರಚನೆಯನ್ನು ಬಿಟ್ಟರೂ ಕನ್ನಡ ಸಾಹಿತ್ಯ ರಂಗಕ್ಕೆ ಅವರಿಂದ ಸಂದ ಸೇವೆಯು ಕಡಿಮೆಯದೇನಲ್ಲ; ಅವರು ಶಾಸ್ತ್ರೀಯ ರೀತಿಯಿಂದ ಸಂಪಾದಿಸಿದ್ದ 'ಛಂದೋಂಬುಧಿ'(೧೮೭೨) ಮತ್ತು 'ಶಬ್ದಮಣಿದರ್ಪಣ' (೧೮೭೫)ಗಳು ಮುದ್ದಣನ ಬಲು ಬಳಕೆಯ ಗ್ರಂಥಗಳಾಗಿದ್ದುವು. ಅದರಂತೆ ಅವರ ಹಳಗನ್ನಡ ವ್ಯಾಕರಣ ಸೂತ್ರಗಳು' ಹಾಗೂ 'ಕರ್ನಾಟಕ ಕಾವ್ಯ ಮಂಜರಿ' ಇವು ಮುದ್ದಣನಂತಹ ಹಳಗನ್ನಡ ಅಭ್ಯಾಸಿಗಳಿಗೆ ಉಪಯುಕ್ತ ಗ್ರಂಥಗಳೆನಿಸಿದುವು. ವಿಶೇಷ ಬೆಳಕಿಗೆ ಬಾರದ ಅವರ ಕಾರ್ಯವೆಂದರೆ, ಪದ್ಯ ರಚನೆ - ಅದೂ ಷಟ್ಪದಿ, ಹಾಡುಗಳ ರೂಪದಲ್ಲಿ ಕನ್ನಡದ ಅ, ಆ ಕಲಿಯಲಾರಂಭಿಸಿದ ಏಳು ವರ್ಷಗಳಲ್ಲಿಯೇ ಇಂಥ ೫೦೦ ಪದ್ಯಗಳನ್ನು ರಚಿಸುವಷ್ಟು ಅವರು ಹಳಗನ್ನಡದಲ್ಲಿ ಪ್ರಾವೀಣ್ಯ ಪಡೆದಿದ್ದರು. ಮೇಲೆ ಹೇಲಿದಂತೆ ಲೌಕಿಕ ಸ್ವರೂಪದ ಕವಿತೆಗಳನ್ನೂ ರಚಿಸಿ ಮೊದಲಿಗನೆನಿಸಿದ್ದಾರೆ.

ಮುದ್ದಣನ ಕಾಲಕ್ಕೆ, ಸಂಖ್ಯಾಮಾನದಿಂದ ರೋಮನ್ ಕೆಥಲಿಕರೇ ದ.ಕ. ಪ್ರದೇಶದಲ್ಲಿ ಹೆಚ್ಚಿಗಿದ್ದರು. ಎಷ್ಟೆಂದರೂ ಅವರು ೧೦-೧೫ ತಲೆಮಾರಿನಿಂದ ಅಲ್ಲಿ ನೆಲೆಸಿದವರಾಗಿದ್ದು ಕೊಡಿಯಾಲಬೈಲ ಪ್ರೆಸ್ ಮೂಲಕ ಮುದ್ರಣ ಕಾರ್ಯದಲ್ಲಿ ತಕ್ಕ ಮಟ್ಟಿಗೆ ತೊಡಗಿದ್ದರು. ಮಂಗಳೂರಿನ ಸುವಿಖ್ಯಾತ ಸೇಂಟ್ ಅಲ್ಯೊಸಿಯಸ್ ಕಾಲೇಜು ಮತ್ತು ಮುದ್ದಣನು ಕನ್ನಡ ಮಾಸ್ತರನಾಗಿದ್ದ ಉಡುಪಿಯ ಕ್ರಿಶ್ಚಿಯನ್ ಹೈಸ್ಕೂಲು ಮಿಶನರಿಗಳ ಎತ್ತುಗಡೆಗಳಾಗಿವೆ.

ಇವೆರಡೂ ಕ್ರಿಶ್ಚಿಯನ್ ಸಂಸ್ಥೆಗಳಿಂದಾಗಿ ದ.ಕ. ಜಿಲ್ಲೆಯು ಶಿಕ್ಷಣ, ಗ್ರಂಥೋದ್ಯಮಗಳಲ್ಲಿ ಇತರ ಜಿಲ್ಲೆಗಳಿಗಿಂತ ಮುಂದಡಿ ಇಡುವಂತಾಯ್ತು. ಸಮಾಜ ಸುಧಾರಣೆಯ ವಿಚಾರದಲ್ಲಿಯೂ ಈ ಜಿಲ್ಲೆಯು ಮುಂದಡಿ ಇಟ್ಟಿದ್ದಿತು. ಸ್ತ್ರೀಯರ ಏಳ್ಗೆ, ಬಾಲ್ಯವಿವಾಹ ಖಂಡನೆ, ವಿಧವಾ ವಿವಾಹ ಮಂಡನೆ ಮೊದಲಾದವುಗಳ ಬಗ್ಗೆ, ಭಾರತದ ಇತರ ಪ್ರದೇಶಗಳಲ್ಲಿ ಆಂದೋಲನವೆದ್ದಾಗ ಇಲ್ಲಿಯ ಸಾರಸ್ವತ ಸಮಾಜದವರು ಅದನ್ನು ವಿಶೇಷವಾಗಿ ಬರಮಾಡಿಕೊಂಡರು. ಚಿತ್ರಾಪುರ ಸಾರಸ್ವತರು ಈ ವಿಷಯದಲ್ಲಿ ನಿರ್ದಿಷ್ಟ ಸೂಚನೆಗಳನ್ನು ತಮ್ಮ ಸ್ವಾಮಿಗಳೆದುರು ಮಂಡಿಸಿದರು; ಜಿಲ್ಲೆಯ ವಿವಿಧ ಊರುಗಳಲ್ಲಿ ಆ ಕುರಿತು ಚರ್ಚಿಸಿದರು(೧೮೮೪). ಈ ಚಳುವಳಿ, ಚರ್ಚೆಯ ಫಲವೇ ಗುಳವಾಡಿ ವೆಂಕಟರಾಯರು ಬರೆದ ಕನ್ನಡದ ಆದ್ಯ ಸ್ವತಂತ್ರ ಸಾಮಾಜಿಕ ಕಾದಂಬರಿ, 'ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ' (೧೮೯೯).

ಇಷ್ಟೆಲ್ಲ ಇದ್ದರೂ ಕನ್ನಡ ವಾಙ್ಮಯ ಕೃಷಿಯ ದೃಷ್ಟಿಯಿಂದ ದ.ಕ. ಜಿಲ್ಲೆಯು ಹಿಂದುಳಿದಿದ್ದಿತು. ಮಿಶನರಿಗಳದು ಹೆಚ್ಚಾಗಿ ಮತೀಯ ಸಾಹಿತ್ಯ ರಚನೆ. ಕನ್ನಡದಲ್ಲಿ ಕೃತಿರಚನೆ ಮಾಡಬೇಕು. ಅದರ ಅಭಿವೃದ್ಧಿಗಾಗಿ ಶ್ರಮಿಸಬೇಕು ಎಂಬ ಮನೋಭಾವದ ಜನ ಆ ಕಾಲಕ್ಕೆ ಕಡಿಮೆ ಇದ್ದರು. ಆ ಕಾಲವನ್ನು ಸ್ವತಃ ಕಂಡಿದ್ದ ಹುರಳಿ ಭೀಮರಾಯರು ಸೊಗಸಾಗಿ ವರ್ಣಿಸಿದ್ದಾರೆ.

"ಯಾರೇನು ಬರೆಯುತ್ತಿದ್ದಾರೆ ಎಂದು ಹೇಳ, ಕೇಳುವ ಕಾಲ ಅದಾಗಿರಲಿಲ್ಲ. ಆಗ ವಾಙ್ಮಯದಲ್ಲಿ ಅಂಥದೊಂದು ವಾತಾವರಣ ಕನ್ನಡಕ್ಕೆ ಪ್ರತ್ಯೇಕವಾಗಿ ಜಿಲ್ಲೆಯಲ್ಲಿ ಇರಲೇ ಇಲ್ಲ.... ವಿದ್ವತ್ತು, ಪ್ರತಿಭೆ, ಕವನಶಕ್ತಿ, ವಾಕ್‌ಸಂಪತ್ತು ಏನಿದ್ದರೂ ಅವೆಲ್ಲ ಉಡುಪಿಯ ಶ್ರೀ ಕೃಷ್ಣದೇವರ ಮಠದ ಸುತ್ತಮುತ್ತ ತನ್ನ ವ್ಯಾಪ್ತಿ ವರ್ಚಸ್ಸನ್ನು ಬೆಳೆಸಿಕೊಂಡು ಬಂದಿರುವ ಸಂಸ್ಕೃತವೊಂದಕ್ಕೆ ಮೀಸಲು. ಕನ್ನಡದಲ್ಲಿ ಇರುವುದಾದರೂ ಏನು, ಎಂಬ ಭಾವನೆ." ( ನಡೆದು ಬಂದ ದಾರಿ ೩)

ಪಂಜೆ ಮಂಗೇಶರಾಯರೂ ಆ ಕಾಲವನ್ನು ಕಂಡವರೇ; "ನಮ್ಮ ಜಿಲ್ಲೆಯೊಳಗಣ ಕನ್ನಡ ಪಾಂಡಿತ್ಯವು ಗೆರಸೊಪ್ಪೆ ಶಾಂತಯ್ಯ, ಪಾರ್ತಿಸುಬ್ಬಯ್ಯ ಎಂಬವರ ಯಕ್ಷಗಾನ ಪ್ರಸಂಗಗಳ ಅರ್ಥಾನುವಾದಗಳಲ್ಲಿಯೂ ವಿಸ್ತರವಿವರಣೆಗಳಲ್ಲಿಯೂ ವಿಜೃಂಭಿಸುತ್ತಿತ್ತು. ಕವಿತಾ ಪ್ರೌಢಿಮೆಯು 'ಮಧುರ ಝುರಿ'ಯ ತರಂಗದಲ್ಲಿ ತೇಲಾಡದೇ ಪ್ರಾಸವೈಚಿತ್ರ್ಯದ ರಾಟೆಯಲ್ಲಿ ತಲೆ ತಿರುಗುವಂತೆ ಉರುಳುತ್ತಿತ್ತು. ಮೈಸೂರಿನ ಬಿ. ವೆಂಕಟಾಚಾರ್ಯರ ಒಂದೆರಡು ಕಾದಂಬರಿಗಳು ಉಡುಪಿಯಲ್ಲಿ ನುಸುಳಿಕೊಂಡಿದ್ದರೂ ಅವು...ಜನಪ್ರೀತವಾಗಿರಲಿಲ್ಲ. ನಮ್ಮ ಜಿಲ್ಲೆಯೊಳಗಿನ ನಾಟ್ಯರಂಗವು ಬಸವಪ್ಪಶಾಸ್ತ್ರಿ ಕೃತ ಕನ್ನಡ ಶಾಕುಂತಳ ನಾಟಕಕ್ಕೆ ಎಡೆಗೊಡದೆ, ಅಣ್ಣಾಜಿ ಕಿರ್ಲೋಸ್ಕರರ ಮರಾಠೀ ನಾಟಕಗಳಿಂದ ಆಕ್ರಮಿಸಲ್ಪಟ್ಟಿತ್ತು...ಕನ್ನಡ ವಾರ್ತಾಪತ್ರಗಳಲ್ಲಿ 'ಸುದರ್ಶನ'ವೆಂಬ ಹೆಸರುಳ್ಳ ಉಡುಪಿಯ ಒಂದು ಮಾಸ ಪತ್ರಿಕೆಯು ಮೂರು ತಿಂಗಳುಗಳಿಗೆ ಒಂದು ಸಲ ಅರೆಜೀವದಿಂದ ಹೊರಡುತ್ತಿತ್ತು."

ಇಂತು ಮುದ್ದಣನಿಗಿಂತ ಪೂರ್ವದಲ್ಲಿ ಶ್ರೇಷ್ಠ ಕವಿ ಅಥವಾ ಸೃಜನಶೀಲ ಲೇಖಕ ಎಂದು ಹೆಮ್ಮೆಯಿಂದ ಹೇಳಬಹುದಾದ ಯಾವ 'ದಕ್ಷಿಣ ಕನ್ನಡಿಗ'ನೂ ಇರಲಿಲ್ಲ. ಇದಕ್ಕೆ ಒಂದೇ ಒಂದು ಅಪವಾದವೆಂದರೆ ಮೂರು ಶತಮಾನಗಳಿಗೆ ಹಿಂದಿನವನಾದ ರತ್ನಾಕರವರ್ಣಿ. ಅವನ ಅನಂತರದ ಹೆಸರು ಮುದ್ದಣನದೇ. ಆದುದರಿಂದ 'ಕನ್ನಡ ಸಾಹಿತ್ಯ ಕತ್ತಲೆಯ ಕಾಲ' ವೆಂಬುದು ದಕ್ಷಿಣ ಕನ್ನಡ ಜಿಲ್ಲೆಗೆ ಸೀಮಿತವಾಗಿ, ಮುದ್ದಣನು ಅದರ 'ಪ್ರಭಾತ ರವಿ' ಎಂಬುದು ಅನ್ವರ್ಥಕವಾಗುತ್ತದೆ.

ಆದರೆ ದಕ್ಷಿಣ ಕನ್ನಡ ಜಿಲ್ಲೆಗೆ ಮಾತ್ರ! ಅಖಿಲ ಕರ್ನಾಟಕ ಮಟ್ಟದಲ್ಲಿ ಕತ್ತಲೆ ಇರಲಿಲ್ಲ. ಪಾಶ್ಚಾತ್ಯ ವಿಚಾರ ಸರಣಿಯಿಂದ ಪ್ರಭಾವಿತವಾದ ನವೋದಯ ಸಾಹಿತ್ಯವು ಅಲ್ಲೆಲ್ಲ ಹಬ್ಬಿತ್ತು. ಮುದ್ದಣನು ಆ ಪ್ರಭಾವಕ್ಕೆ ಸಿಲುಕಲಿಲ್ಲ ಮತ್ತು ಆ ಬಗೆಯ ಸಾಹಿತ್ಯ ರಚನೆಗೆ ಮನಸ್ಸು ಮಾಡಲಿಲ್ಲ. ಆ ಕಾಲದ ಹರಿದಾಸರು, ಕವಯಿತ್ರಿಯರು, ಯಕ್ಷಗಾನ ಕವಿಗಳು ಕೂಡ ಪಾಶ್ಚಾತ್ಯ ಪ್ರಭಾವದ ಪಡಿನೆಳಲು ತಮ್ಮ ಕೃತಿಗಳಲ್ಲಿ ಕಾಣುವುದಕ್ಕೆ ಅವಕಾಶ ಕೊಡಲಿಲ್ಲ; ೧೬ನೆಯ ಶತಮಾನದಲ್ಲಿ ಬಾಳಿದವರಂತೆ ಕೃತಿ ರಚನೆ ಮಾಡಿದರು. ಮುದ್ದಣನು ಇವರ ಸಾಲಿಗೇ ಸೇರಿಕೊಂಡು ಹಳಗನ್ನಡ ಸಾಹಿತ್ಯ ಮಾರ್ಗಕ್ಕೆ ಕೊನೆಯವನಾದನು. ಹೊಸಗನ್ನಡದ ಅರುಣೋದಯವನ್ನು ಸಾರಿದ ಮುಂಗೋಳಿ ಅವನಲ್ಲ. ಹೊಸಗನ್ನಡ ಕಾವ್ಯಾರಾಮದ ಮೊದಲ ಕೋಗಿಲೆಯೂ ಅಲ್ಲ.

ಇತ್ತ ಇವನ ಸಮಕಾಲೀನರೇ ಆದ ಪಂಜೆ ಮಂಗೇಶರಾಯರು ಹಳಗನ್ನಡದಲ್ಲಿ ಅತ್ಯಂತ ಒಲವುಳ್ಳವರಾಗಿದ್ದರೂ 'ಮರಳಿ ತಮ್ಮನ ಕರೆಯಪ್ಪಾ' ಮುಂತಾದ ಸರಳವಾದ ಪದ್ಯಗಳನ್ನು ರಚಿಸತೊಡಗಿದರು. ಬೆನಗಲ್ ರಾಮರಾಯರು ವಿನೂತನ ಸಾಹಿತ್ಯ ರೂಪಗಳೆನಿಸಿದ್ದ ಕಾದಂಬರಿ, ಏಕಾಂಕಗಳನ್ನು ಅನುವಾದಿಸತೊಡಗಿದ್ದರು. 'ಸುದರ್ಶನ' ಪತ್ರಿಕೆಯವರು ಪ್ರಗತಿಪರ ವಿಚಾರಗಳನ್ನು ಪ್ರತಿ ಸಂಚಿಕೆಯಲ್ಲಿ ಪ್ರಕಟಿಸುತ್ತ ಇದ್ದರು. ದಕ್ಷಿಣ ಕನ್ನಡ ಜಿಲ್ಲೆಯವರೇ ಹೀಗೆ ಆಧುನಿಕ ಯುಗಕ್ಕೆ ಹೊಂದಿಕೊಳ್ಳುವ ಲೇಖನ ಕಾರ್ಯದಲ್ಲಿ ತೊಡಗಿದ್ದಾಗ ಮುದ್ದಣನು ಮಾತ್ರ ಹಳಗನ್ನಡದತ್ತ ವಾಲಿದನು. ಇದಕ್ಕೆ ಅವನ ಕೊನೆಗಾಲದ 'ಜೋ ಜೋ' ಪ್ರಬಂಧ ಹಾಗೂ ಮರಾಠೀ ಕಾದಂಬರಿಯೊಂದರ ಅನುವಾದ ಪ್ರಯತ್ನಗಳು ಅಪವಾದವಾಗಿವೆಯಾದರೂ ಅವನ ಖಚಿತವಾದ ಒಲವು ಹಳೆಯ ಕಥನ ಮತ್ತು ಹಳಗನ್ನಡ ಮಾರ್ಗದತ್ತಲೇ ಇದ್ದಿತೆಂಬುದು ಸುವೇದ್ಯವಾಗಿದೆ. ಹೀಗೆಂದ ಮಾತ್ರಕ್ಕೆ ಅವನ ಕವಿತ್ವದ ಶ್ರೇಷ್ಠತೆಗೆ ಚ್ಯುತಿಯಿಲ್ಲ. ಹಾಗೂ ತನ್ನ ಕೃತಿಗಳಲ್ಲಿ ಅವನು ಹೊಸತನ ತೋರಲಿಲ್ಲವೆಂದು ಅಲ್ಲ. ಅನೇಕ ಹಳಗನ್ನಡ ಕವಿಗಳಲ್ಲಿ ಹೊಸತನದ, ಸ್ವೋಪಜ್ಞತೆಯ ಅಂಶಗಳು ಇದ್ದೇ ಇವೆ. ಆದರೆ ಮುದ್ದಣನು ನವೀನ ಮಾರ್ಗಕ್ಕೆ ಇಷ್ಟರ ಮಟ್ಟಿಗೆ ವಿಮುಖನಾದುದು ಸುಸ್ಪಷ್ಟವಾಗಿ ವಿವರಿಸಲಿಕ್ಕೆ ಬಾರದ ಒಂದು ಆಶ್ಚರ್ಯದ ಪ್ರಸಂಗವಾಗಿದೆ.

ನವೋದಯ ಕಾಲದ ಪ್ರಯೋಜನವನ್ನು ಅವನು ಪಡೆದದ್ದು ಕೇವಲ ಎರಡೇ ಅಂಶಗಳಲ್ಲಿ. ಒಂದು, ಕ್ರಿಶ್ಚಿಯನ್ ಹೈಸ್ಕೂಲಿನ ಮಾಸ್ತರಿಕೆ ( ಅಲ್ಲಿ ಇದ್ದಾಗ ಅವನು ಎಷ್ಟೊಂದು ಮುದ್ದಾಗಿ ಇಂಗ್ಲಿಶ್‌ನಲ್ಲಿ ಸಹಿ ಮಾಡುತ್ತಿದ್ದ!) ಇನ್ನೊಂದು, ಮುದ್ರಣ ಕಲೆಯ ಅಭಿಯೋಗದ ಫಲವಾದ ಹಳಗನ್ನಡ ಕಾವ್ಯಗಳ ಶಾಸ್ತ್ರ ಶುದ್ಧವಾದ ಪ್ರಕಟನೆ. ಈ ಕೃತಿಗಳು ಇಲ್ಲವಾಗಿದ್ದರೆ, 'ಅವನ ಕಾವ್ಯವಿದ್ಯಾಪ್ರಚಯ ಪರಿಚಯ'ವು ತಾಡವಾಲೆಯ ಪ್ರತಿಗಳಿಗೆ ಪರಿಮಿತವಾಗಿರುತ್ತಿತ್ತು.

ಹೊಸಗನ್ನಡದ ಸಮಕಾಲೀನ ಪ್ರವಾಹದಲ್ಲಿ ಮುದ್ದಣನು ಎಷ್ಟೊಂದು ಸ್ಥಿರವಾಗಿದ್ದಾನೆ? ಕ್ರೈಸ್ತಮತ ಪ್ರಸಾರ, ಸ್ತ್ರೀ ಸಮಾಜ ಸುಧಾರಣೆ, ರಾಜಕೀಯ ಪ್ರಜ್ಞೆ, ಕನ್ನಡ ಭಾಷೆಯ ಸುಲಭೀಕರಣ, ನಾಟಕೋದ್ಯಮ, ಸರಳ ಆದರೆ ಪ್ರಭಾವ ಪೂರ್ಣವಾದ ಗದ್ಯದ ಬಳಕೆ, ಲೋಕ ಶಿಕ್ಷಣ ದೃಷ್ಟಿಯುಳ್ಳ ಪತ್ರಿಕಾ ಧರ್ಮ - ಒಂದೇ ಎರಡೇ, ಇವುಗಳ ವಿವಿಧ ತೆರೆಗಳು ಮೇಲ್ವಾಯ್ದು ಬರುತ್ತಿದ್ದರೂ ಮುದ್ದಣ ಅದರಿಂದ ವಿಚಲಿತನಾಗಲಿಲ್ಲ. ಇಷ್ಟೇ ಅಲ್ಲ, ಅದರ ವಿರುದ್ಧ ದಿಕ್ಕಿಗೆ ಈಸಿ, ಹಳಗನ್ನಡ ದಡವನ್ನು ಯಶಸ್ವಿಯಾಗಿ ತಲುಪಿದನು. ಉಡುಪಿಯ ಶಹರದಲ್ಲಿ ಅವನು ನೆಲೆಸಿದ್ದರೂ ನಾಗರಿಕತೆಯಿಂದ ದೂರವಿದ್ದ ಮಧ್ಯಯುಗದ ನಂದಳಿಕೆ ಗ್ರಾಮದವನಾಗಿಯೇ ಉಳಿದನು!

## ಮುದ್ದಣನ ಬದುಕು

ಮುದ್ದಣನ ಜೀವನದ ಬಗ್ಗೆ ತಿಳಿದಷ್ಟು ವಿವರಗಳು ಹಳಗನ್ನಡ, ನಡುಗನ್ನಡ ಹಾಗೂ ೧೯ನೆಯ ಶತಮಾನದ ಯಾವ ಕವಿಯ ಬಗ್ಗೆಯೂ ತಿಳಿದಿರಲಾರವು. ಆದರೂ ಅವನ ಜೀವನಪಟದಲ್ಲಿ ಕೆಲವು ಅಸ್ಪಷ್ಟವಾದ ಹಾಗೂ ತಪ್ಪಾಗಿ ಎಳೆದ ರೇಖೆಗಳಿವೆ. ಇನ್ನು ಕೆಲವು ಅಂಶಗಳಲ್ಲಿ ವಿಮರ್ಶಕ- ಲೇಖಕರ ಭಾವಾತಿರೇಕದಿಂದಾಗಿ ಅತ್ಯುಕ್ತಿಗಳು ತಲೆದೋರಿವೆ. ಅಲ್ಲದೆ ಮಹತ್ವದವೆನ್ನಬಹುದಾದ ಹಲವು ವಿಚಾರಗಳಿಗೆ ಸಾಕಷ್ಟು ಮಹತ್ವವನ್ನು ಈ ಹಿಂದೆ ಕೊಟ್ಟುದಿಲ್ಲ. ಈ ದೃಷ್ಟಿಯಿಂದ ಮುದ್ದಣನ ಬದುಕನ್ನು ಪುನರ್ವಿಮರ್ಶಿಸಿದೆ.
ಅವನ ೩೧ ವರ್ಷಗಳ ಬದುಕನ್ನು ಹೀಗೆ ರೂಪಿಸಬಹುದು:

| ಅವಧಿ | ವಾಸಸ್ಥಳ | ಕಾರ್ಯ (ವಯಸ್ಸು) |
|---|---|---|
| ೧೮೬೯-೧೮೮೧ | ನಂದಳಿಕೆ | ಬಾಲ್ಯ (೧-೧೨ನೆ ವರ್ಷ) |
| ೧೮೮೧-೧೮೮೯ | ಉಡುಪಿ | ಶಿಕ್ಷಣಕ್ಕಾಗಿ ಅಲೆದಾಟ (೧೨-೧೯ನೆ ವರ್ಷ) |
| ೧೮೮೯-೧೮೯೩ | ಮದ್ರಾಸ್ | ವ್ಯಾಯಾಮ ಶಿಕ್ಷಕ; |
| | ಉಡುಪಿ | ಯಕ್ಷಗಾನ ಮತ್ತು ರಾಮಪಟ್ಟಾಭಿಷೇಕದ |
| | ಕುಂದಾಪುರ | ರಚನೆ (೧೯- ೨೩ನೆ ವರ್ಷ) |

| | | |
|---|---|---|
| ೧೮೯೪-೧೮೯೭ | ಉಡುಪಿ | ಸಂಸಾರಿಗ; ಅದ್ಭುತರಾಮಾಯಣ ಮತ್ತು ರಾಮಾಶ್ವಮೇಧ ರಚನೆ (೨೪-೨೭ನೆ ವರ್ಷ) |
| ೧೮೯೭-೧೯೦೧ | ಉಡುಪಿ | ಕನ್ನಡ ಮಾಸ್ತರ; ಕ್ಷಯ ರೋಗದಿಂದ ಮರಣ (೨೭-೩೧ನೆ ವರ್ಷ) |

ಮುದ್ದಣ ಜನಿಸಿದುದು ೧೮೭೦ರ ಜನವರಿ ೨೪ರಂದು. (೧೮೭೦ನೇ ವರ್ಷವಲ್ಲ- ಕೆಲವರು ತಿಳಿದಂತೆ). ಅವನು ಹುಡುಗನಾಗಿ ತಿರುಗಾಡಿದ ನಂದಳಿಕೆಯ ಗ್ರಾಮವು ಇಂದಿಗೂ ಗ್ರಾಮವಾಗಿಯೇ ಉಳಿದಿದೆ. ಅವನು ವಾಸವಾಗಿದ್ದ ಮನೆ, ಕಲಿತಿದ್ದ ಶಾಲಾ ಸ್ಥಳ - ಎಲ್ಲವನ್ನೂ ಬೆರಳಿಟ್ಟು ತೋರಿಸಲಾಗುತ್ತದೆ. ಅವನಿಗೆ 'ಅ-ಆ-ಇ' ಕಲಿಸಿದವರು ಮುರೂರು ಚರಡಪ್ಪಯ್ಯ ಎಂಬುದಾಗಿ ಆರ್. ನರಸಿಂಹಾಚಾರ್ಯರು ಹೇಳಿದ್ದರೆ, ಪಂಜೆಯವರು ಅದು ರಾಮಯ್ಯ ಹೆಗ್ಗಡೆ ಎಂಬುವನ ಶಾಲೆಯಾಗಿದ್ದಿತು ಎನ್ನುತ್ತಾರೆ. ಯಾವುದು ಸರಿ?

ಅವನ ತಂದೆ ತಿ (ತ)ಮ್ಮಯ್ಯ, ತಾಯಿ ಮಹಾಲಕ್ಷ್ಮಮ್ಮ. ಚಿಕ್ಕಪ್ಪಂದಿರಾದ ರಾಮಪ್ಪ, ಲಿಂಗಯ್ಯ, ಸೋದರತ್ತೆ ಇಂದಿರಮ್ಮ, ತಮ್ಮ ಶಿವರಾಮಯ್ಯ* ಇವರ ಹೆಸರುಗಳನ್ನೂ ನಾವು ಬಲ್ಲೆವು. ಆದರೆ ಈ ತನ್ನ ಬಳಗದವರೊಂದಿಗೆ ಮುದ್ದಣನ ಸಂಬಂಧ ಹೇಗಿದ್ದಿತೆಂಬುದನ್ನು ಅರಿಯೆವು. ಎಂತಿದ್ದರೂ ಸಾಮಾನ್ಯ ಬಡ-ಮಧ್ಯಮ ಕುಟುಂಬದಲ್ಲಿರಬಹುದಾದ ಸಂಬಂಧವೇ ಅದು. ಆದರೆ ತಂದೆ, ಚಿಕ್ಕಪ್ಪರಿಗಿಂತ ಮುದ್ದಣನ ಮೇಲೆ ತಾಯಿ ಹಾಗೂ ಸೋದರತ್ತೆಯರ ಒಡನಾಟದ ಪ್ರಭಾವ ಹೆಚ್ಚಾಗಿರಬೇಕು. ತಾಯಿಯ ಹೆಸರಿನಿಂದ ಕಾವ್ಯ ಬರೆದಾತನಲ್ಲವೆ. ಇಂದಿರಮ್ಮ, ಇವನು ಉಡುಪಿಯಲ್ಲಿ ಮನೆ ಮಾಡಿದಾಗ ಜೊತೆಗಿದ್ದು ನೆರವಾದವಳು. ಇಂತಹ ಪರಿಸರದಲ್ಲಿ ಮುದ್ದಣನ ಬಾಲ್ಯವು ಯಾವ ವಿಶೇಷವೂ ಇಲ್ಲದೆ ನಂದಳಿಕೆಯಲ್ಲಿ ಕಳೆಯಿತು.

ಪ್ರಾಥಮಿಕ ಶಿಕ್ಷಣವನ್ನು ಮುಗಿಸಿಕೊಂಡು, ಮುದ್ದಣನು ಉಡುಪಿಗೆ ಬರುವ ವೇಳೆಗೆ, ತಂದೆ ತಿಮ್ಮಯ್ಯ ಪಾಟಾಳಿ ವೃತ್ತಿಯಿಂದ ಉಪಜೀವನ ಸಾಗದೆಂದು ಇವಾತ್ತೂರಿಗೆ ಬಂದು ನೆಲೆಸಿದನು. ಅಲ್ಲಿಗೆ ತಂದೆ-ಮಕ್ಕಳ ನಿತ್ಯದ ಒಡನಾಟ ತಪ್ಪಿತು. ಮುಂದೆ ಮುದ್ದಣನು ಉಡುಪಿಯಲ್ಲಿ ವಾಸವಾಗಿದ್ದಾಗ ತಿಮ್ಮಯ್ಯ ಬಂದು ಹೋಗುತ್ತಿದ್ದುದರ ಪ್ರಸ್ತಾಪವಿದೆ.

ಪ್ರಾಥಮಿಕ ಶಿಕ್ಷಣವನ್ನು ಮುಗಿಸಿಕೊಂಡು ಮುದ್ದಣನು ಉಡುಪಿಗೆ ಬಂದನಷ್ಟೆ. ಆಗ ಅವನು ಎಲ್ಲಿ ವಾಸವಾಗಿದ್ದ? ಸಂಬಂಧಿಕರು ಯಾರಾದರೂ ಇದ್ದಿದ್ದರೆ ಅವರ ಪ್ರಸ್ತಾಪ ಮತ್ತೆಲ್ಲಿಯಾದರೂ ಬರುತ್ತಿದ್ದಿತು. ಅವನು ಉಡುಪಿಯ ಮಠವೊಂದರಲ್ಲಿ ಈ ಕಾಲಕ್ಕೆ ವಾಸವಾಗಿದ್ದಿರಬೇಕು. ಇಂಗ್ಲೀಷ್ ಶಾಲೆಯ 'ಲೋವರ್ ಸೆಕೆಂಡರಿ' ಮುಗಿಸಿದ ಮೇಲೆ `ಹೈಯರ್'ಗೆ ಹೋಗುವ ಅವಕಾಶ ಅವನಿಗೆ ದೊರೆಯಲಿಲ್ಲ-ಬಡತನದಿಂದಾಗಿ. ಬದಲಿಗೆ ಅವನು ಟ್ರೇನಿಂಗ್ ಕಾಲೇಜಿನಲ್ಲಿ ಎರಡು ವರ್ಷ ಕಲಿತನು.

* ಈತ ದಶಾವತಾರದ ಮೇಳದಲ್ಲಿ ಕೆಲವು ವರ್ಷ ಸೇರಿಕೊಂಡಿದ್ದು ಆಮೇಲೆ ಆ ವೃತ್ತಿಯಲ್ಲಿ ಬೇಸತ್ತು ಉಪಾಧ್ಯಾಯನಾದನಂತೆ.

ಆಗಿನ ಫೀಜು, ಪುಸ್ತಕಗಳಿಗೆ ಹೇಗೆ ವ್ಯವಸ್ಥೆ ಮಾಡಿಕೊಂಡಿದ್ದನೊ!

ಈ ತರಬೇತಿಯ ಅನಂತರ ಮುಂದೇನು - ಎಂಬ ಪ್ರಶ್ನೆ ಮುದ್ದಣನನ್ನು ಬಾಧಿಸಿತು. ಅವನಿಗೆ ಆಗ ೧೯ ವರ್ಷ ವಯಸ್ಸು. ಪ್ರಾಥಮಿಕ ಶಾಲಾ ಮಾಸ್ತರಿಕೆಯು ಆವಾಗಲೇ ಸಿಕ್ಕುವಂತಿದ್ದಿಲ್ಲವೆ? ಏನೇ ಆಗಲಿ, ಅತಿ ಕಡಿಮೆ ವೆಚ್ಚದಲ್ಲಿ ಶಿಕ್ಷಣವನ್ನು ಮುಂದುವರಿಸಬೇಕಾದರೆ, ಅವನು ಮದ್ರಾಸಿಗೆ ವ್ಯಾಯಾಮ ಶಿಕ್ಷಣದ ತರಬೇತಿಗಾಗಿ ಹೋಗಬಹುದೆಂದು ಮನಗಂಡವರು ಟ್ರೇನಿಂಗ್ ಕಾಲೇಜಿನ ಆಗಿನ ಪ್ರಿನ್ಸಿಪಾಲರು. ಈ ಬೇಡವಾದ ತರಬೇತಿಗಾಗಿ, ಸರಕಾರವೇ ವಿದ್ಯಾರ್ಥಿಗಳ ಬಹುಪಾಲಿನ ವೆಚ್ಚವನ್ನು ನೋಡಿಕೊಳ್ಳುತ್ತಿದ್ದಿತು.

ಮದ್ರಾಸದಲ್ಲಿದ್ದಾಗ ಆದ ದೊಡ್ಡ ಲಾಭವೆಂದರೆ ಹಟ್ಟಿಯಂಗಡಿ ನಾರಾಯಣರಾಯರ ಒಡನಾಟ. ವಕೀಲಿ ವೃತ್ತಿಯಲ್ಲಿದ್ದ ಅವರಿಗೆ ಸಾಹಿತ್ಯದಲ್ಲಿ ಅಮಿತ ಪ್ರೀತಿ. ಹಳಗನ್ನಡವನ್ನು ಅಭ್ಯಸಿಸಿದುದಲ್ಲದೆ ಕನ್ನಡ ಭಾಷೆ, ಇತಿಹಾಸಗಳಲ್ಲಿ ಅವರಿಗೆ ತುಂಬಾ ಪರಿಣತಿ ಇದ್ದಿತು. ಇವರಿಬ್ಬರ ಒಡನಾಟದ ವಿವರಗಳು ತಿಳಿದಿಲ್ಲವಾದರೂ ಮುದ್ದಣನಲ್ಲಿ ಕನ್ನಡ ಶ್ರದ್ಧೆ ಕುಡಿಯೊಡೆದುದು ಇವರ ಸಂಪರ್ಕದಿಂದಾಗಿ. (ಮಳಲಿ ಸುಬ್ಬರಾಯರು ಆಮೇಲೆ ಅದಕ್ಕೆ ನೀರೆರೆದರೆನ್ನುವ). ಆ ಮುಂದೆಯೂ ಮುದ್ದಣನು ಹಟ್ಟಿಯಂಗಡಿ ನಾರಾಯಣರಾಯರೊಡನೆ ಪತ್ರವ್ಯವಹಾರವನ್ನು ಇಟ್ಟು ಕೊಂಡಿದ್ದನು. ಅವರನ್ನು ಗೌರವದಿಂದ ಕಾಣುತ್ತಿದ್ದನು; ಅವರ ಸಲಹೆ ಕೇಳುತ್ತಿದ್ದನು.

ಮದ್ರಾಸಲ್ಲಿಯ ವ್ಯಾಯಾಮ ಶಿಕ್ಷಣವನ್ನು ಮುಗಿಸಿಕೊಂಡು ಬಂದೊಡನೆ, ಮೇ ೧೮೮೯ರಲ್ಲಿ ಮುದ್ದಣನು ಉಡುಪಿಯ ಬೋರ್ಡ್ ಮಿಡಲ್ ಸ್ಕೂಲಿನಲ್ಲಿ ವ್ಯಾಯಾಮ ಶಿಕ್ಷಕನಾಗಿ ಸೇರಿದ. ಯೌವನಿಗನಾಗಿದ್ದ ಮುದ್ದಣನ ದುಡಿಮೆಯ ಜೀವನ ಅಂದಿನಿಂದ ಮೊದಲಾಯಿತು. ಆಗಿನ ಅವನ ಸಂಬಳ ೧೦ ರೂ. ಅವನ ಡ್ರಿಲ್ ಮಾಸ್ತರಿಕೆಯು ಅಪರಾಹ್ನದ ಅನಂತರವೇ ತಾನೇ. ಬೆಳಗಿನ ಸಮಯದಲ್ಲಿ ಶಾಲೆಯಲ್ಲಿಯ ಪುಸ್ತಕಗಳನ್ನು ಓದುವುದೇ ಅವನ ಆಸ್ಥೆಯ ಕೆಲಸವಾಗಿದ್ದಿತು.

ಮಳಲಿ ಸುಬ್ಬರಾಯರ ಸ್ನೇಹವಾದದ್ದು ಇದೇ ಅವಧಿಯಲ್ಲಿ. ಅವರ ಒಲವು ಮರಾಠಿ ನಾಟಕಗಳ ಕಡೆಗೆ; ಅವರು ಅಣ್ಣಾಜಿರಾವ ಕಿರ್ಲೋಸ್ಕರರ ನಾಟಕಗಳನ್ನು ಉಡುಪಿಯ ರಂಗಭೂಮಿಯ ಮೇಲೆ ತಂದವರು. ಸ್ವತಃ 'ಸಂಗೀತ ಕೃಷ್ಣಜನ್ಮ'ವೆಂಬ ಮರಾಠೀ ನಾಟಕವನ್ನು ಬರೆದಿದ್ದರು. ಅರ್ಥಾತ್ ಅವರಲ್ಲಿ ಕವಿತ್ವರಚನಾ ಸಾಮರ್ಥ್ಯವಿದ್ದಿತು. ಅದೇ ಪಲ್ಲವಿಸುತ್ತಿದ್ದ ಮುದ್ದಣನ ಸಾಹಿತ್ಯಾಭಿರುಚಿಗೆ ಒಂದು ಆಲಂಬನ ಬೇಕಾಗಿದ್ದಿತು. ಮಳಲಿ ಸುಬ್ಬರಾಯರು ಈ ಸಾಹಿತ್ಯಿಕ ಸಸಿಗೆ ನೀರನ್ನೆರೆಯುತ್ತ ಆಸರೆಯಾಗಿ ನಿಂತರು. ಓದಲು ಪುಸ್ತಕಗಳನ್ನು ಕೊಟ್ಟರು. ರಾತ್ರಿ ಆತ ಮನೆಗೆ ಬಂದಾಗ, ಶೇಷರಾಮಾಯಣ ಮೊದಲಾದ ಸಂಸ್ಕೃತಪುರಾಣ ಕಾವ್ಯಗಳನ್ನು

ತಿಳಿಸಿ ಹೇಳಿದರು. ಅವನು ಬರೆದ ಯಕ್ಷಗಾನಗಳನ್ನು ತಿದ್ದಿದರು. 'ಪದ ಸಹಾಯ'ವನ್ನೂ ಮಾಡಿದರಂತೆ; ಎಂದರೆ ಕೆಲವು ಪದ್ಯಗಳನ್ನು ತಾವೇ ಬರೆದುಕೊಟ್ಟರು. ಈ ಬಗೆಯ ಸಹಾಯವು 'ರತ್ನಾವತೀ ಕಲ್ಯಾಣ'ಕ್ಕೆ ಒದಗಿದಷ್ಟು 'ಕುಮಾರ ವಿಜಯ'ಕ್ಕೆ ಅಷ್ಟೊಂದು ಇರಲಿಲ್ಲವೆಂದು ಐರೋಡಿಯವರು ಒಂದೆಡೆ ಉಲ್ಲೇಖಿಸಿದ್ದಾರೆ. ಏಕೆಂದರೆ ಆ ವೇಳೆಗೆ ಮುದ್ದಣನ ಕವಿತ್ವ ಸಾಮರ್ಥ್ಯವು ಕುದುರಿದ್ದಿತು. ಏನಿದ್ದರೂ ಮಳಲಿ ಸುಬ್ಬರಾಯರು ಮುದ್ದಣನ ಸಾಹಿತ್ಯ ಕಾರ್ಯದಲ್ಲಿ ಸಕ್ರಿಯವಾದ ಆಸ್ಥೆ ವಹಿಸಿದ್ದರು. ಅವರು 'ಉಡುಪಿಯ ರೇಂಜ್ ಶಾಲೆಗಳಿಗೆ ಇನ್‌ಸ್ಪೆಕ್ಟಿಂಗ್ ಸ್ಕೂಲ್ ಮಾಸ್ತರರಾಗಿದ್ದ ಬೋಳಾರ ಕೃಷ್ಣಪ್ಪಯ್ಯ ಎಂಬವರ ಮನೆಯಲ್ಲಿ (ಕುಮಾರ ವಿಜಯದ) ದೊಡ್ಡ ತಾಳ ಮದ್ದಲೆ ಮಾಡಿಸಿ, ತಾವೇ ಆ ಪ್ರಸಂಗಗಳ ಪದ ಹೇಳಿದರೆಂತಲೂ ಕೃಷ್ಣಪ್ಪಯ್ಯ ಮೊದಲಾದವರು ಅರ್ಥ ಹೇಳಿದರೆಂತಲೂ ಆಮೇಲೆ ಅವಶ್ಯವಿರುವ ತಿದ್ದುಪಡಿಗಳನ್ನು ಮಾಡಿ ಮುದ್ರಣಕ್ಕಾಗಿ ಹಿಂದೂ ಪ್ರೆಸ್ಸಿಗೆ ಕೊಟ್ಟೆವೆಂತಲೂ' ಮಳಲಿ ಸುಬ್ಬರಾಯರು ಒಮ್ಮೆ ಐರೋಡಿ ಶಿವರಾಮಯ್ಯನವರಿಗೆ ಹೇಳಿದ್ದರಂತೆ.

ಮಳಲಿ ಸುಬ್ಬರಾಯರಿಗೆ ಕುಂದಾಪುರಕ್ಕೆ ವರ್ಗವಾದ ಮೇಲೆಯೂ ಈ ಸಾಹಿತ್ಯಿಕ ಸಂಪರ್ಕ ಮುಂದುವರಿಯಿತು. ಮುದ್ದಣನು ತಾನು ಬರೆದುದರ ಕೆಲವು ಪುಟಗಳನ್ನು ಅವರ ಅವಗಾಹನೆಗೆ ಕಳಿಸುತ್ತಿದ್ದ. ಆದರೂ ಇಂಥ ಗುರುವಿನ ಅಗಲಿಕೆಯು ಮುದ್ದಣನಲ್ಲಿ ಬೇಸರ ತಂದಿತು. ಆದಕಾರಣ ತಾನೂ ವರ್ಗಮಾಡಿಸಿಕೊಂಡು ೨೬ ಮಾರ್ಚ್ ೧೮೯೨ರಂದು ಕುಂದಾಪುರಕ್ಕೆ ಹೋದನು.

ಮುದ್ದಣನ ಕಾವ್ಯರಚನೆಗೀಗ ತಕ್ಕ ಭೂಮಿಕೆ ಸಿದ್ಧವಾಗಿದ್ದಿತು. ಅದಕ್ಕಾಗಿ ಅವನು ಪಡೆದಿದ್ದ ಭಾಷಾಭ್ಯಾಸದ ಹಾಗೂ ಕಾವ್ಯಾಭ್ಯಾಸದ ಪರಿಯೆಂತೆಂಬುದನ್ನು ನೋಡೋಣ.

ಅವನಿಗೆ ಜನ್ಮಾರಭ್ಯ ಬರುತ್ತಿದ್ದ ತುಳು, ಕನ್ನಡಗಳನ್ನು ಬಿಡೋಣ. ವ್ಯವಹಾರ ವಶದಿಂದ ಕೊಂಕಣಿ ಭಾಷೆಯನ್ನು ಅರ್ಥಮಾಡಿಕೊಳ್ಳಬಲ್ಲವನಾಗಿದ್ದ ಎಂಬುದನ್ನೂ ಬದಿಗಿಡೋಣ. ಇಂಗ್ಲೀಷ್ ಭಾಷೆಯನ್ನು ಅವನು ಕಲಿತದ್ದು ಪ್ರಾಥಮಿಕ ಮಟ್ಟದಲ್ಲಿ ೨-೩ ವರ್ಷ ಮಾತ್ರ. ಬಡತನದಿಂದಾಗಿ ಹೆಚ್ಚು ಕಲಿಯಲಾಗಲಿಲ್ಲವೆಂದು ನೋಡಿದ್ದೇವೆ. ಆ ಭಾಷೆ 'ಚೆನ್ನಾಗಿಬಾರದ್ದರಿಂದ' ಎಂಬೊಂದು ಕಿರುನುಡಿ ಬೆನಗಲ್ ರಾಮರಾಯರ ಲೇಖನದಲ್ಲಿ ಬರುತ್ತದೆ. ಅದೇಕೆ - ಮದ್ರಾಸಲ್ಲಿ ಕನ್ನಡ ಪಂಡಿತ ಸ್ಥಾನಕ್ಕೆ ಮುದ್ದಣ ಪ್ರಯತ್ನಿಸಬೇಕೆಂಬ ವಿಚಾರವಿದ್ದ ಕಾಲದಲ್ಲಿ (೧೮೯೫) ಮುದ್ದಣನು ತನಗೆ ಕನ್ನಡ-ಇಂಗ್ಲೀಷ್ ಭಾಷಾಂತರ ಕಲಿಸಲು ಬರುವುದಿಲ್ಲವಲ್ಲ - ಎಂಬ ಸಂದೇಹವನ್ನು ತಾನಾಗಿ ಎತ್ತಿದ್ದಾನೆ. ಆದ ಕಾರಣ ಮುದ್ದಣನಿಗೆ ಈ ಭಾಷೆಯಲ್ಲಿ ಗತಿ ಇರಲಿಲ್ಲವೆಂದೇ ಹೇಳಬೇಕು.

ಮದ್ರಾಸದಲ್ಲಿದ್ದಾಗ, ಅವನು ತಮಿಳಿನ working knowledge ಹೊಂದಲೇ ಬೇಕಾಯಿತು. ಸಂಭಾಷಣೆಯಲ್ಲದೆ, ಓದಲಿಕ್ಕೂ ಅವನಿಗೆ ಬರುತ್ತಿದ್ದಿತೆನ್ನಬಹುದು. ಆದರೆ

ಅವನು ತಮಿಳಿನಲ್ಲಿ ಪದ್ಯಗಳನ್ನು ರಚಿಸುತ್ತಿದ್ದನೆಂಬ ನಾಗರಹಳ್ಳಿ ರಂಗ ಅವರ ಹೇಳಿಕೆಗಾಗಲಿ, ತೆಲುಗು, ಮಲೆಯಾಳಗಳನ್ನು ಸಹ ಆತ 'ಚೆನ್ನಾಗಿ' ಬಲ್ಲವನಾಗಿದ್ದ ಎಂಬ ಊಹೆಗಾಗಲಿ ಆಧಾರ ಇಲ್ಲ.

ಇನ್ನೀಗ ಸಂಸ್ಕೃತ. ಅವನ 'ಸಂಸ್ಕೃತ ಜ್ಞಾನ ಕೊಂಚ' ಎಂದು ಗುರುಗಳಾದ ಮುಳಲಿಯವರು ಹೇಳಿದ್ದಾರೆ. ರಾಮಪಟ್ಟಾಭಿಷೇಕದಲ್ಲಿಯ ಸಂಸ್ಕೃತ ಭೂಯಿಷ್ಠವಾದ ಪದ್ಯಗಳನ್ನು ನೋಡಿದರೆ ಈ ಭಾಷೆಯಲ್ಲಿ ಅವನಿಗೆ ವಿಶೇಷ ಪರಿಣತಿ ಇತ್ತೆನ್ನಬೇಕು. ಇತ್ತ, ಅದರ ನಾಂದೀ ಸಂಧಿಯ ಪದ್ಯಗಳ ಮೊದಲಕ್ಷರದಿಂದ ಹೊರಡುವ 'ಶ್ರೀರಾಮಚಂದ್ರಾಯ ನಮಾಮಿ' ಎಂಬುದರಲ್ಲಿ ವ್ಯಾಕರಣದೋಷವಿದೆಯಾದ್ದರಿಂದ ಅವನು ಸಂಸ್ಕೃತ ಭಾಷೆಯನ್ನು ಚೆನ್ನಾಗಿ ಅಭ್ಯಸಿಸಿರಲಿಲ್ಲವೆನ್ನಬೇಕಾಗುತ್ತದೆ! ಅದೇ ರಾಮಪಟ್ಟಾಭಿಷೇಕದ ೫ನೆ ಸಂಧಿಯಲ್ಲಿ ಬಂದಿರುವ ಅದ್ವೈತಾದಿ ತತ್ತ್ವ ವಿಚಾರಗಳನ್ನು ನೋಡಿದರೆ, ಅವನು ಸಂಸ್ಕೃತದಲ್ಲಿ ಶಾಸ್ತ್ರಾಧ್ಯಯನವನ್ನು ಸಹ ಮಾಡಿದ್ದನೆನ್ನಬೇಕಲ್ಲವೆ? ಪರಸ್ಪರ ವಿರೋಧವಾಗಿರುವ ಈ ಅಂಶಗಳನ್ನು ಸಮನ್ವಯಗೊಳಿಸಲು ಪ್ರಯತ್ನಿಸೋಣ.

ಸಂಸ್ಕೃತ ವ್ಯಾಸಂಗದಲ್ಲಿ ಸ್ಥೂಲವಾಗಿ ಮೂರು ಹಂತಗಳನ್ನು ಗುರುತಿಸಬಹುದು. (ಅ) ದೇವರ ಸ್ತೋತ್ರಗಳು, ಅಮರಕೋಶ ಧಾತುರೂಪಾವಲಿ, ಸುಭಾಷಿತ - ಇವುಗಳ ಕಂಠಪಾಠದಿಂದ ಶಬ್ದಾರ್ಥ ಜ್ಞಾನ. (ಆ) ಕಾಳಿದಾಸಾದಿಗಳ ಕಾವ್ಯ ನಾಟಕಗಳನ್ನು ವ್ಯಾಸಂಗಮಾಡಿ ಪಡೆದ ರಸಾನುಭೂತಿ. (ಇ) ವ್ಯಾಕರಣ, ಮತತತ್ತ್ವ ವಿಚಾರ, ವೇದೋಪನಿಷತ್ತು - ಇವುಗಳ ಮನಮುಟ್ಟ ಅಭ್ಯಾಸ.

ಮುದ್ದಣನು ಮೊದಲಿನ ಮಜಲನ್ನು ಖಂಡಿತವಾಗಿ ದಾಟಿದ್ದನು. ಉಡುಪಿಯ ಶ್ರೀಕೃಷ್ಣ ಮಂದಿರ ಹಾಗೂ ಅಷ್ಟ ಮಠಗಳ ಪರಿಸರದಲ್ಲಿ (ವಿಶೇಷತಃ ಕೃಷ್ಣಾಪುರ ಮಠದಲ್ಲಿ) ತನ್ನ ಹದಿಹರೆಯದ ವರ್ಷಗಳನ್ನು ಕಳೆದಿದ್ದ ಮುದ್ದಣನಿಗೆ ಅದು ಸಹಜವಾಗಿಯೇ ಬರುವಂಥದಾಗಿತ್ತು. ನಿಯಮಿತ ಪಾಠ ಕ್ರಮದ ನೆರವಿಲ್ಲದೆ ಶಬ್ದ ಮಣಿದರ್ಪಣ, ಹಳಗನ್ನಡ ಕಾವ್ಯಗಳನ್ನು ಕರಗತ ಮಾಡಿಕೊಳ್ಳಬಲ್ಲವನಾಗಿದ್ದ ಮುದ್ದಣನಿಗೆ ಸಂಸ್ಕೃತದ ಪ್ರಾರಂಭಿಕ ಜ್ಞಾನ ಸಾಧನೆ ಕಷ್ಟದ ಮಾತಾಗಿರಲಿಲ್ಲ. ಇದರ ಮೊದಲ ಕುರುಹೆಂದು ಕುಮಾರ ವಿಜಯದಲ್ಲಿ ಬಂದ 'ಉದ್ಯಮಂ ಸಾಹಸಂ ಧೈರ್ಯಂ' ಎಂಬ ಸುಭಾಷಿತದ ಭಾವಾನುವಾದವನ್ನು ಗಣಿಸತಕ್ಕುದು.

ಅದಕ್ಕೂ ಹೆಚ್ಚಿನ ಅಧ್ಯಯನದ ಹೊಳಹು ರಾಮಪಟ್ಟಾಭಿಷೇಕದಲ್ಲಿ ಮಾತ್ರ ಕಂಡುಬರುತ್ತದೆ. ಸುರುವಿಗೆ ಅದರಲ್ಲಿ ಸಂಸ್ಕೃತ ಪ್ರಚುರವಾದ ಶ್ಲೇಷಮಯವಾದ ಪದ್ಯಗಳ ಸರಮಾಲೆಯೇ ಇದೆ. ರಘುವಂಶ, ಮಾಘಕಾವ್ಯಗಳಲ್ಲಿಯ ಕೆಲವು ಪದ್ಯಗಳ ಛಾಯಾನು ವಾದವನ್ನು ಗೋವಿಂದ ಪೈಗಳು ತೋರಿಸಿಕೊಟ್ಟಿದ್ದಾರೆ. ತತ್ತ್ವಜ್ಞಾನದ ವಿಚಾರವಾದರೂ ರಾಮಪಟ್ಟಾಭಿಷೇಕದಲ್ಲಿಯೇ ಬಂದಿದೆ. (೫ನೆ ಸಂಧಿ, ಪದ್ಯ ೬೪-೯೦). 'ಶ್ರೀರಾಮಚಂದ್ರಾಯ ನಮಾಮಿ' ಎಂಬ ತಪ್ಪು ಪ್ರಯೋಗಕ್ಕೂ ರಾಮಪಟ್ಟಾಭಿಷೇಕವೇ ಆಶ್ರಯವಾಗಿದೆ.

ತಿಳಿಯಬೇಕಾದ ಮಾತೆಂದರೆ, ನಮ್ಮ ಹಳಗನ್ನಡ ಕಾವ್ಯಗಳನ್ನಷ್ಟೇ ಅಭ್ಯಸಿಸಿದರೆ ಸಾಕು, ಸಂಸ್ಕೃತ ಶಬ್ದ ಭಂಡಾರ, ಹಿಂದೂ ತತ್ವ ದರ್ಶನ - ಇವು ಬಹುಮಟ್ಟಿಗೆ ಲಭಿಸಿಬಿಡುತ್ತವೆ. ಉದಾಹರಣೆಗೆ ರಾಮಪಟ್ಟಾಭಿಷೇಕದ ಐದನೆಯ ಸಂಧಿಯ ಕೊನೆಯಲ್ಲಿ ಬಂದಿರುವ ಅದ್ವೈತ ವಿಚಾರವು ಜೈಮಿನಿ ಭಾರತದಲ್ಲಿ ಬಂದುದೇ ಆದ್ದರಿಂದ ಮುದ್ದಣನು ಗುರು ಸಮ್ಮುಖದಲ್ಲಿ ನಿಯಮಿತವಾಗಿ ಮತ್ತು ದೀರ್ಘಕಾಲದವರೆಗೆ ಸಂಸ್ಕೃತದ ಹೆಚ್ಚಿನ ಜ್ಞಾನವನ್ನು ಪಡೆಯಲಿಲ್ಲವೆಂದೇ ನಮಗನಿಸುತ್ತದೆ. ಸ್ವತಂತ್ರವಾಗಿ ಅವನು ಸಂಸ್ಕೃತ ಕಾವ್ಯ, ಶಾಸ್ತ್ರ ಗ್ರಂಥಗಳನ್ನು ಅರಗಿಸಿಕೊಳ್ಳಲಾರದವನಾಗಿದ್ದ. ಈ ಕಾರಣದಿಂದಲೂ ಮುದ್ದಣನು ಪ್ರಯೋಗಶರಣನಿದ್ದುದರಿಂದಲೂ, 'ರಾಮಚಂದ್ರಾಯ ನಮಾಮಿ' ಎಂಬಲ್ಲಿ ವ್ಯಾಕರಣ ದೋಷವನ್ನು ಕಾಣುತ್ತೇವೆ. ಅವನ ಹಲವು ಕನ್ನಡ ಪದ ಪ್ರಯೋಗಗಳಿಗೂ ಈ ದೋಷ ಅನ್ವಯಿಸುತ್ತದೆ! ಎಂತಲೇ ಮಳಲಿಯವರು ಅವನ ಸಂಸ್ಕೃತ ಜ್ಞಾನವು ಕೊಂಚ - ಎಂದಿರಬೇಕು.

ಆದರೆ ಹಳಗನ್ನಡ ಕಾವ್ಯ ಸಮುದಾಯದ ಅವನ ವ್ಯಾಸಂಗವು ಮಾತ್ರ ಆಳವೂ ಬೆರಗುಗೊಳಿಸುವಂತಹದೂ ಆಗಿದೆ. ಅವನ ಕೃತಿಪಂಚಕದ ಮೇಲೆ, ಇತರ ಕಾವ್ಯಗಳ ಪ್ರಭಾವ ಎಲ್ಲೆಲ್ಲಿದೆಯೆಂಬುದನ್ನು ಅರಿಯಬೇಕಾದರೆ, ಆ ಕಾವ್ಯಗಳಾವುವೆಂಬುದರ ಕಲ್ಪನೆ ಆವಶ್ಯಕ. ಅವನ ಹಳಗನ್ನಡ ವ್ಯಾಸಂಗವು ೧೮೮೯ರಿಂದಲೇ ಆರಂಭವಾಗಿರಬೇಕು. ಕುಮಾರವಿಜಯದಲ್ಲಿ ಕೆಲವು ಅಪೂರ್ವ ಹಾಗೂ ಅಸಾಮಾನ್ಯವಾದ ಹಳಗನ್ನಡ ಶಬ್ದಗಳಿವೆ. ಅದರ ಮುಖಪುಟದಲ್ಲಿಯಂತೂ ಷಡಕ್ಷರಿಯ ಪದ್ಯವೊಂದನ್ನು ಎತ್ತಿ ಕೊಟ್ಟಿದ್ದಾನೆ. ಅದರಿಂದಲೇ ಪಂಜೆಯವರಿಗೆ ಮುದ್ದಣನ ಕುರಿತು ಆದರ ಭಾವ ಕುದುರಿತು. ಇನ್ನು ರಾಮಪಟ್ಟಾಭಿಷೇಕ ರಾಮಾಶ್ವಮೇಧಗಳಲ್ಲಿ ಜೈಮಿನಿ ಭಾರತದ ನೇರವಾದ ಮತ್ತು ಗಾಢವಾದ ಪ್ರಭಾವವೇ ಇದೆ. ಆ ವಾರ್ಧಕದ ಗುಂಫನ, ಅಶ್ವಮೇಧದ ಪ್ರಸಂಗ (ಒಂದರಲ್ಲಿ ಪಾಂಡವರದು; ಇನ್ನೊಂದರಲ್ಲಿ ರಾಮನದು), ಮತ್ತು ಸೀತಾಪರಿತ್ಯಾಗ ವರ್ಣನೆ - ಎರಡೂ ಕೃತಿಗಳಲ್ಲಿ ಕಾಣಿಸಿಕೊಂಡಿವೆ. ಅವನು ನಿಶ್ಚಿತವಾಗಿ ಮನನ ಮಾಡಿದ್ದ ಜನಪ್ರಿಯ ಕಾವ್ಯಗಳೆಂದರೆ ತೊರವೆ ರಾಮಾಯಣ, ಹರಿಶ್ಚಂದ್ರ ಕಾವ್ಯ ಮತ್ತು ಕುಮಾರವ್ಯಾಸ ಭಾರತ.

ಮುದ್ದಣನ ಮೇಲೆ ವಿಶೇಷವಾಗಿ ಪ್ರಭಾವ ಬೀರಿದ ಇನ್ನೊಬ್ಬ ಹಳಗನ್ನಡ ಕವಿಯೆಂದರೆ ನಾಗಚಂದ್ರ. ಅವನ ಮಲ್ಲಿನಾಥ ಪುರಾಣ ಹಾಗೂ ರಾಮಾಯಣಗಳೆರಡೂ ಆ ಮುಂಚೆ ಪ್ರಕಟವಾಗಿದ್ದುವು. ಪಂಪ ರಾಮಾಯಣದಲ್ಲಿಯ 'ಕಡೆದೊಡೆ ಪಾಲ್ಗಡಲ್' (VII - ೭೯) ಎಂಬ ಪದ್ಯವು ರಾಮಪಟ್ಟಾಭಿಷೇಕದಲ್ಲಿಯ 'ಕಡೆಯೆ ಪಾಲ್ಗಡಲನಮೃತ ಪುಟ್ಟುವಂತೆ' (III ೯) ಎಂಬುದರಲ್ಲಿ ಪ್ರತಿಬಿಂಬಿತವಾದುದನ್ನು ಗೋವಿಂದ ಪೈಯವರು ತೋರಿಸಿದ್ದಾರೆ. ಮಲ್ಲಿನಾಥ ಪುರಾಣದ 'ಭಾಗಾನುವಾದಗಳೂ ಪರಿಪಾಟಿಯೂ' ಗೋಚರವಾದದ್ದು ರಾಮಾನುಜಯ್ಯಂಗಾರರಿಗೆ. ಗದಾಯುದ್ಧ? ನಿಶ್ಚಯವಾಗಿಯೂ ಮುದ್ದಣನು ಮನನ ಮಾಡಿದ್ದನು. ನಡುಬೀದಿಯಲ್ಲಿಯೇ ಪಂಜೆಯವರೆದುರು ಅದರ ೨೦-೨೫ ಪದ್ಯಗಳನ್ನು ಉತ್ಸಾಹದಿಂದ ವಾಚಿಸಿದನಲ್ಲವೆ? ಇನ್ನು

ಹೊಸಗನ್ನಡದ ಕೆಲವು ಗದ್ಯ ಕೃತಿಗಳನ್ನು (ಬಿ. ವೆಂಕಟಾಚಾರ್ಯರ ಕೃತಿಗಳು, ಇತ್ಯಾದಿ) ಅವನು ಓದಿದ್ದನೆಂದು ಹೇಳಲಾಗಿದೆಯಾದರೂ ಅವನ ಕೃತಿ ರಚನೆಯ ಮೇಲೆ ಪ್ರಭಾವ ಬೀರಿದಂತಹ ಹೊಸಗನ್ನಡ ಗ್ರಂಥಗಳಾವುವೂ ಇದ್ದ ಹಾಗೆ ತೋರುವುದಿಲ್ಲ.

ಮುದ್ದಣನು ರಾಮಪಟ್ಟಾಭಿಷೇಕಕ್ಕೆ ಸ್ತ್ರೀಯನ್ನು ಕರ್ತೃವಾಗಿ ಮಾಡಿದ್ದು, ಪದ್ಯವನ್ನು ಬಿಟ್ಟು ಗದ್ಯವನ್ನು ಆಯ್ದುಕೊಂಡುದು, ಮನೋರಮೆಯೊಡನೆ ಸಂವಾದವನ್ನು ರೂಪಿಸಿದುದು, ಹಾಗೂ ಹಳಗನ್ನಡದ ಅಪೂರ್ವ ಶಬ್ದಗಳನ್ನು ಆಯ್ದು ತಂದುದು ಇವು ಅವನ ವೈಶಿಷ್ಟ್ಯಗಳಾಗಿವೆ. ಇವಕ್ಕೆ ಹಿಂದಿನ ಕಾವ್ಯಗಳ ವಾಚನದ ಪ್ರಭಾವವೇನಾದರೂ ಇದೆಯೇ ಎಂಬುದು ವಿಚಾರಣೀಯ.

ತಮಿಳಿನಿಂದ ಆರ್. ನರಸಿಂಹಾಚಾರ್ಯರು ಅನುವಾದಿಸಿದ 'ನೀತಿಮಂಜರಿ'ಯಲ್ಲಿ ಓರ್ವ ಕವಯಿತ್ರಿ ಇದ್ದಾಳೆ; ಅದನ್ನು ನೆನಪಿಸಿಕೊಂಡು, ಮುದ್ದಣನು ಮಹಾಲಕ್ಷ್ಮಿಯನ್ನು ಕನ್ನಡ ಕಾವ್ಯ ಕ್ಷೇತ್ರದಲ್ಲಿ ತಂದಿರಬಹುದೆಂದು ಗೋವಿಂದ ಪೈ ಊಹಿಸಿದ್ದಾರೆ. ಆದರೆ ನೀತಿಮಂಜರಿ (ಭಾಗ-೧) ಪ್ರಕಟವಾದದ್ದು ೧೮೯೭ರಲ್ಲಿ. ರಾಮಪಟ್ಟಾಭಿಷೇಕದ ರಚನೆಯ ವರ್ಷ ೧೮೯೩. ಇನ್ನು, ಹೊಸಗನ್ನಡ ಗದ್ಯಗ್ರಂಥಗಳನ್ನು ನೋಡಿ ತಾನು ಗದ್ಯದಲ್ಲಿ ಬರೆಯಬೇಕೆಂದು ಮುದ್ದಣನು ಸರ್ವಥಾ ಯೋಚಿಸಿದವನಲ್ಲ. ಅವನದು ಗದ್ಯ ಕಾವ್ಯ. ಈ ದಿಶೆಯಲ್ಲಿ ಅವನಿಗೆ ಪ್ರೇರಣೆ ಕೊಟ್ಟ ಗ್ರಂಥವಾವುದಾದರೂ ಇದ್ದರೆ ಅದು 'ಚಿಕ್ಕದೇವರಾಯ ವಂಶಾವಳಿ'ಯೇ. ಇದರ ಪರಿಪಾಟಿಯನ್ನೂ ಮುದ್ದಣನ ಕೃತಿಗಳಲ್ಲಿ ಎಂ. ಎ. ಆರ್. ಕಂಡಿದ್ದಾರೆ.

ಮುದ್ದಣ ಮನೋರಮೆಯರ ಸಂವಾದ ಸರಣಿಗೆ ಕೂಡ ಯಾವದೊಂದು ಸಾಹಿತ್ಯ ಕೃತಿ ಪ್ರೇರಣೆಯನ್ನೊದಗಿಸಿರಬೇಕು. ಈ ಸಂದರ್ಭದಲ್ಲಿ ಬಂಕಿಮರ ಕಾದಂಬರಿಯಾದ 'ವಿಷವೃಕ್ಷ'ದಲ್ಲಿ ಬರುವ, ಕಮಲಮುಖಿ ಹಾಗೂ ಅವಳ ಗಂಡನ ಸಂವಾದವನ್ನು ಪಂಜೆಯವರು ಜ್ಞಾಪಕಕ್ಕೆ ತಂದುಕೊಂಡಿದ್ದಾರೆ. ಆದರೆ ಆ ಕೃತಿ ಪ್ರಕಟವಾದದ್ದು ೧೮೯೭ರ ಅನಂತರ. ಆ ವೇಳೆಗೆ ಮುದ್ದಣನು ರಾಮಾಶ್ವಮೇಧವನ್ನು ಬರೆದು ಮುಗಿಸಿದ್ದ. ಅದಕ್ಕಿಂತ ಛಂದೋಂಬುಧಿಯ ನಾಗವರ್ಮನು ತನ್ನ ಪತ್ನಿಯನ್ನು ಸಂಬೋಧಿಸಿದ ಬಗೆಯು ಮುದ್ದಣನ ಮನವೊಕ್ಕಿರಬೇಕು. ಅದೆಷ್ಟು ವಿವಿಧ ರೀತಿಯಲ್ಲಿ ನಾಗವರ್ಮನು ತನ್ನ ಪತ್ನಿಯನ್ನು ಸಂಬೋಧಿಸಿದ್ದಾನೆ! ಬರಿಯೆ ಪಾದಪೂರ್ತಿಗಾಗಿ ಅಲ್ಲ; ತನ್ನ ಕಣ್ಣ ಮುಂದೆ ಓರ್ವ ವನಿತೆಯನ್ನು ನಿಲ್ಲಿಸಿಕೊಂಡಿದ್ದನೋ ಎನ್ನುವಷ್ಟು. ಆದರೆ ಈ ನಾಗವರ್ಮನ ಪತ್ನಿಯು ಮನೋರಮೆಯಂತೆ ವಾಚಾಳಿಯಲ್ಲ! ಅದೇಕೆ - ಒಮ್ಮೆಯೂ ಬಾಯ್ತೆರೆದವಳಲ್ಲ.

ಇನ್ನೀಗ ವಿಶಿಷ್ಟ ಶಬ್ದ ಸೃಷ್ಟಿ. ಕಿಟೆಲ್ ಕೋಶವನ್ನು ಅವನು ಮೇಲಿಂದ ಮೇಲೆ ಪರಿಶೀಲಿಸುತ್ತಿದ್ದನೆಂದು ಹೇಳುವುದುಂಟು. ಕಿಟೆಲ್ ಕೋಶ ಹೊರಬಂದದ್ದು ಅಕ್ಟೋಬರ್ ೧೮೯೪ರಲ್ಲಿ, ಆ ವೇಳೆಗೆ ಮುದ್ದಣನ ರಾಮಾಶ್ವಮೇಧ ರಚನೆಯೊಂದೇ ಬಾಕಿಯಿದ್ದಿತು. ಮೇಲಾಗಿ ಶಬ್ದಕೋಶವನ್ನು ಉರು ಹಾಕಿ ಯಾರೂ ಶಬ್ದಭಂಡಾರವನ್ನು

ಬೆಳೆಯಿಸಿಕೊಳ್ಳುವುದಿಲ್ಲವಾದರೂ ಮುದ್ದಣನು ಅತೀವ ಶಬ್ದ ಪ್ರೇಮಿಯಾಗಿದ್ದುದರಿಂದ ಯಾವದೊಂದು ಶಬ್ದದ ಅರ್ಥಕ್ಕಾಗಿ ಮಾತ್ರ ಕೋಶವನ್ನು ತಿರುವಿ ಹಾಕದೆ, ಅದಕ್ಕೂ ಹೆಚ್ಚಾಗಿ ಅದನ್ನು ಪರಿಶೀಲಿಸುತ್ತಿದ್ದ.

ಆದರೆ ಕಿಟೆಲ್ ಸಂಪಾದಿತ ಶಬ್ದಮಣಿದರ್ಪಣಕ್ಕೆ ಮಾತ್ರ ಮುದ್ದಣನು ಅನನ್ವಿತವಾಗಿ ಋಣಿಯಾಗಿದ್ದಾನೆ. ಕಿಟೆಲ್ ಅದನ್ನು ಸುಲಭವಾಗಿ ಅರ್ಥವಾಗುವಂತೆ, ಟೀಕೆ ಟಿಪ್ಪಣಿಗಳೊಡನೆ, ಶುದ್ಧವಾಗಿ ಸಂಪಾದಿಸಿದುದನ್ನು ಎಲ್ಲರೂ ಬಲ್ಲರು. ಮುದ್ದಣನ ಪಾಲಿಗೆ ಶಬ್ದಮಣಿದರ್ಪಣವೆಂದರೆ ಭಗವದ್ಗೀತೆ, ಬೈಬಲ್ ಎಲ್ಲವೂ ಆಗಿದ್ದಿತು! ಇದರ ಸೂತ್ರಗಳ ಆಧಾರದಿಂದಲೇ ಮುದ್ದಣನು ಹೊಸ ಹೊಸ ತದ್ಭವಗಳನ್ನು ಮಾಡಿಕೊಂಡದ್ದು. ಮಾರಿಗೆ ಗೆತ್ತರ್, ಹಾ ರಾಮಾ, ಏನೆಂಬ ಪೆಂಪೊ, ಆವುದು ಮನತೇಂಬಪ್ಪುದದಂ ಪೇಳಿಂ ಆವೆಯಾದೊಡಮೇವರ್ - ಮುಂತಾದ ಅನೇಕಾನೇಕ ಪ್ರಯೋಗಗಳಿಗೆ ಶಬ್ದಮಣಿದರ್ಪಣವೇ ಆಧಾರ. ರಾಮಾಶ್ವಮೇಧದ ಮೊದಲ ವಾಕ್ಯವಾದ 'ಓವೋ ಕಾಲ ಪುರುಷಂಗೆ ಗುಣಮಣ ಮಿಲ್ಲಂ' ಎಂಬಲ್ಲಿಯ ಅಣಮಿಲ್ಲಂ ಎಂಬುದಕ್ಕೆ ಸಹ ಸೂಕ್ಷ್ಮವಾಗಿ ನೋಡಿದಾಗ ದರ್ಪಣದ ಸೂತ್ರ ೨೪೯ರಲ್ಲಿ ಆಲಂಬನ ದೊರೆಯುತ್ತದೆ! ಅಷ್ಟರ ಮಟ್ಟಿಗೆ ಕೇಶಿರಾಜನು ಅವನ ಬೌದ್ಧಿಕ ದೀಪ್ತಿಯಲ್ಲಿ ಅಂತರ್ಗತನಾಗಿದ್ದನು.

ಮುದ್ದಣನು ಉಡುಪಿಯಲ್ಲಿದ್ದ ಕಾಲಕ್ಕೇ ತನ್ನ ಎರಡೂ ಯಕ್ಷಗಾನ ಕೃತಿಗಳನ್ನು ರಚಿಸಿದ್ದನು. ವಿಧುಪುರದ ಶ್ರೀ ಕೃಷ್ಣನನ್ನು ಅವುಗಳಲ್ಲಿ ತಂದಿದ್ದುದನ್ನು ಗಮನಿಸಬೇಕು. ಈ ಕೃತಿಗಳನ್ನು ಮುದ್ದಣನೇ ಸ್ವಂತ ವೆಚ್ಚದಿಂದ ಮುದ್ರಿಸಿ ಪ್ರಕಟಿಸಿದನೆನ್ನುವುದು ಮಹತ್ವದ್ದಾಗಿದೆ. ೧೨ ರೂ. ಸಂಬಳದಲ್ಲಿ ಕಿಂಚಿತ್ತಾದರೂ ಹಣ ಉಳಿಸಬಲ್ಲವನಾಗಿದ್ದುದರ ಇಲ್ಲವೆ ಉದ್ದರಿಯಾಗಿ ಮುದ್ರಿಸಿ ಆಮೇಲಾದರೂ ತೀರಿಸಿಯೇನು - ಎಂಬಷ್ಟರ ಮಟ್ಟಿಗೆ ಆರ್ಥಿಕ ಸ್ಥೈರ್ಯವನ್ನು ಹೊಂದಿದ್ದುದರ ಲಕ್ಷಣವದು. ಕುಮಾರವಿಜಯದ ೨೦೦೦ ಪ್ರತಿ ಅಚ್ಚು ಹಾಕಿಸಿದ್ದನಂತೆ. ಇಂದಿನ ಕಾದಂಬರಿ, ವಾರ ಪತ್ರಿಕೆಗಳಂತೆ ಜನ ಕೊಂಡು ಓದುವಷ್ಟು ಜನಪ್ರಿಯತೆಯನ್ನು ಯಕ್ಷಗಾನ ಪುಸ್ತಕಗಳು ಪಡೆದಿದ್ದುವು.

ಶ್ರೀರಾಮಪಟ್ಟಾಭಿಷೇಕವನ್ನು ಬರೆಯಬೇಕೆನ್ನುವ ಸಮಯದಲ್ಲಿ ಅವನಿಗೆ ಕುಂದಾಪುರಕ್ಕೆ ವರ್ಗವಾಯಿತೆಂದು ತೋರುತ್ತದೆ. ಕುಂದಾಪುರ ವಾಸದ ಮಹತ್ವದ ಘಟನೆಯೆಂದರೆ ಬವುಳಾಡಿ ವೆಂಕಟರಮಣ ಹೆಬ್ಬಾರರೊಡನಾದ ಭೇಟ್ಟಿ. ಐವತ್ತು ವರ್ಷಗಳ ಅನಂತರ ಬವುಳಾಡಿ ಹೆಬ್ಬಾರರು ಅದನ್ನು ನೆನೆದುಕೊಂಡಿದ್ದಾರೆ - ಅದೂ ಬ. ಹೆ. ಶ್ರೀಧರರು ಕೇಳಿದರೆಂದು. ಹೆಬ್ಬಾರರು ಹಳಗನ್ನಡ, ಸಂಸ್ಕೃತ ಕಾವ್ಯ ನಾಟಕಗಳನ್ನು ಓದಿಕೊಂಡವರಾಗಿದ್ದರು. ಅವರದೊಂದು ಯಕ್ಷಗಾನ ಪ್ರಸಂಗವು ಪ್ರಕಟವಾದದ್ದಿದೆ.*

* ಇವರ ಮತ್ತು ಮುದ್ದಣನ ಸಂಪರ್ಕದ ಬಗ್ಗೆ ಐರೋಡಿ ಶಿವರಾಮಯ್ಯನವರ ಅಭಿಪ್ರಾಯವು ಇಲ್ಲಿ ಪ್ರಾಸಂಗಿಕವಾಗಿರುವುದರಿಂದ ಅದನ್ನಿಲ್ಲಿ ಉದ್ಧರಿಸಿದೆ: "ಅವರು ಒಳ್ಳೆಯ ಕಾವ್ಯಪ್ರಿಯರೂ

ಹೆಬ್ಬಾರರು ಇತ್ತಿರುವ 'ಒಂದು ಹೇಳಿಕೆ'ಯಲ್ಲಿ ಮರೆವಿನ ಮೂಲಕವಾದ ಇಲ್ಲವೆ ಅಂದಿನವರೆಗೆ ಉಳಿದು ಬಂದ ಅಭಿಪ್ರಾಯಕ್ಕೆ ಅನುಗುಣವಾಗಿ ಮಾರ್ಪಾಟು ಹೊಂದಿದ ಅಂಶಗಳಿರಬಹುದೆ? ಪಂಜೆ, ಮುಳಲಿ, ಹುರಳಿ ಪ್ರಭೃತಿಗಳ ಹೇಳಿಕೆಯಲ್ಲಿಯೇ ವಿಸಂಗತಿಗಳಿರುವಾಗ, ಅವರಿಗಿಂತ ೩೦ ವರ್ಷಗಳ ಅನಂತರ ಇತ್ತ ಹೆಬ್ಬಾರರ ಉಕ್ತಿಯಲ್ಲಿ ಇದ್ದರೆ ಅದು ಸಹಜವೇ. (ಹೆಬ್ಬಾರರ ಆಗಿನ ವಯಸ್ಸು ೭೦). ಮೇಲಾಗಿ ಈ ಹೇಳಿಕೆಯು ಇನ್ನೊಬ್ಬರ ಒಕ್ಕಣಿಕೆಯಲ್ಲಿರುವುದರಿಂದ, ಹೆಬ್ಬಾರರ ಒಟ್ಟಿನ ಅಭಿಪ್ರಾಯವನ್ನು ನಾವು ಸ್ವೀಕರಿಸಬಹುದಲ್ಲದೆ, ಸಣ್ಣ ಪುಟ್ಟ ಮಾತುಗಳನ್ನು ಬಹಳಷ್ಟು ವಿಶ್ಲೇಷಿಸಿ ನೋಡಲಾಗದು.

ಅವರ ಹಾಗೂ ಮುದ್ದಣನ ಭೆಟ್ಟಿಯ ನಾಲ್ಕು ಪ್ರಸಂಗಗಳು ಉಕ್ತವಾಗಿವೆ. ಪ್ರತಿಯೊಂದರ ನಡುವೆ ೩-೪ ವರ್ಷಗಳ ಅಂತರ. ಎಂದರೆ ಮೊದಲ ಭೆಟ್ಟಿಯ ವರ್ಷವಾದ ೧೮೮೦ರಿಂದ ಹಿಡಿದರೆ, ೧೯೦೨ರವರೆಗೆ ಮುದ್ದಣ ತೀರಿಕೊಂಡ ಮೇಲೆ ಸಹ ಬಂದು ಮುಟ್ಟುತ್ತೇವೆ - ಆದರೆ ಹೆಬ್ಬಾರರೇ ಹೇಳಿದಂತೆ, ಮುದ್ದಣನು ಕ್ರಿಶ್ಚಿಯನ್ ಶಾಲೆಯಲ್ಲಿ ಕನ್ನಡ ಮಾಸ್ತರನಾದ ಮೇಲೆ, ಎಂದರೆ ೧೮೮೭ರ ಅನಂತರ ಅವರ ಭೆಟ್ಟಿ ಜರುಗಿಲ್ಲ. ಅಂತೂ ಹೆಬ್ಬಾರರ ಹೇಳಿಕೆಯಿಂದ ಹೊರಡುವ ಮುಖ್ಯಾಂಶಗಳಿವು:

- ಯಕ್ಷಗಾನ ರಚನೆ ಮುಗಿದೊಡನೆ, ಮುದ್ದಣ ರಾಮಪಟ್ಟಾಭಿಷೇಕವನ್ನು ಬರೆದ, ಪ್ರಕಟನಾ ಕ್ರಮದಲ್ಲಿ ಅದ್ಭುತರಾಮಾಯಣ ಮೊದಲಿಗೆ ಬರುತ್ತದೆ.
- ಪದ್ಯ ರಚನೆ ಬಿಟ್ಟು ಗದ್ಯ ರೂಪಕ್ಕೆ ತಿರುಗಲು ಹೆಬ್ಬಾರರು ಸೂಚಿಸಿದ್ದರು.
- ರಾಮಪಟ್ಟಾಭಿಷೇಕದ ೫ನೆ ಸಂಧಿಯ ೬೧-೯೩ ಪದ್ಯಗಳನ್ನು ಅವರು ಬರೆದು ಕೊಟ್ಟರು.
- ಮುದ್ದಣನು 'ಕಣ್ಣಡಿಗ' ಎಂಬಲ್ಲಿ ಶ್ಲೇಷೆಯನ್ನು ತಂದದ್ದು. ಮತ್ತು -

---

ಮೇಧಾವಿಗಳೂ ಆಗಿದ್ದರು. ಲಕ್ಷ್ಮೀನಾರ್ಣಪ್ಪನಿಗೆ ಹೆಬ್ಬಾರರ ಯೋಗ್ಯತೆಯ ಅರಿವಾಗಿ ತಾನು ಬರೆಯ ತೊಡಗಿದ್ದ 'ರಾಮಾಭ್ಯುದಯ'ವನ್ನು ಅವರಿಗೆ ತೋರಿಸಿದನು. ಅವರು ಆ ಪದ್ಯಗಳೊಳಗಿನ ಶಬ್ದ ಶಬ್ದವನ್ನೂ ಆಕ್ಷೇಪಿಸಿ, ಆ ಮಾದರಿಯಲ್ಲಿ ಕಾವ್ಯವನ್ನು ಬರೆದರೆ ಏನೂ ಉಪಯೋಗವಾಗದೆಂದು ನಿಷ್ಠುರವಾಗಿ ನುಡಿದು ಆ ಕಾವ್ಯವನ್ನು ಅಲ್ಲಲ್ಲಿ ತಿದ್ದಿದರು. ಲಕ್ಷ್ಮೀನಾರ್ಣಪ್ಪನ ಮುಂದಿನ ಅಭಿವೃದ್ಧಿಗೆ ಬಹುಮಟ್ಟಿಗೆ ಈ ಹೆಬ್ಬಾರರೇ ಕಾರಣವೆಂದರೆ ಅತಿಶಯೋಕ್ತಿಯಾಗಲಾರದು. ಅವರೇ, ಆ ಕಾಲದಲ್ಲಿ ಲಕ್ಷ್ಮೀನಾರ್ಣಪ್ಪನಿಗೆ ಸಂಸ್ಕೃತ ಭಾಷಾ ಜ್ಞಾನವನ್ನು ಮಾಡಿಕೊಡುವುದಕ್ಕಾಗಿ ಭಾಂಡಾರಕರರ ಸಂಸ್ಕೃತ ಮೊದಲನೆಯ ಮತ್ತು ಎರಡನೆಯ ಪುಸ್ತಕಗಳನ್ನು ಕಲಿಸಿದರು...... ನಾನೂ ಒಮ್ಮೆ ವೆಂಕಟರಮಣ ಹೆಬ್ಬಾರರೊಂದಿಗೆ ಅರ್ಧದಿನವಿಡೀ ಸಂಭಾಷಿಸುತ್ತಾ ಕಳೆದಿದ್ದೆ. ಆ ಸಂಭಾಷಣೆಯಿಂದ ಅವರ ಬುದ್ಧಿ ಶಕ್ತಿಯ ಅಗಾಧತ್ವವು ನನಗೆ ಚೆನ್ನಾಗಿ ಮನವರಿಕೆಯಾಯಿತು. .........ಲಕ್ಷ್ಮೀನಾರ್ಣಪ್ಪನೊಡನೊಮ್ಮೆ ಮಾತಾಡುವಾಗ, 'ವೆಂಕಟರಮಣ ಹೆಬ್ಬಾರರ ಮಿದುಳಿನ ಶಕ್ತಿಯ ಹತ್ತನೆಯ ಒಂದು ಪಾಲು ಸಹ ನನ್ನಲ್ಲಿಲ್ಲ'ವೆಂದು ಆತನೇ ಹೇಳಿದ್ದ..... ಅವರು, ರಾಮಾಭ್ಯುದಯದಲ್ಲಿ.......... ನಡು ನಡುವೆ ತಾವೂ ಹೊಸ ಪದ್ಯಗಳನ್ನು ರಚಿಸಿ ಸೇರಿಸಿಕೊಟ್ಟರು."

- ರಾಮಪಟ್ಟಾಭಿಷೇಕಕ್ಕೆ ಮುದ್ದಣನು ತನ್ನ ತಾಯಿ ಮಹಾಲಕ್ಷ್ಮಿಯನ್ನು ಕರ್ತೃವಾಗಿ ಮಾಡಿದ್ದುದು.*
- ಹೆಬ್ಬಾರರು ಮುದ್ದಣನಿಗಿಂತ ಮೂರು ವರ್ಷ ಚಿಕ್ಕವರು. ಯಕ್ಷಗಾನ ಕವಿಯೆಂದು ಹೆಸರು ಪಡೆದಿದ್ದ ಮುದ್ದಣನ ಕಾವ್ಯವನ್ನು ಅವರಾಗಿ ಓದಲಪೇಕ್ಷಿಸಿದರು.

ಹತ್ತೊಂಬತ್ತು ವರ್ಷದ ಈ ತರುಣನ ಮುಂದೆ ಮುದ್ದಣನು ತನ್ನ ಷಟ್ಪದೀ ಕೃತಿಯನ್ನು ತುಸು ಉದಾಸೀನದಿಂದಲೇ ಓದಿಹೇಳತೊಡಗಿದನು.** ಅದರ (ರಾಮಪಟ್ಟಾಭಿಷೇಕ) ಆರಂಭದಲ್ಲಿ ಆಸಕ್ತಿಯನ್ನು ಕುದುರಿಸುವ ಕಥಾಂಶವಾಗಲೀ ರಸಸ್ಯಂದಿಯಾದ ಭಾಗವಾಗಲಿ ಇಲ್ಲದಾಗ ಅದು 'ಕೇವಲ ಶಬ್ದಮಾಲೆ', 'ಜೈಮಿನಿ ಭಾರತದ ಕುರುಡು ಶೈಲಿ' ಎಂದು ಹೆಬ್ಬಾರರಿಗೆ ತೋರಿದುದರಲ್ಲಿ ತಪ್ಪೇನಿಲ್ಲ. ಆ ರೀತಿಯ ಆಕ್ಷೇಪವನ್ನೆತ್ತಿದ್ದಾಗ ಮುದ್ದಣನು 'ಈತ ತನ್ನ ಕಾವ್ಯವನ್ನು ಮೆಚ್ಚಲು ಅಶಕ್ತ; ಆದರೂ ಕೆಲವು ಸಂಗತಿಗಳಲ್ಲಿ ಗ್ರಾಹ್ಯವಾದ ವಿಮರ್ಶೆಯನ್ನು ಮಾಡಿದ್ದಾನೆ' - ಎಂದು ಭಾವಿಸಿದ್ದನಂತೆ.

ಮುಂದಿನ ಭೇಟಿಯಲ್ಲಿ ಈ ವಾಚನ - ವಿಮರ್ಶೆ ಮುಂದುವರಿಯಿತು. ಮುದ್ದಣನ ಅಪೂರ್ವ ಪ್ರಯೋಗಗಳಿಗೆ ಹೆಬ್ಬಾರರು ಸಂದೇಹವೆತ್ತಿದಾಗ, ಮುದ್ದಣನು ಅವಕ್ಕೆ ಸಮಾಧಾನ ಹೇಳಿದುದೂ ಇವರು ಅಲ್ಲಲ್ಲಿ ಒಪ್ಪಿಕೊಂಡದ್ದೂ ಇದೆ. ಈ ಕಾಲಕ್ಕೆ ಹೆಬ್ಬಾರರು ಗದ್ಯದಲ್ಲಿ ಕಾವ್ಯ ರಚನೆ ಏಕೆ ಮಾಡಬಾರದೆಂದು ಆಗಾಗ ಸೂಚಿಸುತ್ತ ಇದ್ದರು. ಇವರ ಸೂಚನೆಯಿಂದಲೇ ಮುದ್ದಣನ ಮುಂದಿನ ಕೃತಿ ರಚನೆಯು ಗದ್ಯದಲ್ಲಿ ನಡೆಯಿತೆಂದೇನಲ್ಲ. 'ಚಿಕ್ಕದೇವರಾಯ ವಂಶಾವಳಿ'ಯನ್ನು ನೋಡಿಯೊ ಯಾವಾಗಲೂ ನವೀನ ಮಾರ್ಗವನ್ನು ಅರಸುವ ಮನೋವೃತ್ತಿಯಿಂದಾಗಿಯೋ ಮುದ್ದಣನಿಗೆ ಗದ್ಯ ರಚನೆಯು ಹೃದ್ಯವೆಂದು ಕಂಡಿರಬೇಕು. ಇದಕ್ಕೆ ಬವುಳಾಡಿ ಹೆಬ್ಬಾರರ ಸಲಹೆಯೂ ತನ್ನದಷ್ಟು ಒತ್ತಡವನ್ನು ಹಾಕಿತು.

ಕನ್ನಡಿಗ - ಕಣ್ಣಡಿಗ ಎಂಬಲ್ಲಿಯ ಶ್ಲೇಷೆಯು ನಮಗೆ ಔಚಿತ್ಯ ಪೂರ್ಣವಾಗಿ ತೋರುತ್ತದೆ. ಅಡಿಯಲ್ಲಿ ಕಣ್ಣುಳ್ಳವನು ಯಾವನೋ ಅವನು = ಶಿವ ಎಂಬ ಕಾವ್ಯನಾಮವನ್ನು ಮುದ್ದಣನು ಪರ್ಯಾಯವಾಗಿ ಇಟ್ಟುಕೊಂಡಿದ್ದನೆನಿಸುತ್ತದೆ. ಅದನ್ನು ಮೊದಲು ಹೊರಗೆಡಹಿದವರು ಹೆಬ್ಬಾರರು. ಅವರ ನೆನಪಿನ ಪ್ರಕಾರ, ರಾಮಪಟ್ಟಾಭಿಷೇಕದಲ್ಲಿಯ ಆ ಪದ್ಯ ಭಾಗವು ಸುರುವಿಗೆ ಹೀಗಿದ್ದಿತು.

---

* ಈ ಲೇಖದಲ್ಲಿರದೇ, ಐರೋಡಿ ಶಿವರಾಮಯ್ಯನವರ ಲೇಖದಲ್ಲಿ ಬಂದ ಅವರ ಇನ್ನೊಂದು ಅಭಿಪ್ರಾಯವೆಂದರೆ - ಚಾವಡಿಯ ರಂಗಭಟ್ಟ - ಎಂದರೆ ಉಡುಪಿಯ ಶ್ರೀ ಕೃಷ್ಣನಂತೆ. ಅದರಲ್ಲಿ ಬೇರೆ ವಿಶೇಷಾರ್ಥ ಇಲ್ಲ.

** ಅವರಿಬ್ಬರ ಮೊದಲ ಭೇಟಿಯು ೧೮೯೦ರ ಸುಮಾರಿಗೆ ಆಯಿತೆಂದು 'ಹೇಳಿಕೆ'ಯಲ್ಲಿ ಇದ್ದರೂ ಈ ವಾಚನ ಕಾರ್ಯಕ್ರಮ ಮಾತ್ರ ೧೮೯೨ರಲ್ಲಿ ಜರುಗಿರಬೇಕು.

ಕನ್ನಡಿಗನೊರೆದ ನುಡಿಯೆಂದಿದಂ ಭಾವಿಸದೆ
ಕಣ್ಣಡಿಗನೊರೆದ ನುಡಿಯೆಂದು ಸಂಭಾವಿಪುದು.......

ಸಾಮಾನ್ಯ ಕನ್ನಡಿಗನೊಬ್ಬನ ಕಾವ್ಯವಿದೆಂದು ತಿಳಿಯದೇ ಸಾಕ್ಷಾತ್ ಶಿವನೇ (ಪಾರ್ವತಿಗೆ) ಹೇಳಿದ ಕಥಾನಕವೆಂದು ಇದನ್ನು ತಿಳಿಯಬೇಕು ಎನ್ನುವಲ್ಲಿ ಸಮಂಜಸತೆ ಇದೆ. ಅದ್ಭುತರಾಮಾಯಣದ ಪರಿಸಮಾಪ್ತಿ ಗದ್ಯದಲ್ಲಿಯೂ ಕುಮಾರವಿಜಯದಲ್ಲಿಯೂ ಮುದ್ದಣನು ಈ ಶ್ಲೇಷೆಯನ್ನು ತಂದಿದ್ದಾನೆ.

ಅದು ಅವನ ಕಾವ್ಯನಾಮವೂ ಆಗಬಲ್ಲುದು! ಮುಂದೆ ಮುದ್ದಣನು ಕನ್ನಡಿಗ ಎಂಬುದನ್ನು ತೆಗೆದು ಕನ್ನಡಿತಿಯೆಂದು ತಿದ್ದಿದನು. ನ, ಣಗಳಲ್ಲಿ ಪ್ರಾಸ ಸಲ್ಲುತ್ತಿದ್ದರೂ, ಬವುಳಾಡಿಯವರು ಟೀಕಿಸಿದರೆಂಬ ಕಾರಣದಿಂದಲೋ ಸಂಪಾದಕ -ಮುದ್ರಕರ ಕೈಯಾಡಿಕೆಯಿಂದಲೋ 'ಕಣ್ಣಡಿಗ'ವು* 'ಕನ್ನಡಿಗ' ಎಂಬುದಾಗಿ ಮಾರ್ಪಟ್ಟಿತು.

"ಅವರು (ಮುದ್ದಣ) ಕುಂದಾಪುರ ಇಂಗ್ಲೀಷ್ ಶಾಲೆಯ ಕುಸ್ತಿ ಮಾಸ್ತರರೆಂದೂ ರತ್ನಾವತೀ ಕಲ್ಯಾಣ, ಕುಮಾರ ವಿಜಯ - ಎಂಬ ಎರಡು ಯಕ್ಷಗಾನ ಪ್ರಸಂಗಗಳನ್ನು ರಚಿಸಿ, ಅಚ್ಚು ಹಾಕಿಸಿ, ಪ್ರಕೃತ ಕನ್ನಡ ಜೈಮಿನೀ ಭಾರತದ ಮಾದರಿಯಲ್ಲಿ ರಾಮಾಶ್ವಮೇಧ ಎಂಬ ಒಂದು ದೊಡ್ಡ ಗ್ರಂಥವನ್ನು ಬರೆಯಲು ಪ್ರಾರಂಭಿಸಿರುವರೆಂದೂ ತಿಳಿಯ ಬಂತು."

ಹೆಬ್ಬಾರರ ಈ ಹೇಳಿಕೆಯನ್ನು ಮುಖ್ಯವಾಗಿ ಆಧರಿಸಿಯೇ ರಾಮಪಟ್ಟಾಭಿಷೇಕವು ಮುದ್ದಣನ ಮೂರನೆಯ ಕೃತಿ; ಅದು ಅದ್ಭುತ ರಾಮಾಯಣದ ಅನಂತರ ರಚಿತವಾದುದಲ್ಲ- ಎಂದು ನಾವು ಭಾವಿಸುತ್ತೇವೆ. ರಾಮಪಟ್ಟಾಭಿಷೇಕದ ಎರಡು ವಾಚನ ಕಾರ್ಯಕ್ರಮ ಜರುಗಿ, ೩ ವರ್ಷಗಳ ಅನಂತರ ಮುದ್ದಣನು ಅವರಿಗೆ ಅದ್ಭುತ ರಾಮಾಯಣದ ಮುದ್ರಿತ ಪ್ರತಿಯನ್ನು ತಂದು ತೋರಿಸಿದನಂತೆ (೧೮೯೬).

ಮೊದಲಿಗೆ ಅವನ ಒಲವು ಪದ್ಯದ ಕಡೆಗೇ ಇದ್ದಿತು. ವಿಸ್ತಾರವಾದ ಭೂಮಿಕೆಯನ್ನಿಟ್ಟುಕೊಂಡು, ಅಶ್ವಮೇಧದ ಕತೆಯನ್ನು ಸುದೀರ್ಘ ಷಟ್ಪದೀ ಕಾವ್ಯವಾಗಿ ರಚಿಸಬೇಕೆಂಬುದು ಅವನ ಮನೀಷೆಯಾಗಿದ್ದಿತು. ಅಂತೆಯೇ ರಾಮಪಟ್ಟಾಭಿಷೇಕದ ಸುರುವಿಗೆ ಇಷ್ಟೊಂದು ದೇವತೆಗಳ ಸ್ತುತಿಯ, ಹಾಗೂ ಪೀಠಿಕಾರೂಪದ ಪದ್ಯಗಳಿದ್ದದ್ದು. ಮುಂದಿನ ಸಂಧಿಗಳಲ್ಲಿ ವರ್ಣನೆಗಳು (ಸಮುದ್ರ, ಅಯೋಧ್ಯಾಪುರ ಇ.) ಹೆಚ್ಚು ವಿಸ್ತಾರವಾಗಿದ್ದುದರಲ್ಲಿ ಮಹಾ ಕಾವ್ಯದ ಹೊಳಹನ್ನು ಕಾಣಬಲ್ಲೆವು. ಆದರೆ ರಾಮನ ಪಟ್ಟಾಭಿಷೇಕದವರೆಗೆ ಆ ಕಥೆ ಬಂದಾಗ, ಮುದ್ದಣ ಅದನ್ನು ನಿಲ್ಲಿಸಿದ - ಪ್ರಾಯಶಃ ಗದ್ಯದಲ್ಲಿ ಬರೆಯುವ ಅಪೇಕ್ಷೆಯಿಂದ.

* ಶಿವನ ಅಡಿಯಲ್ಲಿ ಕಣ್ಣು ಇರುವ ಕಥೆಯಾಗಲಿ, ಕಣ್ಣಡಿಗ ಎಂಬ ಪದವಾಗಲಿ ಅನೇಕ ಜನರಿಗೆ ಗೊತ್ತಿಲ್ಲ.

ಅಷ್ಟರವರೆಗಿನ ಕಾವ್ಯ ಭಾಗಕ್ಕೆ ಅನುಕೂಲವಾಗುಂತೆ ರಾಮಪಟ್ಟಾಭಿಷೇಕವೆಂದು ಶೀರ್ಷಿಕೆಯನ್ನಿಟ್ಟು ಒಳಗಿನ ಪದ್ಯಗಳಲ್ಲಿಯೂ ಅಲ್ಲಲ್ಲಿ ಮಾರ್ಪಾಟು ಮಾಡಿಕೊಂಡನು. ಇತ್ತ ಅದ್ಭುತ ರಾಮಾಯಣದಲ್ಲಿ ಕಥೆ ಸಾರವತ್ತಾಗಿ ಬಂದುದೂ ಅದು ಗದ್ಯದಲ್ಲಿರುವುದೂ ಮತ್ತು ಅದರಲ್ಲಿ ಸುರುವಿಗೆ ದೇವತಾ ಸ್ತುತಿ - ಇಲ್ಲದುದೂ ಆ ಕೃತಿಯು ರಾಮ ಪಟ್ಟಾಭಿಷೇಕದ ಅನಂತರದ ರಚನೆಯೆಂಬುದನ್ನು ದೃಢೀಕರಿಸುತ್ತದೆ.

ಹೆಬ್ಬಾರರ ಹೇಳಿಕೆಯ ಹಿಂದೆ, ಸ್ವಪ್ರತಿಷ್ಠೆಯನ್ನು ತೋರ್ಪಡಿಸುವ ಮನೋಭಾವ ಕಾಣುವುದಿಲ್ಲ. ಅವರು ತಾವಾಗಿ ಮುದ್ದಣನ ಕಾವ್ಯವನ್ನು ಓದಲು ಅಪೇಕ್ಷಿಸಿದರಂತೆ. ತಾವು ಎತ್ತಿದ ಆಕ್ಷೇಪಗಳಿಗೆ ಮುದ್ದಣನು ಸಮಾಧಾನ ಹೇಳಿದಾಗ, ತಮ್ಮ ಆಕ್ಷೇಪವು ನಿರಾಧಾರವೆಂಬುದನ್ನೂ ಅವರು ಪರ್ಯಾಯವಾಗಿ ಒಪ್ಪಿಕೊಂಡಿದ್ದಾರೆ. ಸಂಸ್ಕೃತ ಭೂಯಿಷ್ಠವಾದ ಮೊದಲಿನ ೯ ಪದ್ಯಗಳಲ್ಲಿ ಅಡಗಿದ್ದ 'ಶ್ರೀ ರಾಮಚಂದ್ರಾಯ ನಮಾಮಿ' ಎಂಬ ಉಕ್ತಿಯನ್ನು ಮುದ್ದಣನು ತೋರಿಸಿಕೊಟ್ಟನೆಂದು ಹೇಳುವಲ್ಲಿ. ಅಂಥ ಪದ್ಯಗಳನ್ನು ಆತ ರಚಿಸಬಲ್ಲನೆಂಬು ದನ್ನೂ ಅವರು ಒಪ್ಪಿಕೊಂಡಂತಾಗಿದೆ.

ಈ ಹಿನ್ನೆಲೆಯಲ್ಲಿ ಅವರು ೩೩ ಪದ್ಯಗಳನ್ನು ಬರೆದು ಕೊಟ್ಟದ್ದರ ಸತ್ಯಾಸತ್ಯತೆಯನ್ನು ಕಂಡು ಹಿಡಿಯಲು ಪ್ರಯತ್ನಿಸೋಣ. ಈ ಹೇಳಿಕೆ ಸುಳ್ಳು; ಮುದ್ದಣನು ಇನ್ನೊಬ್ಬರಿಂದ ಬರೆಯಿಸಿಕೊಳ್ಳುವಷ್ಟು ಪ್ರತಿಭಾಹೀನನಲ್ಲ - ಎಂದು ವಾದಿಸಿದ ವಿಮರ್ಶಕರಿದ್ದಾರೆ. ಆದರೆ ಈ ಹಣ್ಣು ಮುದುಕ, ಮುದ್ದಣನ ಖ್ಯಾತಿಯು ಇಷ್ಟೊಂದು ಡಾಣಾ ಡಂಗುರವಾಗಿದ್ದ ಕಾಲದಲ್ಲಿ 'ನಾನು ಮುದ್ದಣನಿಗೆ ಪದ್ಯ ಬರೆದುಕೊಟ್ಟೆ.' ಎಂದು ಕೊಚ್ಚಿಕೊಳ್ಳುವ ಕಾರಣವಾದರೂ ಏನಿದೆ? ಸ್ವಂತದ ಹೆಗ್ಗಳಿಕೆಗಾಗಿ, ಮುದ್ದಣನನ್ನು ಕೆಳಗಿಳಿಸುವ ಈ ಬುದ್ಧಿಪೂರ್ವಕವಾದ ಸುಳ್ಳನ್ನು ಅವರು ಹೇಳುವ ಸಂಭವನೀಯತೆ ಕಾಣದು. ಆದ್ದರಿಂದ ಅವರು ಕೆಲ ಪದ್ಯಗಳನ್ನು ಮುದ್ದಣನಿಗೆ ಬರೆದುಕೊಟ್ಟಿರಬಹುದು.

ಹಾಗಿದ್ದರೆ ಮುದ್ದಣನು ಅವನ್ನು ಖಂಡಿತವಾಗಿ ಸೇರಿಸಿಕೊಂಡಿರುವನೆ? ನೋಡುವ. 'ಭೂರಮೆ ಭುಜಾಗ್ರದೊಳ್' (ಪದ್ಯ ೬೦) - ಇದರ ಅನಂತರದ ೩೩ ಪದ್ಯಗಳಲ್ಲಿ ಬಂದ ವಿಷಯ ಇಂತಿದೆ:

೬೧ - ೬೩ ಸಾಮಾನ್ಯ ವರ್ಣನೆ. ೬೧ರಲ್ಲಿ ಶ್ಲೇಷೆ ಇದೆ.

೬೪ - ೭೦ ಮುನಿಗಳಿಂದ ರಾಮನ ಸ್ತೋತ್ರ. ಆಧ್ಯಾತ್ಮದ ಅಂಶಗಳಿವೆ.

೭೧ - ೭೭ ವಿಷ್ಣುವಿನ ದಶಾವತಾರ ವರ್ಣನೆ. (ಏಳು ಮಾತ್ರ ಇಲ್ಲಿವೆ).

೭೮-೮೧ ಸಾಮಾನ್ಯ ವರ್ಣನೆ. ೮೧ರಲ್ಲಿ ಜಯಜಯಕಾರವಿದೆ.

೮೨-೮೬ ರಾವಣ ಸಂಹಾರಿ - ಎಂಬರ್ಥದ ಮುನಿ ಸ್ತೋತ್ರ.

೮೭-೮೯ ಇಂದ್ರ, ಬ್ರಹ್ಮ, ಶಿವರಿಂದ ರಾಮ ಸ್ತುತಿ.

೯೦-೯೧ ಶ್ರೀರಾಮನ ಉತ್ತರ, ಕೃತಜ್ಞತಾ ಸಮರ್ಪಣೆ.

ಬಂಧದ ದೃಷ್ಟಿಯಿಂದ ಇವು ೩೩ ಪದ್ಯಗಳಲ್ಲಿ ಸಾತತ್ಯವಿದೆಯಾದ್ದರಿಂದ ಕರ್ತೃತ್ವ ನಿರ್ಣಯವು ಕಠಿಣ ಹೋಗುತ್ತದೆ. ಅದರಲ್ಲಿಯೂ ನಮಗೆ ಹೆಬ್ಬಾರರ ರಚನಾಶೈಲಿಯ ಪರಿಚಯವಿಲ್ಲ. ಮುದ್ದಣನದನ್ನು ಮಾತ್ರ ಚೆನ್ನಾಗಿ ಬಲ್ಲೆವು! ಅದರ ಆಧಾರದಿಂದ ಒಂದಷ್ಟು ಊಹನೆಯ ಕುದುರೆಯನ್ನು ಓಡಿಸೋಣವೆ?

ಸಂಸ್ಕೃತ ಶಬ್ದಗಳ ಶ್ಲೇಷೆಯನ್ನು ಮುದ್ದಣನು ಚೆನ್ನಾಗಿ ತರಬಲ್ಲ - ಎಂಬುದಕ್ಕೆ ನಾಂದೀ ಸಂಧಿಯ ಪದ್ಯಗಳು ಸಾಕ್ಷಿ. ಆದಕಾರಣ ೬ರ ಹಾಗೂ ಅದರ ಆಸುಪಾಸಿನ ಪದ್ಯಗಳನ್ನು ಮುದ್ದಣ ರಚಿಸಲಿಲ್ಲವೆಂದು ಹೇಳಲಿಕ್ಕಾಗದು. ದಶಾವತಾರ ವರ್ಣನೆಯ ಪದ್ಯಗಳಲ್ಲಿ ತೂಳ್ದೊಳರೆ, ಎಲೆವಾಸು, ಬಣಗು ಬೆಟ್ಟ, ಉಬುಬು, ಬಿಜು, ಉಗುರ್ವಿಸು ಮುಂತಾದ ಹಳಗನ್ನಡ ಶಬ್ದಗಳು ಸಾಕಷ್ಟು ಬಂದಿವೆ. ಇವು ಅವನ ಮುಂದಿನ ಕೃತಿಗಳಲ್ಲಿ ಕಂಡುಬರುವಂತಹವಾಗಿವೆ. ಈ ಮಾತು ಇಂದ್ರ, ಬ್ರಹ್ಮ, ಶಿವ ಸ್ತುತಿಪದ್ಯಗಳಿಗೂ ಅನ್ವಯಿಸುತ್ತದೆ. "ರಾವಣ ಸಂಹಾರಿಯಾಗಿ, ನಮ್ಮನ್ನು ರಕ್ಷಿಸಿದಿ - ಎಂಬ ಭಾವದ ಮುನಿಕೃತ ಸ್ತೋತ್ರಗಳಲ್ಲಿ 'ಕೃತಾರ್ಥರೆವು' 'ಕೃತಜ್ಞರೆವು', 'ಧನ್ಯರೆವು' - ಎಂಬ ವಿಶಿಷ್ಟವಾದ, ಶಬ್ದಮಣಿದರ್ಪಣ ಸೂತ್ರದ ಆಧಾರದಿಂದ ಸಿದ್ಧವಾದ ಕ್ರಿಯಾಪದಗಳು ಬರುತ್ತವೆ. ಈ ರೀತಿಯ ಪದಸಿದ್ಧಿ ಮುದ್ದಣನ 'ಪೇಟೆಂಟ್' ಆಗಿದ್ದುದರಿಂದ ಇವನ್ನು ಅವನೇ ರಚಿಸಿದನೆನ್ನಬೇಕು. ಕೊನೆಯ ನಾಲ್ಕು ಪದ್ಯಗಳು ಕಥೆಗೆ ಸಂಬಂಧಪಟ್ಟುವಾದ್ದರಿಂದ ಅವು ಕೂಡ ಮುದ್ದಣ ರಚಿತವೇ ಆಗಿರಬೇಕು.

ಬವ್ವಳಾಡಿ ಹೆಬ್ಬಾರರು ಬರೆದುಕೊಟ್ಟ ಪದ್ಯಗಳು ಯಾವವಾದರೂ ಇದ್ದದ್ದೇ ಆದರೆ, ಅವು ಅಧ್ಯಾತ್ಮ, ಉಪನಿಷತ್ತು, ಸಾಂಖ್ಯಯೋಗ ಮೊದಲಾದವುಗಳ ಛಾಯೆಯಿರುವ ೬೪-೭೦ರ ವರೆಗಿನ ಪದ್ಯಗಳಾಗಿರುವ ಸಂಭವವಿದೆ. ಆಧ್ಯಾತ್ಮದ ಮೆರುಗನ್ನು ಮುದ್ದಣನು ಮುಂದಿನ ತನ್ನ ಕೃತಿಗಳಲ್ಲಿ ಇದರಲ್ಲಿ ಎದ್ದು ಕಾಣುವಂತೆ ಬಂದ ಹಾಗೆ ತಂದಿಲ್ಲ. 'ಅಣೋರಣೀಯನುಂ ಮಹತೋಮಹೀಯನುಂ ನೀನೆಂಬುದಗ್ರತೆಯನು' (ಪದ್ಯ ೬೭). 'ನಿಗಮಾಳಿಯೊಲ್ದತ್ಯತಿಷ್ಠದ್ದಶಾಂಗುಲಮೆನೆ' ಎಂಬ ರೀತಿಯಲ್ಲಿ ಸಂಸ್ಕೃತ ಪ್ರಣಾಳಿಯನ್ನು ಕನ್ನಡ ವಾಕ್ಯದಲ್ಲಿ ಸೇರಿಸಿಕೊಂಡ ಬಂಧವು ಮುದ್ದಣನಲ್ಲಿ ಇತರತ್ರ ಕಂಡು ಬರುವಂಥದಲ್ಲ.

ಇವಿಷ್ಟು ಪದ್ಯಗಳನ್ನು ಸೇರಿಸಿಕೊಂಡದ್ದು ನಿಜವೇ ಇದ್ದುದಾದರೆ, ಅದರಿಂದ ಮುದ್ದಣನ ಯೋಗ್ಯತೆ - ಸರ್ವಥಾ ಕಡಿಮೆಯಾಗಬೇಕಾದ್ದಿಲ್ಲ. ಈ ರೀತಿಯ ಸ್ವೀಕರಣವು ರನ್ನನಿಂದ ಮೊದಲ್ಗೊಂಡು ನಮ್ಮ ಕವಿಗಳಲ್ಲಿ ಕಂಡು ಬಂದದ್ದೇ ಇದೆ. ಮುದ್ದಣನು ಮಳಲಿ ಸುಬ್ಬರಾಯರ ಪದಸಹಾಯವನ್ನು ಪಡೆಯಲಿಲ್ಲವೆ?

## ಸಂಸಾರಿಗ

ಕ್ರಿ. ಶ. ೧೮೮೩ರಲ್ಲಿ ಮುದ್ದಣನ ಮದುವೆಯಾಯಿತು. ವಧು-ಶಿವಮೊಗ್ಗ ಜಿಲ್ಲೆಯ ಕಾಗೆಕೋಡಮಗ್ಗಿ ಎಂಬ ಗ್ರಾಮದವಳು. ಹೆಸರು ಕಮಲಾಬಾಯಿ. ಮದುವೆಯ ಕಾಲಕ್ಕೆ ಅವಳು ಎಳವೆಯಲ್ಲಿದ್ದಳಾದರಿಂದ, ೨-೩ ವರ್ಷಗಳಾದ ಮೇಲೆ ಉಡುಪಿಗೆ ಬಂದು ಮುದ್ದಣನ ಮನೆ, ಮನಗಳನ್ನು ತುಂಬಿದಳು. ಇವರ ಬಿಡಾರವು ಹುರಳಿಯವರ ಮನೆಯ ನೆರೆಯಲ್ಲಿದ್ದಿತು.

ಮುದ್ದಣನಿಗೆ ಸಂಸಾರ ತಾಪತ್ರಯ ಎಷ್ಟರ ಮಟ್ಟಿಗೆ ಇದ್ದಿತು? ಚಿಕ್ಕದಾದ ಪರಿವಾರ. ಮುಗ್ಧ ಹೆಂಡತಿ. ಮಾಡಿ ಮಟ್ಟುವುದಕ್ಕೆ ಆತ್ಮೀಯ ಸೋದರತ್ತೆ; ಸಾಂಸ್ಕೃತಿಕ ಅಭಿರುಚಿಗಳಲ್ಲಿ ಪಾಲುಗೊಳ್ಳಲು ಹುರಳಿ ವೆಂಕಟಸುಬ್ಬರಾಯರಿದ್ದರು. ಆದ್ದರಿಂದ ಮುದ್ದಣನ ಸಾಹಿತ್ಯ ಸೆಲೆಯನ್ನು ಬತ್ತಿಸುವಂತಹ ಯಾವ ದಾರುಣ ಘಟನೆಯೂ ಸಂಸಾರ ಹೂಡಿದ ೩-೪ ವರ್ಷ ಇರಲಿಲ್ಲ. ಬಡತನವೆ? ಮುದ್ದಣನು ಕೊಡುತ್ತಿದ್ದ ಒಂದೂವರೆ ರೂಪಾಯಿ ಬಾಡಿಗೆಯ ಮೇಲಿಂದ, ಅಂದಿನ ಕಾಲದ ಜೀವನ ವೆಚ್ಚ ಯಾವ ಮಟ್ಟದ್ದೆಂಬುದನ್ನು ನಾವೇ ಊಹಿಸಿಕೊಳ್ಳಬಹುದು. ಆಗಿನ ಕಾಲಕ್ಕೆ ೧೫ ರೂ. ಸಂಬಳ ಪಡೆಯುತ್ತಿದ್ದ ಶಿಕ್ಷಕರು, ಸಾಹಿತ್ಯಿಕರು ಅನೇಕ ಜನರಿದ್ದರು. ಮೇಲಾಗಿ ಮುದ್ದಣನದು ಮಿತ ಪರಿವಾರ. ಅವನ ಸ್ವಂತದ 'ಬೇಕು'ಗಳಾದರೂ ಸೀಮಿತವಿದ್ದುವು.

ಹೀಗಿರುವಾಗ, ಹುರಳಿ ಭೀಮರಾಯರು ಅವನಿಗೆ ತುಂಬಾ ದುಡ್ಡಿನ ಅಡಚಣೆ ಇತ್ತೆಂಬ ಧಾಟಿಯಲ್ಲಿ ಬರೆದಿದ್ದಾರೆ. ಮದುವೆಗೆ ಮುಂಚೆಯೂ ಮುದ್ದಣನು ಅವರ ಅಣ್ಣನನ್ನು ಕೈಗಡ ಹಣ ಕೇಳುತ್ತಿದ್ದನಂತೆ. ಇವಾತ್ತೂರಿನಲ್ಲಿದ್ದ ತನ್ನ ತಂದೆಗೇನಾದರೂ ಪ್ರತಿ-ತಿಂಗಳು ಹಣ ಕಳುಹಿಸಬೇಕಾಗುತ್ತಿತ್ತೆ? ಅಥವಾ ಯಕ್ಷಗಾನ ಕೃತಿಗಳ ಮುದ್ರಣದ ಸಾಲವೆ? ಇತ್ತ ಹಳ್ಳಿಯಿಂದ ಬಂದು ನಗರವಾಸಿನಿಯಾಗಿದ್ದ ಕಮಲಾಬಾಯಿ ಅದು ಇದು ಬೇಕೆಂದು ಒತ್ತಾಸೆ ಕೊಡುತ್ತಿದ್ದಳೆಂದೂ ಭೀಮರಾಯರು ಹೇಳುತ್ತಾರೆ. ಕಾರಣವೇನೇ ಇರಲಿ ಹಾಗೆ ಕೈಗಡ ಪಡೆದ ಹಣವನ್ನು ಸಂಬಳ ಬಂದೊಡನೆ ನಿಯಮಿತವಾಗಿ ತೀರಿಸುತ್ತಿದ್ದನಂತೆ. ಇದು ಬಡ ಮಧ್ಯಮ ವರ್ಗದ ಎಲ್ಲ ಸಂಸಾರಿಗರಿಗೂ ಸಾಮಾನ್ಯ. ಆದಕಾರಣ ಮುದ್ದಣನಿಗೆ ದುಡ್ಡಿನ ಅಡಚಣೆ ಇದ್ದಿತಲ್ಲದೆ, ಕಡು ಬಡತನದ ಸ್ಥಿತಿ ಇತ್ತೆನ್ನಲಾಗದು. ಈ ವಿಷಯದಲ್ಲಿ ನಾವು ಅತಿಯಾದ ಮರುಕವನ್ನು ತೋರುವುದು ಬೇಡ. ಸ್ವಾಭಿಮಾನಿಯಾಗಿದ್ದ ಮುದ್ದಣನ ಆತ್ಮ ಅಂಥವರನ್ನು ಕ್ಷಮಿಸಲಿಕ್ಕೂ ಇಲ್ಲ.

ಕಮಲಾಬಾಯಿ ಹೇಗಿದ್ದಳು? ಹುರಳಿ ಭೀಮರಾಯರು ಅವಳ ಸ್ವಭಾವದ ಎಳೆಯೊಂದರ ಪರಿಚಯ ಮಾಡಿಕೊಟ್ಟಿದ್ದಾರೆ.

'ಹಳ್ಳಿಯ ಹೆಣ್ಣು ಪಟ್ಟಣ ಸೇರಿದಾಗ ಇಲ್ಲಿ ತಮ್ಮ ನಾಗರಿಕತನದ ನೆರೆಕರೆಯವರನ್ನು ಕಂಡು ತನಗೆ ಯಾವ ನೂತನ ವಸ್ತುಗಳು ಬೇಕೆಂದು ಕವಿಯನ್ನು ಕಾಡುತ್ತಿದ್ದಳೊ ನನಗೆ ತಿಳಿಯದಾದರೂ ನಮ್ಮಲ್ಲಿಗೆ ಆಗಾಗ ಬಂದು ನಮ್ಮ ತಾಯಿ, ಅಕ್ಕ ಅತ್ತಿಗೆಯವರೊಡನೆ ಆ

ಚವರಿ, ಈ ಸೀರೆ, ಆ ಬಾಚಣಿಗೆ, ಈ ರವುಕೆಯ ಬೆಲೆಯನ್ನಾಕೆ ವಿಚಾರಿಸಿಕೊಂಡು ಹೋಗುತ್ತಿದ್ದಳೆಂಬುದನ್ನು ಬಲ್ಲೆ. ಅಂತಲೇ ಆಕೆ ಆ ವಸ್ತುಗಳಲ್ಲಿ ಕೆಲವನ್ನಾದರೂ ತಂದುಕೊಡುವಂತೆ ಕವಿಯನ್ನು ಒತ್ತಾಯಪಡಿಸುತ್ತಿದ್ದಿರಬಹುದಾದ್ದು...... ಆಕೆ ಬಯಸಿದ್ದನ್ನು ತಂದುಕೊಡಲು ಶಕ್ತಿ ಇಲ್ಲದೆ ಅವಳ ಬಾಯಲ್ಲಿ ಕವಿ ಸಿಕ್ಕಿ ಪೇಚಾಡುತ್ತಿರಬಹುದಾದದ್ದೂ ಹೊಸ ಸಂಸಾರದಲ್ಲಿ ಸಹಜವಾಗಿ ಕಂಡು ಬರುವಂಥದೇ.'

ಭೀಮರಾಯರ ಈ ಹೇಳಿಕೆಯಲ್ಲಿ ಕಮಲಾಬಾಯಿಯು ಸ್ವಲ್ಪ ಕಿರುಕುಳ ಕೊಡುತ್ತಿದ್ದ ಹೆಂಗಸೆಂಬ ಭಾವನೆ ಇದೆ. ಇದಕ್ಕೂ ಮುಂದೆ ಹೋಗಿ, 'ಎಳವೆಂಡಿರ ಕೈಯಲ್ಲಿರುವ ಕವಿಗಳ ಬಾಳು ದೂಷ್ಯ'ವೆಂಬುದಾಗಿ ಮುದ್ದಣನು ಸ್ವಾನುಭವದಿಂದ ಹೇಳಿದ್ದಾನೆಂದೂ ಅವರು ಅಭಿಪ್ರಾಯಪಟ್ಟಿದ್ದಾರೆ. ಹುರಳಿಯವರು ಅವಳನ್ನು ಪ್ರತ್ಯಕ್ಷ ಕಂಡಿರುವರಾದರೂ ನಮಗೇನೊ ಆಕೆಯ ಈ ಬಗೆಯ ಕಿರುಕುಳದ ಬಗ್ಗೆ ಮುದ್ದಣನು ಬೇಸತ್ತಿದ್ದಂತೆ ಅನಿಸುವುದಿಲ್ಲ. ಮದುವೆಯ ಮೊದಲ ವರ್ಷಗಳವು. ಆದ್ದರಿಂದ ಎಳೆವೆಂಡಿರ ವಿಚಾರದ ಆ ಉಕ್ತಿಯು ಅವನ ರಸಿಕತೆಯ ದ್ಯೋತಕವೆಂದು ತಿಳಿಯತಕ್ಕುದು.

ವಿನೋದೀ ಸ್ವಭಾವದ ಮುದ್ದಣನು ಈ ಹಳ್ಳಿಯ ಹೆಣ್ಣನ್ನು ರೇಗಿಸಿ ನಗಿಸುತ್ತಿದ್ದನೆಂಬ ಅವರ ಹೇಳಿಕೆಯು ಸಂಪೂರ್ಣ ನಿಜವಾಗಿ ತೋರುತ್ತದೆ. ಇತ್ತ ಇವನ ಕಾವ್ಯ ವಿಚಾರವನ್ನು ಅವಳು ಮೆಚ್ಚಬಲ್ಲವಳಾಗಿದ್ದಳೆಂಬುದು ಸಂಶಯಾಸ್ಪದ. ಆದರೆ ಮನೋರಮೆಯ ಸೃಷ್ಟಿಗೆ ಅವಳೇ ಬಹುಮಟ್ಟಿಗೆ ನಿಮಿತ್ತಳಾದಳು. ಆ ದೃಷ್ಟಿಯಿಂದ ಕನ್ನಡ ಕಾವ್ಯ ರಸಿಕರೆಲ್ಲ ಅವಳಿಗೆ ಋಣಿಯಾಗಿರಬೇಕು.

ಮುದ್ದಣನ ಕಾವ್ಯಾಭಿರುಚಿಯನ್ನು ವಿಕಸಿಸಲು, ಹುರಳಿ ವೆಂಕಟಸುಬ್ಬರಾಯರು ನೀಡಿದ ಪ್ರೋತ್ಸಾಹ ಅನನ್ವಿತವಾದುದು. ಅವರಿಬ್ಬರೂ ಜೊತೆಗೂಡಿ ಯಕ್ಷಗಾನ ಬಯಲಾಟ, ತಾಳಮದ್ದಳೆಗಳಿಗೆ ಹೋಗುತ್ತಿದ್ದರು. ಸಂಗೀತದ ಕಾರ್ಯಕ್ರಮದಲ್ಲಿಯೂ ಆಗೀಗ ಪಾಲುಗೊಳ್ಳುತ್ತಿದ್ದರು. ಅವರಲ್ಲಿದ್ದ ಪಿಟೀಲನ್ನು ಕೈಗೆತ್ತಿಕೊಂಡು ಮುದ್ದಣನು ತಾನೊಬ್ಬನೇ ಪ್ರ್ಯಾಕ್ಟೀಸು ಮಾಡುತ್ತಿದ್ದನಂತೆ. ಅವರೊಳಗೆ ಗ್ರಂಥ ವಿನಿಮಯವೂ ನಡೆಯುತ್ತಿತ್ತು. ಸುಸ್ವಭಾವದ ಮುದ್ದಣನಿಗೆ ಅವರ ಮನೆಯಲ್ಲಿ ಆತ್ಮೀಯವಾದ ಆದರಾತಿಥ್ಯ ಸಲ್ಲುತ್ತಿತ್ತು. ಅವರಿಬ್ಬರ ಸ್ನೇಹ ಎಷ್ಟೆಂದರೆ, ವೆಂಕಟಸುಬ್ಬರಾಯರು ವರ್ಗವಾಗಿ ಹೋದ ಮೇಲೆ ತಮ್ಮ ಮನೆಯ ಒಂದು ಭಾಗವನ್ನು ಮುದ್ದಣನ ಬಿಡಾರಕ್ಕೆಂದು ಬಿಟ್ಟುಕೊಟ್ಟರು.

ಈ ಸಮಯಕ್ಕೇನೆ (೧೮೯೫) ಮುದ್ದಣನು ಮಂಗಳೂರಿನ ಸರಕಾರಿ ಕಾಲೇಜಿನ ಕನ್ನಡ ಅಧ್ಯಾಪಕನ ಸ್ಥಾನಕ್ಕೆ ಸ್ಪರ್ಧಿಸಿದುದು. ಸಂಬಳ ೨೦ ರೂ. ಹಳಗನ್ನಡವನ್ನು ಮೇಲಿನ ಇಯತ್ತೆಗಳಿಗೆ ಕಲಿಸಬಲ್ಲೆ - ಎಂಬ ಆತ್ಮವಿಶ್ವಾಸ ಅವನಲ್ಲಿ ಇದ್ದಿತು. ಆದರೆ ಅದು ಗ್ರ್ಯಾಜುಯೇಟ್ ಆದ ಪಂಜೆ ಮಂಗೇಶರಾಯರಿಗೆ ಸಂದಿತು. ಈ ನಿಮಿತ್ತದಿಂದ ಅವರು ಮುದ್ದಣನಿಗೆ ಪತ್ರ ಬರೆದು, ಅವನನ್ನು ಹೊಗಳಿದ ಸಂದರ್ಭವನ್ನು ನೆನೆದುಕೊಳ್ಳಬೇಕು.

ಆಗ ಮುದ್ದಣನ ಎರಡು ಯಕ್ಷಗಾನ ಕೃತಿಗಳಷ್ಟೇ ಬೆಳಕಿಗೆ ಬಂದಿದ್ದವು. ಮುದ್ದಣನು ತಮಗಿಂತ ಮೇಲ್ಮಟ್ಟದ ಕನ್ನಡ ತಜ್ಞ ಎಂದು ಅವರು ಭಾವಿಸಲು 'ಕುಮಾರ ವಿಜಯ'ವೊಂದೇ ಸಾಕಾಯಿತು.

ಇನ್ನೀಗ ಈ ಅವಧಿಯಲ್ಲಿಯ ಅವನ ಕೃತಿ ರಚನೆ, ಕ್ರಿ.ಶ. ೧೮೯೩ಕ್ಕೆ ಮುಂಚೆ ಎರಡು ಯಕ್ಷಗಾನ ಕೃತಿಗಳನ್ನು ಪ್ರಕಟಿಸಿದ ಅನಂತರ, ಮುದ್ದಣನು ಮಾರ್ಚ್ ೧೮೯೫ರಲ್ಲಿ ಅದ್ಭುತ ರಾಮಾಯಣವನ್ನೂ ಸೆಪ್ಟೆಂಬರದಲ್ಲಿ ರಾಮಪಟ್ಟಾಭಿಷೇಕವನ್ನೂ ಪ್ರಕಟಣೆಗಾಗಿ ಕಾವ್ಯಮಂಜರಿಯವರಿಗೆ ಕಳಿಸಿದನು. ಇವುಗಳ ಮುದ್ರಣೇತಿಹಾಸ ನೋಡುವ ಹಾಗಿದೆ. ಅದ್ಭುತ ರಾಮಾಯಣದ ಮುದ್ರಣವು ಜುಲೈಯಿಂದ ಮೊದಲಾಗಿ ಅಕ್ಟೋಬರದಲ್ಲಿ ಮುಗಿಯಿತು; ಮೇ ೧೮೯೬ರಲ್ಲಿ ಟಿಪ್ಪಣಿ ಸಹಿತವಾಗಿ ಗ್ರಂಥ ರೂಪದಲ್ಲಿ ಹೊರ ಬಂದಿತು. ಇತ್ತ ರಾಮಪಟ್ಟಾಭಿಷೇಕವು ಅದ್ಭುತ ರಾಮಾಯಣದ ಮುದ್ರಣ ಮುಗಿದೊಡನೆ, ಎಂದರೆ ನವೆಂಬರ್ ೧೮೯೫ರಿಂದ ಕಾವ್ಯ ಮಂಜರಿಯಲ್ಲಿ ಕ್ರಮಶಃ ಅಚ್ಚಾಗತೊಡಗಿ ಜನವರಿ ೧೮೯೬ಕ್ಕೆ ಮುಗಿಯಿತು. ಇದು ಮಾತ್ರ ಗ್ರಂಥ ರೂಪದಲ್ಲಿ ಹೊರಬರಲು ಒಂದು ವರ್ಷವನ್ನೇ ತೆಗೆದುಕೊಂಡಿತು (ಜನವರಿ ೧೮೯೭). ಅದಕ್ಕೆ ಕಾರಣ, ರಾಮಾನುಜಯ್ಯಂಗಾರರಿಗೆ, ಕವಯಿತ್ರಿ ಮಹಾಲಕ್ಷ್ಮಿಯ ಬಗ್ಗೆ ಮಾಹಿತಿ-ದೊರಕಿಸುವುದಕ್ಕೂ ಕಠಿಣವಾದ ಆ ಪದ್ಯಗಳಿಗೆ ಟಿಪ್ಪಣಿ ಬರೆಯುವುದಕ್ಕೂ ಬೇಕಾಗಿದ್ದ ಸಮಯ.

ರಾಮಾಶ್ವಮೇಧವನ್ನಾದರೂ ಅವನು ಇದೇ ಅವಧಿಯಲ್ಲಿ ಎಂದರೆ ೧೮೯೬ರಲ್ಲಿ (ಹಾಗೂ ೧೮೯೭ರ ಆರಂಭದಲ್ಲಿ) ಬರೆದು ಮುಗಿಸಿದನು. ಅಂತೂ ಈ ಅವಧಿಯು ಅವನ ಪ್ರತಿಭೆಯ ಊರ್ಜಿತಾವಸ್ಥೆಯನ್ನೂ ಬರೆಹದ ವಿಕಾಸವನ್ನೂ ಕಂಡಿದೆ.

ಇದು ಅವನ ಜೀವನದ ಏರಿಕೆಯ ಕಾಲವೂ ಅಹುದು. ಹರೆಯದ ಹುಮ್ಮಸ್ಸು; ಹೊಸದಾಗಿ ಹೂಡಿದ ಸಂಸಾರ; ತನ್ನ ಕೃತಿಗಳಿಗೆ ಪ್ರಕಟನಾರೂಪದ ಪುರಸ್ಕಾರ; ರಾಮಾಶ್ವಮೇಧದಂತಹ ಮೇಲ್ದರ್ಜೆಯ ಗ್ರಂಥವು ಪೂರ್ತಿಯಾದಾಗಿನ ಸಾರ್ಥಕ್ಯ ಭಾವ. ಈ ಪರಿಸ್ಥಿತಿಯಲ್ಲಿ ಆಗಿನ ಅವನ ವ್ಯಕ್ತಿತ್ವವು ಚೈತನ್ಯಪೂರ್ಣವಾಗಿದ್ದಿತಲ್ಲವೆ. ನಮ್ಮ ನೆಚ್ಚಿನ ಮುದ್ದಣನ ರೂಪ, ಗುಣ ಸ್ವಭಾವಗಳೆಂತಿದ್ದುವೆಂಬುದನ್ನು ಇಂಥ ಏರಿಕೆಯ ಕಾಲದಲ್ಲಿಯೇ ನೋಡಲಿಚ್ಛಿಸುತ್ತೇವೆ.

ಅವನನ್ನು ಕಣ್ಣಾರೆ ಕಂಡವರ ವರ್ಣನೆಯ ಪ್ರಕಾರ ಮುದ್ದಣನು ಎರಡು ಮುಡಿ ಅಕ್ಕಿಯನ್ನು ನಿರಾಯಾಸವಾಗಿ ಎತ್ತಬಲ್ಲಂಥ ಸದೃಢನಾಗಿದ್ದನು. ೫ ಅಡಿ, ೪ ಅಂಗುಲದ ಸಾಮಾನ್ಯ ನಿಲುವಿಕೆಯ ದುಂಡಗಿನ ಮೈಕಟ್ಟು ಅವನದು. ಸಾದುಗಪ್ಪಿನ ಬಣ್ಣ. ವಿಶಾಲವಾದ ಹಣೆ. ಅದರ ಮೇಲೆ ಸಾದಿನ ಬೊಟ್ಟು, ತುಂಬು ಗಲ್ಲ. ಕಾಂತಿಯುಕ್ತವಾದ ಕಣ್ಣುಗಳು. ಎಡ ಮುಂಗೈಯ ಮೇಲೆ N. L. N. ಎಂಬ ಹಚ್ಚೆ ಇದ್ದಿತು. ಮುಖಚರ್ಯೆಯು ಅವನ ತೀಕ್ಷ್ಣ ಬುದ್ಧಿಯ ಕನ್ನಡಿಯಾಗಿತ್ತಂತೆ. ನಡಿಗೆಯಲ್ಲಿ ಗಾಂಭೀರ್ಯವೂ ನಡೆವಳಿಕೆಯಲ್ಲಿ ನಯವಿನಯವೂ ಹೊರಸೂಸುತ್ತಿದ್ದವು. ಬಿಳಿಯ ಧೋತರ, ಹಳೆಯ ಕಾಲದ ಕೋಟು ಮತ್ತು ತಲೆಗೆ ರುಮಾಲು, ಈ ವೇಷದಲ್ಲಿ ಅಚ್ಚುಕಟ್ಟೂ ಸಾದಾತನವೂ ಒಡೆದು ತೋರುತ್ತಿತ್ತು.

ಮುದ್ದಣನ ಧ್ವನಿ ಸ್ವಲ್ಪ ಕೀರಲಾಗಿದ್ದರೂ ಭಾಷೆ ಶುದ್ಧ, ಮಾತು ಮಿತ; ಯಾರೊಡನೆ ಎಷ್ಟು ಬೇಕೊ ಅಷ್ಟೇ. ಆದರೆ ಸ್ನೇಹಪರ. ತುಸು ಆತ್ಮೀಯರಿದ್ದರೆ ಸಹಜ ಹಾಸ್ಯವು ಮಾತಿನಲ್ಲಿ ಹೊರಹೊಮ್ಮುತ್ತಿತ್ತಂತೆ.

ಅವನ ಗ್ರಹಣ ಶಕ್ತಿ ಸ್ಮರಣ ಶಕ್ತಿ ಅದ್ಭುತವಾಗಿದ್ದಿತೆಂಬ ಅಭಿಪ್ರಾಯದಲ್ಲಿ ಎರಡಿಲ್ಲ. ಟೆಲಿಗ್ರಾಫಿನ ನಿಯಮಗಳನ್ನು ಬರಿ ಓದಿಕೊಂಡ ಬಲದಿಂದಲೇ ತಂತಿ ಕಛೇರಿಯ ಹೊರಗಿದ್ದುಕೊಂಡು, ಒಳಗೆ ಕೇಳಿಬರುವ ಟಿಕ್ ಟಿಕ್ ಸಂಕೇತದ ಅರ್ಥವನ್ನು ಹೇಳಬಲ್ಲವನಾಗಿದ್ದನಂತೆ. ಶಬ್ದಗಳ ಮರ್ಮವನ್ನು ಗ್ರಹಿಸುವ ವಿಷಯದಲ್ಲಿ ಆತ ನಿಷ್ಣಾತನಾಗಿದ್ದ. ಅಂತಲೇ ನಿಯಮಿತವಾದ ಗುರು ಸಹಾಯವಿಲ್ಲದೆ ಅನೇಕ ಶಾಸ್ತ್ರ, ಪುರಾಣ ವಿಷಯಗಳನ್ನೂ ಹಳೆಯ ಕಾವ್ಯಗಳನ್ನೂ ತಾನಾಗಿ ಮನನ ಮಾಡಿದ್ದ; ಏಕಪಾಠಿಯಾಗಿದ್ದ ನೆಂದೂ ಹೇಳುವುದುಂಟು. ಆದರಿಂದಾಗಿಯೇ ಅವನ ಬರವಣಿಗೆ ತ್ವರೆಯುಳ್ಳದ್ದಾಗಿತ್ತು. "ಇತರರು ನಾಲ್ಕಾರು ಪಂಕ್ತಿಗಳನ್ನು ಬರೆಯುವುದರೊಳಗೆ ಆತ ಒಂದರ್ಧ ತಾವನ್ನೇ ಬರೆದು ಮುಗಿಸಿ ಬಿಡುತ್ತಿದ್ದ" (ಐ. ಶಿವರಾಮಯ್ಯ).

ಆತನ ಸ್ವಭಾವದ ಮುಖ್ಯ ಲಕ್ಷಣವೆಂದರೆ - ಸರಸ ಸಜ್ಜನಿಕೆ. ಸಾಹಿತ್ಯ ಸಂಗೀತಗಳೇ ಅವನ ಅಭಿರುಚಿಯ ಮುಖ್ಯ ಅಂಗಗಳು. ಸೂಕ್ಷ್ಮವಾಗಿ ನೋಡಿದಲ್ಲಿ ಅವನ ರುಚಿಶುದ್ಧಿ ಕಂಡುಬಾರದಿರದು. ಮೂಲ ಅದ್ಭುತ ರಾಮಾಯಣದಲ್ಲಿ 'ಸ್ತ್ರೀ ಸಂಗಮೇ, ತಥಾ ಗೀತೇ ಕ್ಷುತೇನ್ಯಾಖ್ಯಾನ ಸಂಗಮೇ ವ್ಯವಹಾರೇಚ..' ಎಂಬ ಭಾವವನ್ನು ಕನ್ನಡದಲ್ಲಿ ತರುವಾಗ 'ಸ್ತ್ರೀ ಸಂಗ' ಪದವನ್ನು ಬಿಟ್ಟು ಬಿಟ್ಟಿದ್ದಾನೆ. ಅವನ ಕೃತಿ ಪಂಚಕದಲ್ಲಿ ಸುಮಾರು ೬೦೦ ಸಲ ಸ್ತ್ರೀ ವಾಚೀ ಶಬ್ದಗಳು ಬರುತ್ತವೆ. ಅವುಗಳಲ್ಲಿ ನಿತಂಬ, ಸ್ತನಗಳನ್ನು ಹೇಳುವಂಥ ಅತಿ-ಶೃಂಗಾರದ ಪದಗಳು ಕೆಲವೇ ಇವೆ.

ಮುದ್ದಣನಲ್ಲಿ ದಾರಿದ್ರ್ಯ ಮೂಲವಾದ ಕೀಳ್ತನ ಭಾವ ಇತ್ತೆಂದು ಹೇಳಲಾಗುತ್ತಿದೆ. ಇದನ್ನು ನಾವು ಒಪ್ಪಲಾರೆವು. ತನ್ನ ಹೆಸರನ್ನು ಮರೆಯಿಸಿದುದಕ್ಕೆ ಕೀಳ್ತನದ ಭಾವ ಕಾರಣವಲ್ಲ. ತಾನಾಗಿ ನುಗ್ಗಿ ಮುಂದುವರಿಯುವ (pushing nature) ಪ್ರವೃತ್ತಿ ಅವನದಾಗಿರಲಿಲ್ಲ. ಕೃತಿ ರಚನೆಯ ಸುರುವಾತಿಗೆ ಒಂದಷ್ಟು ಅಳುಕು, ಸಂದೇಹ ಯಾರಿಗೂ ಇರತಕ್ಕದ್ದೇ. ಯಕ್ಷಗಾನ ಕೃತಿಗಳ ಆರಂಭದಲ್ಲಿ (ಅದರಂತೆ ರಾಮಪಟ್ಟಾಭಿಷೇಕದಲ್ಲಿ) 'ದೋಷಮೇನಾನುಮುಳ್ಳೊಡಂ ತಿರ್ದುಗೆ' ಎಂದು ಹೇಳಿದವನಿಗೆ, ಅದ್ಭುತ ರಾಮಾಯಣ ಮತ್ತು ರಾಮಾಶ್ವಮೇಧಗಳನ್ನು ಬರೆಯುವ ಕಾಲಕ್ಕೆ ಇದರ ನೆನಪೇ ಬರಲಿಲ್ಲ! ಅದ್ಭುತ ರಾಮಾಯಣದಲ್ಲಿ 'ಕನ್ನಡಗಬ್ಬಿಗರ ಮನೆಯೂಳಿಗದವ'ನಾಗಿದ್ದ ಕವಿ, ಮುಂದೆ ರಾಮಾಶ್ವಮೇಧದಲ್ಲಿ 'ಕಬ್ಬಿಗರ ಬಲ್ಲಹ'ನಾಗುತ್ತಾನೆ! ಅವನ ಆತ್ಮವಿಶ್ವಾಸ ಕೃತಿಯಿಂದ ಕೃತಿಗೆ ಹೆಚ್ಚುತ್ತ ಹೋಗುತ್ತಿದ್ದುದರ ನಿದರ್ಶನವಿದು. ಮುಂದಂತೂ ಬೆನಗಲ್ ರಾಮರಾಯರೆದುರು 'ಬೇಕೆಂದರೆ ಇಂಥ ಹತ್ತಾರು ಗ್ರಂಥ ಬರೆಯಬಲ್ಲೆ' ಎಂದು ಹೇಳಿಯೇ ಬಿಟ್ಟಿದ್ದಾನೆ.

ಮಾರ್ಚ್ ೧೮೫೭ರಲ್ಲಿ ಮುದ್ದಣನು ಉಡುಪಿಯ ಕ್ರಿಶ್ಚಿಯನ್ ಶಾಲೆಯಲ್ಲಿ ಕನ್ನಡ ಶಿಕ್ಷಕನೆಂದು ನೇಮಕ ಹೊಂದಿದ. ಪ್ರತಿಭಾನ್ವಿತನಾಗಿದ್ದ ಈ ಮುದ್ದಣನು ಮೇಲ್ದರ್ಜೆಯ ಶಿಕ್ಷಕನಾಗಿರಬೇಕು. ವಿದ್ಯಾರ್ಥಿಗಳಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಆಸ್ಥೆಯನ್ನು ಕುದುರಿಸಿರಬೇಕು. ಶಾಲೆಯಲ್ಲಿ ಕಲಿತು, ಹೆಚ್ಚಿನ ಶಿಕ್ಷಣಕ್ಕಾಗಿ ಮದ್ರಾಸಿಗೆ ಬಂದಿದ್ದ ಕೆಲವು ವಿದ್ಯಾರ್ಥಿಗಳು ಅವನ ಸಾಹಿತ್ಯ ಪ್ರೇಮ, ವಿದ್ವತ್ತೆಯನ್ನು ಬೆನಗಲ್ ರಾಮರಾಯರೆದುರು ವರ್ಣಿಸುತ್ತಿದ್ದರಂತೆ. ನಮಗೆ ತಿಳಿದ ಮಟ್ಟಿಗೆ ಅವನ ಸಾಹಿತ್ಯಪ್ರೇಮೀ ಶಿಷ್ಯರಲ್ಲಿ ಎನ್. ರಾಜಗೋಪಾಲಕೃಷ್ಣರಾಯರ ಹೆಸರು ಎದ್ದು ಕಾಣುವಂತಹುದು. ಸುಪ್ರಸಿದ್ಧವಾದ ಶ್ರೀ ಕೃಷ್ಣಸೂಕ್ತಿ - ಪತ್ರಿಕೆಯನ್ನು ಆರಂಭಿಸಿದವರು. ಮುದ್ದಣನಿಗೆ ಇವರ ಮೇಲೆ ವಿಶೇಷ ವಾತ್ಸಲ್ಯ, ಆತ್ಮೀಯತೆಗಳಿದ್ದುವು. ಇನ್ನೊಬ್ಬರು, ಗುಳವಾಡಿ ಅಣ್ಣಾಜಿರಾಯರು, 'ರೋಹಿಣಿ' ಎಂಬ ಇವರ ಕೃತಿಯು ಕನ್ನಡದ ಆದ್ಯ ಸ್ವತಂತ್ರ ಸಾಮಾಜಿಕ ಕಾದಂಬರಿಗಳಲ್ಲಿ ಒಂದಾಗಿದೆ. ಮುದ್ದಣನು ತನ್ನ ಹಸ್ತಪ್ರತಿಯೊಂದನ್ನು ಇವರಿಗೆ ಕೊಟ್ಟಿದ್ದುದರ ಪ್ರಸ್ತಾಪ ಒಂದೆಡೆ ಬರುತ್ತದೆ.

ಅಚ್ಚರಿಯೆಂದರೆ, ಡ್ರಿಲ್ ಮಾಸ್ತರನಿದ್ದಾಗ ಕೈಗೊಂಡಿದ್ದ ಕೃತಿರಚನೆ, ಕನ್ನಡ ಮಾಸ್ತರನಿದ್ದಾಗ ಕಂಡು ಬರುವುದೇ ಇಲ್ಲವಲ್ಲ! ಕೊನೆಯ ಕೃತಿಯಾದ ರಾಮಾಶ್ವಮೇಧದಲ್ಲಿ ಅವನ ಪ್ರತಿಭೆ ಇಷ್ಟೊಂದು ಉಜ್ವಲವಾಗಿ ಪ್ರಕಾಶಗೊಂಡಾಗ ಅನಂತರ ಏನನ್ನೂ ಬರೆಯದೆ ನಿಷ್ಕ್ರಿಯನಿದ್ದನೆ? ಅಂತೂ ಹಿಂದಿನ ಮೂರು ವರ್ಷ ಸುಮ್ಮನುಳಿದುದಕ್ಕೆ ತೃಪ್ತಿಕರವಾದ ವಿವರಣೆ ದೊರೆಯದು. ಅವನ ಅಪೂರ್ಣ ಹಾಗೂ ಅಪ್ರಕಟಿತವಾದ ಕೆಲವು ಕೃತಿಗಳು ಈ ಅವಧಿಯಲ್ಲಿ ರಚಿತವಾಗಿರಬಹುದೆಂಬ ಸೂಚನೆಯನ್ನು ಮಾಡಬಹುದು; ಅಷ್ಟೇ.

ಇಂಥ ಕೃತಿಗಳಲ್ಲಿ ಮುಖ್ಯವಾದದ್ದೆಂದರೆ, ಹಳಗನ್ನಡಕ್ಕೆ ಹೊಸ ರೀತಿಯ ವ್ಯಾಕರಣ ರಚನೆ. ಅವನು ಶಬ್ದಮಣಿದರ್ಪಣವನ್ನು ಆಳವಾಗಿ ಅಭ್ಯಸಿಸಿಯೇ ಇದ್ದ. ಸೂತ್ರರೂಪವಾದ ವ್ಯಾಕರಣವೊಂದನ್ನು, ವೃತ್ತಿ ಸಹಿತವಾಗಿ ಶಬ್ದಾನುಶಾಸನದ ಮಾದರಿಯಲ್ಲಿ ರಚಿಸುವ ವಿಚಾರ ಅವನದಿದ್ದಿತು. ಈ ಪ್ರಯತ್ನದಲ್ಲಿ ಅಕ್ಷರ ಪ್ರಕರಣವನ್ನು ಮುಗಿಸಿದ್ದನೆಂದೂ ಹೇಳಲಾಗುತ್ತದೆ. ಇದು ಅವನ ಮನದೊಲವಿನ ವಿಷಯವಾದ್ದರಿಂದ, ಇದರ ರಚನಾ ಪ್ರಯತ್ನದಲ್ಲಿ ಹೆಚ್ಚಿನ ಸಂಭವನೀಯತೆ ಇದೆ. ಈ ಎತ್ತುಗಡೆಯನ್ನು ಐರೋಡಿ ಶಿವರಾಮಯ್ಯನವರು ದೃಢೀಕರಿಸಿದ್ದಾರೆ. ಅವರು ಈ ಕೆಲಸಕ್ಕೆಂದೇ ಹಲವು ಹಳಗನ್ನಡ ಹಸ್ತಪ್ರತಿಗಳನ್ನು ಮುದ್ದಣನಿಗೆ ಒಪ್ಪಿಸಿದ್ದರಂತೆ. ಅಲ್ಲದೆ, ತತ್ಸಮ ತದ್ಭವಗಳ ದೊಡ್ಡದೊಂದು ಪಟ್ಟಿ ತಯಾರಿಸಿ ಮುದ್ದಣನು ಆ ಪುಸ್ತಕದಲ್ಲಿ ಸೇರಿಸಬೇಕೆಂದಿದ್ದನಂತೆ. ಅದರಂತೆ ಎನ್‌ಸೈಕ್ಲೋಪೀಡಿಯಾದ ಮಾದರಿಯಲ್ಲಿ ಕೋಶವೊಂದನ್ನು ಬರೆಯುವ ಹಂಬಲವನ್ನು ಸಹ ಅವರೆದುರು ವ್ಯಕ್ತಪಡಿಸಿದ್ದನಂತೆ.

ಕನ್ನಡದಲ್ಲಿ ಭಗವದ್ಗೀತೆಯನ್ನು ಬರೆಯಬೇಕೆಂದಿದ್ದನೆ? ಕಾಪು ಅಂಗಾರ ಸೆಟ್ಟರ ಹೇಳಿಕೆಯನ್ನು ಬಿಟ್ಟರೆ ಬೇರಾವ ಆಧಾರವನ್ನೂ ಕಾಣೆವು. ಮಳಲಿಯವರ ಸೂಚನೆಯ ಮೇರೆಗೆ, ತೊರವೆ ರಾಮಾಯಣದಲ್ಲಿ ಬರುವ ತಾಂಡವಮುನಿ ಕಥೆಗೆ ಟಿಪ್ಪಣಿಯನ್ನೂ ಬರೆದನಂತೆ.

ಇರಬಹುದು. ಅದೊಂದು ಸಣ್ಣ ಪ್ರಸಂಗ. ಯಾವುದೋ ಪಠ್ಯ ಪುಸ್ತಕದಲ್ಲಿ ಸೇರ್ಪಡೆಯಾಗಿದ್ದ ಆ ಭಾಗಕ್ಕೆ ವಿದ್ಯಾರ್ಥಿಗಳ ಉಪಯೋಗಕ್ಕೆಂದು ಬರೆದಿರಲೂ ಸಾಕು.

ಇನ್ನು 'ಕರ್ಣಾಟಕ ರಾಮಾಯಣ' ಎಂಬುದನ್ನು ವಾರ್ಧಕ ಷಟ್ಪದಿಯಲ್ಲಿ ಬರೆಯುತ್ತಿದ್ದುದರ ವಿಚಾರ. ಇದು ರಾಮಪಟ್ಟಾಭಿಷೇಕವೇ ಇರಬೇಕು; ಬೇರೊಂದು ಗ್ರಂಥವಲ್ಲ. ಅದರಂತೆಯೇ 'ಕುಶವಿಜಯ'ದ ವಿಚಾರ. ಈ ಕಥಾನಕವು ರಾಮಾಶ್ವಮೇಧದಲ್ಲಿ ಬಂದದ್ದೇ ಇದೆ; ಪ್ರತ್ಯೇಕವಾಗಿ ಬರೆದಿರಲಿಕ್ಕಿಲ್ಲ. 'ಕಾಮಶಾಸ್ತ್ರ' ರಚನೆಯ ಪ್ರಸ್ತಾಪವೂ ಬಂದಿದೆ. ಆದರೆ ಈ ಹೆಸರಿನ ಕೃತಿಯನ್ನು ಪ್ರತಿಮಾಡಿ (೧೮೯೬ರಲ್ಲಿ) ಕಾವ್ಯ ಮಂಜರಿಯವರಿಗೆ ಕಳಿಸಿಕೊಟ್ಟಿದ್ದ. ಇದು ಅವನದಲ್ಲ.

ರಾಮಾಶ್ವಮೇಧವನ್ನು ಹಿಂದಣ ಅವಧಿಯಲ್ಲಿ ಬರೆದನಾದರೂ ಅದರ ಪ್ರಕಟನೆಗಾಗಿ ಅಕ್ಟೋಬರ್ ೧೮೯೭ರಲ್ಲಿ ರಾಮಾನುಜ ಅಯ್ಯಂಗಾರರಿಗೆ ಹಸ್ತಪ್ರತಿಯನ್ನು ಕಳಿಸಿದ್ದ. ಆದರೆ ಕೆಲವೇ ತಿಂಗಳಲ್ಲಿ ಕಾವ್ಯಮಂಜರಿ ಪತ್ರಿಕೆ ನಿಂತು ಹೋಯಿತು. ಆಗ ಮುದ್ದಣನು ಹಸ್ತಪ್ರತಿಯನ್ನು ಹಿಂತಿರುಗಿಸಲು ವಿನಂತಿಸಿದನು. ಪತ್ರಿಕೆಯನ್ನು ಪುನಃ ಹೊರಡಿಸಲಿದ್ದೇವೆ - ಎಂಬ ಕಾರಣವನ್ನು ಕೊಟ್ಟು, ರಾಮಾನುಜಯ್ಯಂಗಾರರು ಹಸ್ತಪ್ರತಿಯನ್ನು ತಮ್ಮಲ್ಲಿಯೆ ಉಳಿಸಿಕೊಂಡರು. ಇತ್ತ ಮುದ್ದಣನು ಬೇರೆಲ್ಲಿಯಾದರೂ ಅದರ ಪ್ರಕಟನೆಯು ಸಾಧ್ಯವೇ - ಎಂಬುದಾಗಿ ಪಂಜೆ, ಬೆನಗಲ್, ಹಟ್ಟಿಯಂಗಡಿ ಮುಂತಾದ ಸ್ನೇಹಿತರೊಡನೆ ವಿಚಾರಿಸುತ್ತ ಇದ್ದ. ಮುಂದೆ ೧೫ ತಿಂಗಳ ಅವಧಿಯ ನಂತರ, ಕರ್ನಾಟಕ ಕಾವ್ಯಕಲಾನಿಧಿ - ಎಂಬ ಹೆಸರಿನಲ್ಲಿ, ಮುಂದೆ ಕಾವ್ಯಮಂಜರಿಯು ಹೊಸ ಜೀವನವನ್ನು ಪಡೆಯಿತು. (ಜುಲೈ ೧೮೯೯). ಅದರ ಮೊದಲ ಸಂಚಿಕೆಯಿಂದಲೇ ರಾಮಾಶ್ವಮೇಧವನ್ನು ಕ್ರಮಶಃ ಪ್ರಕಟಿಸತೊಡಗಿದುದು ಆ ಕೃತಿಗೆ ಸಂಪಾದಕರು ಕೊಟ್ಟಿದ್ದ ಪ್ರಾಶಸ್ತ್ಯದ ಕುರುಹಾಗಿದೆ. ದಿ. ೨೫-೬-೧೯೦೦ರಂದು ರಾಮಾನುಜ ಅಯ್ಯಂಗಾರರು ಅದರ ಲೇಖಕರಾರೆಂದು ಮುದ್ದಣನನ್ನು ವಿಚಾರಿಸಿದಾಗ, ಅವನು ಯಥಾಪ್ರಕಾರ ಹಾರಿಕೆಯ ಉತ್ತರವನ್ನೆ ಕೊಟ್ಟಿದ್ದಾನೆ. ಕಾವ್ಯಕಲಾನಿಧಿಯ ಮೊದಲಿನ ಎಂಟು ಸಂಚಿಕೆಗಳಲ್ಲಿ ಅದು ಪ್ರಕಟವಾದುದನ್ನು ಮುದ್ದಣನು ನೋಡಿಯೇ ಇದ್ದ. ಆದರೆ ಅದೇಕೊ ಪ್ರಕಟನೆ ಮತ್ತೆ ತಡೆದು ನಿಂತಿತು. ಜೂನ್ ೧೯೦೧ರಲ್ಲಿ ಪುನಃ ಮುಂದುವರಿದಾಗ, ಮುದ್ದಣನು ತೀರಿ ಹೋಗಿದ್ದನು. ಮರುವರ್ಷ (೧೯೦೨) ಹೊರಬಂದ ಅದರ ಪುಸ್ತಕ ರೂಪವನ್ನು ಅವನು ನೋಡಲೆ ಇಲ್ಲ.

ಮುದ್ದಣನ ಜೀವನದ ಈ ಘಟ್ಟದಲ್ಲಿಯ ಒಂದು ಮಹತ್ವದ ಘಟನೆಯೆಂದರೆ ಬೆನಗಲ್ ರಾಮರಾಯರ ಹಾಗೂ ಪಂಜೆ ಮಂಗೇಶರಾಯರ ಭೆಟ್ಟಿ. ಇವು ಜರುಗಿದುದು, ಮುದ್ದಣನ ಮರಣಕ್ಕೆ ಕೇವಲ ಕೆಲವೇ ವರ್ಷದ ಹಿಂದೆ. ಅದೂ ಒಮ್ಮೊಮ್ಮೆ ಮಾತ್ರ! ಭೆಟ್ಟಿಗಿಂತ ಮುಂಚೆ ಪತ್ರ ವ್ಯವಹಾರವಿದ್ದಿತು. ಇವರಿಬ್ಬರಿಗೆ ಆಗ ಮುದ್ದಣನು ಯಕ್ಷಗಾನ ಪ್ರಸಂಗಕಾರ ಎಂದಷ್ಟೇ ಗೊತ್ತು.

ಇವರಿಬ್ಬರಲ್ಲಿ, ಮುದ್ದಣನಿಗೆ ಬೆನಗಲ್ ಅವರ ಸಂಪರ್ಕವು ಹೆಚ್ಚಾಗಿ ಒದಗಿದ್ದಿತು. ಅವರು ಕ್ರಿ.ಶ. ೧೮೯೮ರಲ್ಲಿ ಮುದ್ದಣನಿಗೆ ತಮ್ಮ 'ಕಲಹ ಪ್ರಿಯಾ ಪ್ರಹಸನ'ದ ಹಸ್ತಪ್ರತಿಯನ್ನು ಕಳಿಸಿಕೊಟ್ಟರು - ಅಭಿಪ್ರಾಯಾರ್ಥವಾಗಿ. ಜೊತೆಗೆ, 'ಸುದರ್ಶನ' ಪತ್ರಿಕೆಯವರಲ್ಲಿದ್ದ 'ಏಕನಾಥ ಚರಿತ್ರೆ' ಎಂಬ ತಮ್ಮೊಂದು ಹಸ್ತಪ್ರತಿಯನ್ನು ಮರಳಿ ಪಡೆಯಲು ವಿನಂತಿಸಿದರು. ಮುದ್ದಣನು ಆ ಹಸ್ತಪ್ರತಿಯನ್ನು ದೊರಕಿಸಿ, ಅವರಿಗೆ ಕಳಿಸುವ ಪೂರ್ವದಲ್ಲಿ ಅದರ ಭಾಷಾದೋಷಗಳನ್ನು ತಿದ್ದಿದ. 'ಕಲಹ ಪ್ರಿಯಾ ಪ್ರಹಸನ'ದ ಬಗ್ಗೆ, 'ಪುಸ್ತಕದ ಭಾಷಾಂತರದ ಮಟ್ಟಿಗೆ ಮೆಚ್ಚುತ್ತೇನೆ. ವಸ್ತು ಪ್ರಶಸ್ತವಾದುದೆಂದು ಹೇಳಲಿಕ್ಕಾಗುವುದಿಲ್ಲ' ಎಂದು ಅಭಿಪ್ರಾಯ ಕೊಟ್ಟನು. ಈ ಪ್ರಹಸನದ ಮೂಲ ಲೇಖಕರಾದ ವೀರೇಶಲಿಂಗಂ ಪಂತಲು ಆಧುನಿಕ ಆಂಧ್ರ ಸಾಹಿತ್ಯದ ಪಿತಾಮಹರು. ಇಂಥವರ ಕೃತಿಯನ್ನು ಮೆಚ್ಚದೇ ಇದ್ದುದರ ಹಿಂದಿನ ನೈತಿಕ ಸ್ಥೈರ್ಯವನ್ನು ಬೆನಗಲ್ ರಾಮರಾಯರು ಮನಗಂಡು ಉಲ್ಲೇಖಿಸಿದ್ದಾರೆ. ಜೊತೆಗೆ, ಆಧುನಿಕ ಲಲಿತ ಸಾಹಿತ್ಯವು ಮುದ್ದಣನ ಜಾಯಮಾನಕ್ಕೆ ಒಗ್ಗುತ್ತಿದ್ದಿಲ್ಲವೆಂಬುದರ ಸುಳಿವೂ ಇಲ್ಲಿದೆ.* ಮದ್ರಾಸಿಗೆ ಬಂದಿದ್ದ ಮುದ್ದಣನ ಕೆಲವು ಶಿಷ್ಯರ ಮೂಲಕ, ರಾಮರಾಯರಿಗೆ ಅವನೇ ಅದ್ಭುತ ರಾಮಾಯಣ ಹಾಗೂ ರಾಮಪಟ್ಟಾಭಿಷೇಕಗಳನ್ನು ರಚಿಸಿದವನೆಂಬುದು ಕ್ರಮೇಣ ತಿಳಿದುಬಂದಿತು.

ಕ್ರಿ.ಶ. ೧೯೦೦ರಲ್ಲಿ ಬೆನಗಲ್ಲರ ಎಂ.ಎ. ಪರೀಕ್ಷೆಯ ಫಲಿತಾಂಶ ಬಂದಾಗ ಮುದ್ದಣನು ಅವರನ್ನು ಅಭಿನಂದಿಸಿ ಪತ್ರ ಬರೆದನು. ಎಂ.ಎ. ಮುಗಿದ ಮೇಲೆ, ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿಯ ತಮ್ಮ ಕನ್ನಡ ಪಂಡಿತ ಸ್ಥಾನಕ್ಕೆ ರಾಜೀನಾಮೆಯನ್ನು ಕೊಟ್ಟು ಮೈಸೂರ ಕಡಗೆ ಹೋಗಬೇಕೆಂದು ರಾಮರಾಯರು ಯೋಚಿಸಿದರು. ತೆರವಾಗುವ ಆ ಸ್ಥಾನಕ್ಕೆ ಯೋಗ್ಯ ವ್ಯಕ್ತಿಯನ್ನು ದೊರಕಿಸಲು ಕಾಲೇಜಿನವರು ರಾಮರಾಯರಿಗೇ ಹೇಳಿದರು. ಆಗ ಅವರಿಗೆ ಮುದ್ದಣನೇ ಅದಕ್ಕೆ ತಕ್ಕವನೆಂದು ತೋರಿತು. ಅಲ್ಲಿಯ ಸಂಬಳ ೪೦ ರೂಪಾಯಿ. ಆ ವೇಳೆಗೆ ಮುದ್ದಣನಿಗೆ ಉಡುಪಿಯಲ್ಲಿ ೨೩ರೂ. ಸಿಕ್ಕುತ್ತಿತ್ತಲ್ಲದೆ, ಮರುವರ್ಷಕ್ಕೆ ಅದನ್ನು ೨೫ ರೂ. ಗೆ ಏರಿಸುವವರಿದ್ದರು.

ಈ ಸೂಚನೆಯನ್ನು ಮಾಡಿದ ಕೆಲವು ವಾರಗಳ ಅನಂತರ, ಏಪ್ರಿಲ್ ೨೦, ೧೯೦೦ರಂದು ಬೆನಗಲ್ಲರು ಉಡುಪಿಗೆ ಬಂದಿದ್ದಾಗ ಇವರಿಬ್ಬರ ಸಮಾಗಮವಾಯಿತು. ಆವಾಗ ಅವರು ಮಾತನಾಡಿಕೊಂಡ ವಿಷಯಗಳಲ್ಲಿ ಮುಖ್ಯವಾದುವುಗಳೆಂದರೆ, ಹೆಸರು ಮರೆಸಿ ಮುದ್ದಣನು ತನ್ನ ಕೃತಿಗಳನ್ನು ಪ್ರಕಟಿಸುತ್ತಿದ್ದುದು; ಹೊಸದಾಗಿ ಹೊರಡಲಿದ್ದ 'ಸುವಾಸಿನಿ' ಪತ್ರಿಕೆಗಾಗಿ ಮುದ್ದಣನು ಲೇಖ ಬರೆಯುವುದು; ಮತ್ತು ಮದ್ರಾಸಿನ 'ಕನ್ನಡ ಪಂಡಿತ'ನ ಸ್ಥಾನಕ್ಕೆ ಅವನು ಹೋಗುವುದು.

---

* ಇದೇ ವೇಳೆಗೆ, ಗೋವಿಂದ ಪೈಯವರು, ಶೇಕ್ಸ್‌ಪಿಯರನ ನಾಟಕವೊಂದರ ಕೆಲಭಾಗಗಳನ್ನು ಅನುವಾದಿಸಿ, ಅಭಿಪ್ರಾಯಾರ್ಥವಾಗಿ ಕಳಿಸಿದ್ದರಂತೆ. ಅಂತೂ ನಂದಳಿಕೆಯ ಈ ಮುದ್ದಣನು ಆ ಕಾಲಕ್ಕೆ ಒಳ್ಳೆಯ ಕನ್ನಡ ತಜ್ಞ - ಎಂಬ ಹೆಸರನ್ನು ಪಡೆದಿದ್ದನಲ್ಲವೆ!

ಆಗಿನ ದಿನಗಳಲ್ಲಿ ಶೈಕ್ಷಣಿಕ ವರ್ಷವು ಡಿಸೆಂಬರಕ್ಕೆ ಮುಗಿಯುತ್ತಿತ್ತು. ಅದನ್ನು ಮುಗಿಸಿಕೊಂಡು ಜನವರಿ ೧೯೦೧ರಿಂದ ಮದ್ರಾಸಿನ ಕಾಲೇಜಿಗೆ ಹೋಗಿ ಸೇರಬೇಕೆಂದು ಮುದ್ದಣನು ಯೋಚಿಸಿ, ಹಾಗೆಂದು ಅವರಿಗೆ ಹೇಳಿದನು. ಲೇಖಕನಾಗಿ ಮಾತು ಕೊಟ್ಟಂತೆ, ಸುವಾಸಿನಿಗೆಂದು, 'ಗೋದಾವರಿ' ಎಂಬ ಅನುವಾದಿತ ಕಾದಂಬರಿಯ ಮೊದಲ ಪ್ರಕರಣವನ್ನು ಕಳಿಸಿಕೊಟ್ಟನು. ಇಡೀ ಹಸ್ತಪ್ರತಿಗಾಗಿ ಕಾಯುತ್ತಿದ್ದವರಾದ್ದರಿಂದ ಬೆನಗಲ್ಲರು, ಅದಷ್ಟನ್ನೇ ಪ್ರಕಟಿಸಲಿಲ್ಲ. ಆದರೆ ಡಿಸೆಂಬರ್ ೧೯೦೦ರ ಸಂಚಿಕೆಯಲ್ಲಿ 'ಜೋ ಜೋ' ಪ್ರಬಂಧವು ಮಾತ್ರ ಪ್ರಕಟವಾಯಿತು - ಚಕ್ರಧಾರಿ ಎಂಬ ಹೆಸರಿನಿಂದ. ನಿರ್ದಿಷ್ಟವಾಗಿ ದೊರೆತಿರುವ ಮುದ್ದಣನ ಹೊಸಗನ್ನಡ ಗದ್ಯ ಬರಹವೆಂದರೆ - ಇದೊಂದೇ.

ಬೆನಗಲ್ಲರನ್ನು ಕಂಡಿದ್ದ ಅದೇ ಏಪ್ರಿಲ್ ತಿಂಗಳಲ್ಲಿ ಮುದ್ದಣನಿಗೆ ಪಂಜೆಯವರ ಪ್ರಥಮ ಭೇಟ್ಟಿ ಜರುಗಿತು - ಮಂಗಳೂರಿನಲ್ಲಿ. ಗದಾಯುದ್ಧದ ಪದ್ಯಗಳನ್ನು ಮುದ್ದಣನು ನಡುದಾರಿಯಲ್ಲಿ ಬಾಯಿಯಿಂದ ಹೇಳಿದುದು ಆವಾಗಲೇ. ಈ ಮೊದಲ ಭೇಟ್ಟಿಯಲ್ಲಿ, ಬೆನಗಲ್ ಅವರಂತೆ ಪಂಜೆಯವರು ಸಹ, ಗ್ರಂಥ ಕರ್ತೃತ್ವದ ವಿಷಯವಾಗಿ ಮುದ್ದಣನನ್ನು ಪ್ರಶ್ನಿಸಿದರು. ಆ ಮುಂಚಿನ ಪತ್ರವ್ಯವಹಾರದಲ್ಲಿ ಅವರು ಅದನ್ನು ಪ್ರಸ್ತಾಪಿಸಿದಾಗ, ಮುದ್ದಣನು ಲೇಖಿಯಲ್ಲಿ ಸಿಕ್ಕಿ ಬೀಳದಿದ್ದು, ಭೇಟ್ಟಿಯಾದಾಗ ಮಾತ್ರ ಒಪ್ಪಿಕೊಂಡನು.

ಬೇರೆ ಬೇರೆ ಹೆಸರುಗಳಿಂದ ಕೃತಿ ರಚನೆ ಮಾಡಿ, ತನ್ನ ಹೆಸರನ್ನು ಮರೆಸುವಲ್ಲಿ ಮುದ್ದಣನು ವಿಚಿತ್ರ ರೀತಿಯಿಂದ ವರ್ತಿಸಿದ್ದಾನೆ. ಆ ಹೆಸರುಗಳಿಂತಿವೆ :

| | |
|---|---|
| ರತ್ನಾವತೀ ಕಲ್ಯಾಣ | - ನಂದಳಿಕೆ ಲಕ್ಷ್ಮೀನಾರಾಯಣ |
| ಕುಮಾರ ವಿಜಯ | - |
| ರಾಮ ಪಟ್ಟಾಭಿಷೇಕ | - ಚಾವಡಿ ರಂಗಭಟ್ಟನಾತ್ಮಜೆ - ಮಹಾಲಕ್ಷ್ಮಿ |
| ಅದ್ಭುತ ರಾಮಾಯಣ | - ತಿರುಳ್ಗನ್ನಡಿಗನಡಿದಾವರೆಯ ಬಂಡುಣಿಗಳಪ್ಪ ಕನ್ನಡ ಗಬ್ಬಿಗರ ಮನೆಯೂಳಿಗದವನೋರ್ವಂ ಕನ್ನಡಿಗಂ |
| ರಾಮಾಶ್ವಮೇಧ | - (ಮುದ್ದಣ) |
| 'ಜೋ ಜೋ' ಪ್ರಬಂಧ | - ಚಕ್ರಧಾರಿ |

ಯಕ್ಷಗಾನ ಕೃತಿಗಳಿಗೆ ಅವನ ಸ್ವಂತದ ಹೆಸರೇ ಇರುವುದರಿಂದ ಅಲ್ಲಿ ಕರ್ತೃತ್ವ ಸಂದೇಹಕ್ಕೆ ಅವಕಾಶವಿಲ್ಲ. ಇತ್ತ ಅದ್ಭುತ ರಾಮಾಯಣದ ಒಂದು ಹಸ್ತಪ್ರತಿಯ ಮೇಲೆ ' ನಂದಳಿಕೆ ಲಕ್ಷ್ಮೀನಾರಾಯಣನಿಂ ರಚಿಸಲ್ಪಟ್ಟುದು' ಎಂದು ಸ್ಪಷ್ಟವಾಗಿಯೇ ಇದೆ. (ಜೊತೆಗೆ ಎರಡು ಕಡೆಗೆ ಇಂಗ್ಲಿಷ್‌ನಲ್ಲಿ ಅವನ ಹೆಸರಿದೆ.) ಆದರೆ ಇದರ ಅಂತ್ಯಗದ್ಯ ಬರಿಯೆ 'ಓರ್ವ ಕನ್ನಡಿಗ' ಎಂದಿದೆ. ವಿಶಿಷ್ಟವಾದೊಂದು ಕಾವ್ಯನಾಮವನ್ನು ತನಗಾಗಿ ಸೃಷ್ಟಿಸಿಕೊಳ್ಳಲು

ಮುದ್ದಣನಿಗೆ ಹೊಳೆಯಲಿಲ್ಲವೆಂದಲ್ಲ. ಈ ಕನ್ನಡಿಗನು ತಿರುಳ್ಗನ್ನಡಿಗನನ್ನು* ಸೇವಿಸುವ ಖ್ಯಾತ ಕನ್ನಡ ಕವಿಗಳ ಸೇವೆ ಮಾಡಿಕೊಂಡಿರುವವ.

ರಾಮಪಟ್ಟಾಭಿಷೇಕದಲ್ಲಿ, ಕರ್ತೃವೆಂದು ಸ್ತ್ರೀಯನ್ನು ತಂದಿದ್ದಾನಲ್ಲವೆ. ಮಹಾಲಕ್ಷ್ಮಿಯೆಂಬ ಹೆಸರು ಸ್ಫುರಣವಾದದ್ದಕ್ಕೆ ಅವನ ತಾಯಿಯೇ ನಿಮಿತ್ತವೆನ್ನುವುದಕ್ಕೆ, ಬವುಳಾಡಿ ಹೆಬ್ಬಾರರ ಹೇಳಿಕೆ ಹೆಚ್ಚು ವಿಶ್ವಾಸಾರ್ಹವಾದುದು. ("ನನ್ನ ತಾಯಿಯ ಹೆಸರೂ ಅದೇ"). ಆದರೆ ತಂದೆಯಾದ ಚಾವಡಿ ರಂಗಭಟ್ಟ ಹಾಗೂ ಕಾವ್ಯ ಬರೆಯಿಸಿದ ಚೆಂಗಳತಿದೇವಿ - ಇವರು ಯಾರೆಂಬುದು ಕೊನೆವರೆಗೂ ನಿಗೂಢವಾಗಿ ಉಳಿಯುವುದೇನೊ. ಲಕ್ಷ್ಮೀನಾರಾಯಣನ ಮಾತಾಮಹನ ಹೆಸರಾದರೂ ತಿಳಿದಿದ್ದರೆ ಅನುಕೂಲವಿತ್ತು.

ಇದೊಂದು ಕೃತಿಯು ಸರ್ವಥಾ ಮುದ್ದಣನದಲ್ಲವೆಂದು ರಾಮಾನುಜಯ್ಯಂಗಾರರು ದೃಢವಾಗಿ ನಂಬಿದ್ದರಲ್ಲದೆ, ರಾಮಪಟ್ಟಾಭಿಷೇಕದ ೧೯೨೪ನೆಯ ವರ್ಷದ ಪರಿಷ್ಕೃತ ಆವೃತ್ತಿಯಲ್ಲಿ ಕರ್ತೃವನ್ನು ಮಹಾಲಕ್ಷ್ಮಿ ಎಂದೇ ಬರೆದಿದ್ದಾರೆ. ಆದರೆ ೧೯೨೪ರಲ್ಲಿ ಗೋವಿಂದ ಪೈಯವರು, ಇದು ಮುದ್ದಣನದೇ ಎಂಬುದಕ್ಕೆ ಕೊಟ್ಟ ಪುರಾವೆಗಳನ್ನೂ, ೧೯೪೪ರಲ್ಲಿಯ ಹೆಬ್ಬಾರರ ಹೇಳಿಕೆಯನ್ನು ಗಮನಿಸಿದ ಯಾರಿಗೂ ಈ ಕಾವ್ಯದ ಮುದ್ದಣ ಕರ್ತೃತ್ವ ವಿಚಾರದಲ್ಲಿ ಸಂದೇಹ ಉಳಿಯಕೂಡದು. ಈಗ ಅದನ್ನು ದೃಢೀಕರಿಸಲು ಅಂತಸ್ಥ ಪ್ರಮಾಣಗಳನ್ನು ಕೊಡಬಹುದು. ತೆಕ್ಕುಂಜೆಯವರು, ಈಗಾಗಲೇ ಪಟ್ಟಾಭಿಷೇಕ, ರಾಮಾಶ್ವಮೇಧಗಳಲ್ಲಿಯ ಹೋಲಿಕೆಯನ್ನು ತೋರಿಸಿಕೊಟ್ಟಿದ್ದಾರೆ. ನಾವು (ಎಂದರೆ ಈ ಲೇಖಕ ಮತ್ತು ರಾಮಚಂದ್ರ ಉಚ್ಚಿಲ್) ಗಣಕಯಂತ್ರದ ಸಹಾಯದಿಂದ, ಮುದ್ದಣನ ಕೃತಿಯೇ ಎಂದು ಸಿದ್ಧಮಾಡಿದ್ದಾಗಿದೆ. ಮೇಲಣ ಕೃತಿಗಳಿಗೆ ಆಶ್ವಾಸಾಂತ್ಯ ಗದ್ಯ ಪದ್ಯವಿದ್ದು ಇಂಥವರು ಬರೆದ ಕೃತಿಯೆಂಬ ಮಾತಿದೆ. ರಾಮಾಶ್ವಮೇಧದಲ್ಲಿ ಅದೂ ಇಲ್ಲ| ಕೃತಿಯಲ್ಲಿ, ಕಥೆ ಹೇಳುವ ಪಾತ್ರವಾಗಿ, ಮುದ್ದಣನು ಬರುವುದರಿಂದ ನಾವು ಅದನ್ನು ಮುದ್ದಣ ರಚಿತವೆಂದು ಹೇಳುವುದುಂಟು.

ಹೆಸರಿನ ವಿಷಯದಲ್ಲಿ ಮುದ್ದಣನು ಇಷ್ಟೆಲ್ಲ 'ತಟವಟ' ಮಾಡಿದುದಕ್ಕೆ ಸಮಂಜಸವಾದ ವಿವರಣೆಯನ್ನು ಸ್ವಲ್ಪದರಲ್ಲಿ ಕೊಡಬಹುದು. ಅಪ್ರಸಿದ್ಧನೂ ಕುಸ್ತಿ ಮಾಸ್ತರನೂ ಆದ ತಾನು

* ಅಂದ ಹಾಗೆ ಯಾರು ಈ ತಿರುಳ್ಗನ್ನಡಿಗ? ತಿರುಳ್ಗನ್ನಡ - ಪದವನ್ನು ಎದ್ದು ಕಾಣುವಂತೆ ಉಪಯೋಗಿಸಿದವವ ಪಂಪ. ಈ ಆದಿಕವಿಯನ್ನೆ ಮುದ್ದಣನು ನೆನೆದಿರಬೇಕೆಂದು ಎಂ.ಎ. ಆರ್. ತಮ್ಮ ಟಿಪ್ಪಣಿಯಲ್ಲಿ ಹೇಳಿದ್ದಾರೆ. ಆದರೆ ಮುದ್ದಣನ ಕಾಲಕ್ಕೆ ಪಂಪನು ಪರಮೋಚ್ಚ ಕವಿತ್ವದ ಪಟ್ಟವನ್ನಿನ್ನೂ ಏರಿರಲಿಲ್ಲ! ಅವನೂ ಒಬ್ಬ ಕವಿಯೆನಿಸಿದ್ದ, ಅಷ್ಟೇ. ಅವನ ಪಂಪ ಭಾರತವಿನ್ನೂ ಪ್ರಕಟವಾಗಿರಲೇ ಇಲ್ಲ. ಅದ್ಭುತ ರಾಮಾಯಣದ ರಚನೆಯ ಕಾಲಕ್ಕೆ ಆದ ಕಾರಣ ಈ ತಿರುಳ್ಗನ್ನಡಿಗನು, ನಾವು ಹಿಂದೆ ಪ್ರಸ್ತಾಪಿಸಿದ 'ಕಣ್ಣಡಿಗ' - ಅರ್ಥಾತ್ ಪರಶಿವನೇ ಇರಬೇಕು. ಮುದ್ದಣನ ಆರಾಧ್ಯ ದೈವತ - ಶಿವನೆಂಬುದನ್ನು ವಿವರವಾಗಿ, 'ಮುದ್ದಣ ಕಂಡ ಶಿವ' ಎಂಬ ಇಲ್ಲಿಯ ಲೇಖದಲ್ಲಿದೆ.

ಹಳಗನ್ನಡ ಮಾದರಿಯ ಕೃತಿಗಳನ್ನು ಬರೆದ ಅಂಶವು ಮೈಸೂರ ವಿದ್ವಾಂಸರಿಗೆ ನಿಜವೆನಿಸಲಿಕ್ಕಿಲ್ಲವೆಂದು ಭಾವಿಸಿದ; ಸುಳ್ಳು ಹೇಳಿದ. ಮುಂದೆ ಬೆನಗಲ್ ಅವರೆದುರು ಒಪ್ಪಿಕೊಂಡಂತೆ, ಒಮ್ಮೆ ಹೇಳಿದ ಸುಳ್ಳನ್ನು ಮುಂದುವರಿಸುವುದು ಅನಿವಾರ್ಯವಾಯಿತು.

ಗಮನಿಸಬೇಕಾದ ಇನ್ನೊಂದು ಮಾತೆಂದರೆ, ತನ್ನ ಹೆಸರು ಪದವಿ, ಫೋಟೊ, ಪರಿಚಯ ಸಹಿತವಾಗಿ ಎದ್ದು ಕಾಣುವಂತಿರಬೇಕೆಂಬ ಆಶಯವು ಇಂದಿನ ಅನೇಕ ಲೇಖಕರಿಗಿರುವಂತೆ ಮುದ್ದಣನಿಗೆ ಇರಲಿಲ್ಲ. ಇಂಥ ನಿರಹಂಭಾವದ ಮನೋವೃತ್ತಿ ಪ್ರಾಚೀನ ಕವಿಗಳಲ್ಲಿ ಸಾಮಾನ್ಯವಾಗಿ ಕಾಣುತ್ತೇವೆ. ಸ್ವಾಂತಸ್ಸುಖಾಯ - ಕವಿತಾ ರಚನೆ ಮಾಡುವ ಜಾತಿಗೆ ಮುದ್ದಣ ಸೇರುತ್ತಾನೆ. ಜೊತೆಗೆ ಗುಪ್ತನಾಮದಿಂದಲೇ ಕೃತಿಯನ್ನು ಪ್ರಕಟಿಸುವ ಚಪಲವು ಮುದ್ದಣನಿಗೆ ಜಾತ್ಯತಃ ಇತ್ತೆನ್ನುವ! ಇಲ್ಲವಾದರೆ ಸರಿಕರಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಾದ ಮೇಲೆಯೂ, 'ಜೋಜೋ' ಎಂಬ ಹೊಸಗನ್ನಡ ಪ್ರಬಂಧ ಬರೆಯುವಾಗ 'ಚಕ್ರಧಾರಿ' ಎಂಬ ಕಾವ್ಯನಾಮವಿಟ್ಟುಕೊಳ್ಳುವ ಅಗತ್ಯವೆಲ್ಲಿದ್ದಿತು?

ಮುದ್ದಣನು ಜುಲೈ ೧೯೦೦ರ ಸುಮಾರಿಗೆ ಈ ಪ್ರಬಂಧವನ್ನು ಬರೆದು, 'ಸುವಾಸಿನಿ'ಗೆ ಕಳಿಸಿದನಷ್ಟೆ. ಭಾಷಾ ಶಾಸ್ತ್ರಕ್ಕೆ ಸಂಬಂಧಿಸಿದುದಾದ ಇದಕ್ಕಿಂತ ಮಹತ್ವದ ಅನೇಕ ಪ್ರಮೇಯಗಳು ಮುದ್ದಣನ ಮನದಲ್ಲಿ ಇದ್ದದ್ದು ಸಹಜ. ಅಂದಾಗ ಇದನ್ನೇ ಏಕೆ ಆಯ್ದುಕೊಂಡನೋ! ಮಗ ರಾಧಾಕೃಷ್ಣನು ಅದೇ ವರ್ಷದ ಆರಂಭಕ್ಕೆ (ಜನವರಿ ೪) ಹುಟ್ಟಿ ಮನೆಯಲ್ಲಿ ತೊಟ್ಟಿಲು ತೂಗುತ್ತ ಜೋಗುಳ ಹಾಡು ಕೇಳಬರುತ್ತಿದ್ದಿತೆಂದೆ?

ಚೊಚ್ಚಲು ಮಗ ಹುಟ್ಟಿ ಬಂದಿದ್ದ; ರಾಮಾಶ್ವಮೇಧದ ಮುದ್ರಣ ಆರಂಭವಾಗಿತ್ತು; ಸದ್ಯದಲ್ಲಿಯೇ ಮದ್ರಾಸಿನ ದೊಡ್ಡ ಸ್ಥಾನ ಕಾಯ್ದು ಕೂತಿತ್ತು - ೧೯೦೦ನೆಯ ಆರಂಭದ ಮೂರು ತಿಂಗಳಲ್ಲಿ ಮುದ್ದಣ ಅದೆಷ್ಟು ಸುಖಿ! ಆದರೆ!....

ಕ್ಷಯರೋಗ ಮೆಲ್ಲನೆ ಹೆಡೆಯೆತ್ತಿ ನಿಂತಿತ್ತು. ಏಪ್ರಿಲ್ ೭ರಂದು ಬೆ. ರಾಮರಾಯರಿಗೆ ಬರೆದ ಪತ್ರದಲ್ಲಿ ಅದರ ಸುಳಿವು ಮೊದಲ ಬಾರಿಗೆ ಕಂಡಿದೆ. ಮುಂದೆ ೨೦ನೆಯ ತಾರೀಖಿಗೆ ಅವರು ಅವನನ್ನು ಪ್ರತ್ಯಕ್ಷ ಕಂಡಾಗ, 'ಕುಸ್ತಿ ಮಾಸ್ತರನೆನಿಸಿಕೊಳ್ಳುವಷ್ಟು ತಕ್ಕವನಾದ ದೃಢಕಾಯನಾದ ಪುರುಷ' ನಂತೆ ಮುದ್ದಣ ತೋರಿಬರಲಿಲ್ಲ. ಅದೇ ತಿಂಗಳು ಮಂಗಳೂರಿಗೆ ಆತ ಹೋಗಿದ್ದುದು ತನ್ನ ಅಸ್ವಾಸ್ಥ್ಯದ ಪ್ರಕೃತಿಯನ್ನು ತೋರಿಸಲೆಂದು. ಪಂಜೆಯವರು ಅಲ್ಲಿ ಕಂಡದ್ದು 'ಕಳೆಗುಂದಿದ ಮೋರೆಯ, ಹರೆಯದ ಕುರುಹುಗಳಿಲ್ಲದೆ ಶಾಂತವಾಗಿರುವ ಮುಖ ಮುದ್ರೆ'ಯ ಮುದ್ದಣನನ್ನು.

ಕ್ಷಯರೋಗವು ಮುಂದೆ ಕೆಲವೇ ತಿಂಗಳಲ್ಲಿ ಉಲ್ಬಣಿಸಿ, ಹಂತಹಂತವಾಗಿ ಅವನನ್ನು ಸಾವಿನೆಡೆಗೆ ಕೊಂಡೊಯ್ಯುತ್ತ ನಡೆದುದನ್ನು, ಬೆನಗಲ್ಲರಿಗೆ ಅವನು ಬರೆದ ಪತ್ರಗಳಿಂದಲೇ ಕಂಡುಕೊಳ್ಳಬಹುದು.

೧೯೦೦, ಸೆಪ್ಟೆಂಬರ್ ೮ - "....ಪುನಃ ಜ್ವರಕ್ಕಾರಂಭವಾಗಿದೆ. ಬರುವ ತಿಂಗಳ 'ಸುವಾಸಿನಿ'ಗೆ ಇನ್ನೊಂದು ಲೇಖವನ್ನು ಬರೆಯಬೇಕೆಂದಿದ್ದೆ. ಆದರೆ ಅಸ್ವಸ್ಥದ ದೆಸೆಯಿಂದ ಸದ್ಯಕ್ಕೆ ನಿಲ್ಲಿಸಿರುತ್ತೇನೆ. ಒಂದು ವೇಳೆ ನನ್ನನ್ನು ನಿಮ್ಮ ಕಾಲೇಜಿನಲ್ಲಿ ನೇಮಿಸುವ ಪಕ್ಷದಲ್ಲಿ ಬರುವ ಜನವರಿ ಮೊದಲ್ಗೊಂಡು ನೇಮಿಸುವ ಏರ್ಪಾಡು ನೀವು ಮಾಡತಕ್ಕದ್ದು. ನಾರಾಯಣರಾಯರಿಗೆ ಬೇರೆ ಒಂದು ಪತ್ರ ಬರಕೊಂಡಿದ್ದೇನೆ.

ಸೆಪ್ಟೆಂಬರ್ ೧೦ - 'ಮೊನ್ನಿನ ಪತ್ರದಲ್ಲಿ ಬರೆದಂತೆ ಜ್ವರವು ಬರುತ್ತಿದೆ. ಬಹಳ ನಿತ್ರಾಣ. ಈಗ ರಜಾ ತೆಗೆದುಕೊಂಡು ಮನೆಯಲ್ಲೇ ಇದ್ದೇನೆ. ಈಗ ಮದ್ರಾಸಿಗೆ ಬರಲಿಕ್ಕೆ ಎಷ್ಟು ಮಾತ್ರಕ್ಕೂ ಅನುಕೂಲವಿಲ್ಲ."

ಆದರೆ ಅದೇ ಪತ್ರದ ಕೊನೆಯಲ್ಲಿ -

'ನಾನು ಮದ್ರಾಸಿಗೆ ಹೋಗುವ ಆಲೋಚನೆಯನ್ನು ಇಂದಿನಿಂದ ಬಿಟ್ಟೆ. ಒಟ್ಟಾರೆ ನನ್ನನ್ನು ತಾವು ಮರೆಯದೆ ಇದ್ದರೆ ಸೈ.'

೧೯೦೦ ಅಕ್ಟೋಬರ್ ೨ - 'ಅಸ್ವಸ್ಥ, ಏನೇನೂ ಗುಣಾಂಶವಿಲ್ಲ. ಪುನಃ ೧ ತಿಂಗಳ ರಜೆಗೆ ಬರಕೊಂಡಿದ್ದೇನೆ. ಜ್ವರ ಬಿಡುವುದೇ ಇಲ್ಲ - ಬಹಳ ನಿತ್ರಾಣ. ಹ್ಯಾಗೂ ಇರಲಿ. ಜೀವಯಿರುವವರೆಗೆ ನನ್ನನ್ನು ಮರೆಯದೆ ಈ ಹಿಂದೆ ಅಭಿಮಾನವಿಟ್ಟು ನಡೆಸಿದಂತೆಯೇ ಮುಂದೂ ನಾನು ಬದುಕಿಕೊಂಡಿರುವವರೆಗೆ ವಿಚಾರಿಸುತ್ತಿರಬೇಕಾಗಿ ಪ್ರಾರ್ಥನೆ. ನೋಡಿದವರು ಕ್ಷಯವೆಂದು ಹೇಳುತ್ತಾರೆ.'

ಮದ್ರಾಸಿಗೆ ಕನ್ನಡ ಪಂಡಿತನಾಗಿ ಹೋಗುವ ಸದವಕಾಶ ಕೈಯಳತೆಯಲ್ಲಿದ್ದಾಗ ಕ್ಷಯ ಬೇನೆಯು ಅವನನ್ನು ಹಿಂಡುತ್ತಿದ್ದಿತೆಂಬುದು ಅದೆಂಥ ದಾರುಣ ಸಂಗತಿ! ಯೋಗ್ಯ ಚಿಕಿತ್ಸೆಯ ಅನುಕೂಲತೆ ಇರಲಿಲ್ಲ. ದೈಹಿಕ ತಾಪದ ಜೊತೆಗೆ, ಹೆಂಡತಿ - ಮಗುವಿನ ಗತಿಯೇನು ಎಂಬ ಅಸಹಾಯದ ಚಿಂತೆ. ಇದನ್ನು ಮೀರಿಸುವಂತೆ - ಹಣದ ಚಿಂತೆ. ಅವನ ಮನಸ್ಸು ಎಷ್ಟೊಂದು ಅಧೀರವಾಗಿತ್ತೆನ್ನುವುದಕ್ಕೆ ಮೇಲಣ, ಸೆಪ್ಟೆಂಬರ್ ೧೦ರ ಪತ್ರದ ಒಕ್ಕಣಿಕೆಯೇ ಸಾಕ್ಷಿ. ಈ ವೇಳೆಗೇ ಇರಬೇಕು; ತನ್ನ ಆತ್ಮೀಯ ಶಿಷ್ಯ - ರಾಜಗೋಪಾಲಕೃಷ್ಣರಾಯರಿಗೆ ತನ್ನೆಲ್ಲ ಗ್ರಂಥ ಸಂಗ್ರಹವನ್ನು ಕೊಟ್ಟು, ತಿಳಿದಷ್ಟು ಹಣವನ್ನು ಕೊಡಬೇಕೆಂದು ವಿನಂತಿಸಿದನು. ತಾನು ಆದರ ಭಾವದಿಂದ ಹತ್ತಾರು ಬಾರಿ ಮನನ ಮಾಡಿ, ತನ್ನ ಜೀವಕ್ಕೆ ಸಮಾನವಾಗಿ ಕಂಡಿದ್ದ ಆ ಗ್ರಂಥ ಭಂಡಾರವನ್ನು ಹೀಗೆ ಮಾರುವ ದುರ್ಭರ ಪ್ರಸಂಗ ಬಂದಾಗ ಮುದ್ದಣನ ಮನಸ್ಸಿಗೆ ಎಷ್ಟೊಂದು ನೋವಾಗಿರಬೇಡ!*

---

* ಕೊನೆಗೆ ಆದದ್ದು ಬೇರೆಯೇ. ಅವನ ತಂದೆ, ತಮ್ಮ ಇವರು ಆ ಗ್ರಂಥ ಸಂಗ್ರಹವನ್ನು ಕೈಗೆ ಬಂದ ಬೆಲೆಗೆ ಮಾರಾಟ ಮಾಡಿದರಂತೆ (ಐ.ಶಿ.) ಅವನ ಟಿಪ್ಪಣಿಗಳು ಮೊದಲಾದುವನ್ನು ಸುಟ್ಟುಬಿಡಲಾಯಿತು. ಇಂದಿನ ದಿನಗಳಲ್ಲಿ ಸಹ, ಲೇಖಕನೊಬ್ಬನ ಮರಣಾನಂತರ, ಅವನ ಲೈಬ್ರರಿ, ಮುಂತಾದವಕ್ಕೆ ಇದೇ ಗತಿ.

೧೯೦೧ರ ಜನವರಿ ೩೧ರಂದು ಮುದ್ದಣನು ಬೆನಗಲ್ ರಾಮರಾಯರಿಗೆ ಬರೆದ ಪತ್ರದಲ್ಲಿ ನಮಗೆ ಅವನ ಅಂತಿಮ ದರ್ಶನವಾಗುವಂತಿದೆ. 'ಎದ್ದು ಕೂತುಕೊಳ್ಳುವ ತ್ರಾಣವಿಲ್ಲ. ಮಲ ಮೂತ್ರ ಇದ್ದಲ್ಲಿಯೇ ಸರಿ. ಒಮ್ಮೆ ತಮ್ಮ ದರ್ಶನ ಕೊಟ್ಟರೆ ಬಹಳ ಉಪಕಾರವಾಗುತ್ತಿತ್ತು. ಹೆಚ್ಚಿಗೆ ಹೇಳಲು ಶಕ್ತನಲ್ಲ.'

ಈ ಪತ್ರವು ಬೆನಗಲ್ ಅವರ ಕೈ ಸೇರಿದ ೧೨-೨-೧೯೦೧ ದಿನದಂದು ಅವರ ವಿವಾಹ ಜರುಗಲಿದ್ದಿತು! ಇತರ ಸಾಹಿತ್ಯಿಕ ಮಿತ್ರರಿಗಿಂತ ಹೆಚ್ಚು ಆಸ್ಥೆ, ಆತ್ಮೀಯತೆಗಳನ್ನು ತೋರಿದ್ದ ರಾಮರಾಯರೆದುರು ಮುದ್ದಣನು ಅದೇನನ್ನು ಹೇಳಬೇಕೆಂದಿದ್ದನೊ, ಆದರೆ ಆ ಭೆಟ್ಟಿ ಸಿದ್ಧಿಸಲೇ ಇಲ್ಲ.

ಮರಣ ಸಮಯದಲ್ಲಿ ಮುದ್ದಣನ ಬಳಿಗೆ ಆತ್ಮೀಯರು ಇದ್ದಿಲ್ಲವಂತೆ. ಸಾಂಕ್ರಮಿಕವಾದ ಕ್ಷಯ ಬೇನೆಯ ಜಾಗದಿಂದ, ಕಮಲಾಬಾಯಿ ಹಾಗೂ ಮಗುವನ್ನು ಅವಳ ತವರಿನವರು ಕರೆದುಕೊಂಡು ಹೋಗಿರಲೂ ಸಾಕು. ಫೆಬ್ರುವರಿ ದಿ. ೧೬ರಂದು ಮುದ್ದಣನು ತನ್ನ ಅಸುವನ್ನು ನೀಗಿದನು. ನಿರ್ಗತಿಕನಾಗಿ ಹೀಗೆ ಗತಿಸಿದರೂ ತನ್ನ ಕೃತಿಗಳಿಂದ ಆತ - ನಮ್ಮ ಪಾಲಿಗೆ ಅಕ್ಷಯನೇ. ಅವನು ಬದುಕಿ ಇದ್ದಿದ್ದರೆ ಮಾತ್ರ, ಇನ್ನೂ ಹಲವು ಉಜ್ವಲ ಕೃತಿಗಳನ್ನು ನೀಡುತ್ತಿದ್ದನೆಂಬ ಅಸಹಾಯ ಆಶಯ ನಮ್ಮ ಮನದಿಂದ ಹೋಗುವಂತಿಲ್ಲ. ದಿನಾಂಕ ೧೫ಕ್ಕೆ ತೀರಿಕೊಂಡನೆಂದು ರಾ. ನರಸಿಂಹಾಚಾರ್ಯರು ಹೇಳುತ್ತಾರೆ. ೧೬ನೆಯ ತಾರೀಕನ್ನು ಉಲ್ಲೇಖಿಸಿದವರು ಬೆನಗಲ್ ರಾಮರಾಯರು. ಮರಣ ಹೊಂದಿದ ಮರು ತಿಂಗಳಲ್ಲಿಯೇ ಅವರು ಇದನ್ನು ಉಲ್ಲೇಖಿಸಿರುವುದರಿಂದ, ಅದು ಹೆಚ್ಚು ವಿಶ್ವಸನೀಯವೆಂದು ತೋರುತ್ತದೆ.

ಮುದ್ದಣನ ಮರಣಾನಂತರ ಅವನ ಹಿರಿಮೆಯನ್ನು ಮೊದಲಿಗೆ ಪ್ರಕಟಪಡಿಸಿದವರು ಬೆನಗಲ್ ರಾಮರಾಯರೇ. ಸುವಾಸಿನಿಯಲ್ಲಿ ಅವನ ಬಗ್ಗೆ ವಿವರವಾಗಿ ಬರೆದು ಅವನೇ ರಾಮಕಥಾತ್ರಯದ ಕರ್ತೃವೆಂದು ಸ್ಪಷ್ಟವಾಗಿ ಸಾರಿದರು. 'ಇಂದಿನವರೆಗೆ ಮಂಗಳೂರು ಜಿಲ್ಲೆಯಲ್ಲಿ ಯಾರಾದರೊಬ್ಬ ಉತ್ತಮ ಮಟ್ಟದ ಕರ್ಣಾಟಕ ಕವಿಯೂ ಲೇಖಕನೂ ಪಂಡಿತನೂ ಹುಟ್ಟಿದ್ದನೆಂದು ಅಭಿಮಾನ ಪಡುವುದಾದರೆ ರಾ | ಲಕ್ಷ್ಮೀನಾರಾಯಣಯ್ಯನವರ ಹೆಸರು ಬಿಟ್ಟರೆ ಬೇರೆ ಇಲ್ಲ' ಎಂದು ಅಭಿಮಾನ ಪುರಸ್ಸರವಾಗಿ ಆಡಿದುದಲ್ಲದೆ ಅವನ ಹೆಸರು ಶಾಶ್ವತವಾಗಿ ಉಳಿಯುವಂತೆ ಸ್ಮಾರಕವನ್ನು ರಚಿಸಬೇಕೆಂದು ಸೂಚಿಸಿದರು. ಮುದ್ದಣನ ಕೃತಿಗಳು ಮಾತ್ರ ಶಾಶ್ವತವಾಗಿ ಉಳಿಯುವಂತೆ ಕಾಣುತ್ತದೆ! ಇಷ್ಟೊಂದು ಹಳಗನ್ನಡ ಕಾವ್ಯ ಸಮುದಾಯದಲ್ಲಿ ಮುದ್ದಣನ ಕೃತಿಗಳು ತಲೆಯೆತ್ತಿ ನಿಂತಿವೆಯಲ್ಲವೆ.

ಅವನು ಹಿಡಿದ ಕಾವ್ಯ ಮಾರ್ಗವನ್ನು ಇತರರು ಅನುಸರಿಸುವುದು ಸಾಧ್ಯವೆ? ಅವನ ಕೃತಿಗಳ ಪ್ರಭಾವ ಇತರರ ಮೇಲೆ ಆಗಿದ್ದಿತೆ? ಪಂಪ, ಕುಮಾರವ್ಯಾಸರದು ಹೆದ್ದಾರಿ. ಅಲ್ಲಿ ಇತರ ಕವಿಗಳು ನಡೆದಾಡಬಹುದು. ಮುದ್ದಣನದು ವಿಶಿಷ್ಟವಾದ ದಾರಿ. ಇತರರಿಗೆ ಆ ದಾರಿ

ಸುಲಭಗಮ್ಯವಾದುದಲ್ಲ. ಆ ಧೈರ್ಯವನ್ನು ತೋರಿದವರು ಮುಳಿಯ ತಿಮ್ಮಪ್ಪಯ್ಯ ನವರೊಬ್ಬರೇ ಎಂದು ಕಾಣುತ್ತದೆ. ಅವರು 'ಚಂದ್ರಾವಳೀ ವಿಲಾಸ'ವೆಂಬ ಗದ್ಯಕಾವ್ಯವನ್ನು 'ಅದ್ಭುತ ರಾಮಾಯಣ, ರಾಮಾಶ್ವಮೇಧಗಳೆಂಬ ಆರಾಮಗಳಲ್ಲಿ ವಿಹರಿಸಲಿಚ್ಛಿಸುವವರಿಗೆ ಪ್ರವೇಶ ದ್ವಾರವಾಗಿ ರಚಿಸಿದ್ದಾರೆ. ಚಂದ್ರಾವಳಿಯು ರಾಧೆಯ ತಂಗಿ. ಶ್ರೀಕೃಷ್ಣನು ಪರದಾರಾಭಿಗಮನನೆಂಬ ದೂಷಕರ ಕಲುಷಿತ ವಿಚಾರವನ್ನು ಹೋಗಲಾಡಿಸುವುದು ಈ ಕಥಾನಕದ ಉದ್ದೇಶವಾಗಿದೆ. ಇದರ ನಿರೂಪಣೆ, ಸಂಭಾಷಣೆಗಳಲ್ಲಿ ರಾಮಾಶ್ವಮೇಧದ ಪಡಿಯಚ್ಚನ್ನೇ ಕಾಣುತ್ತೇವೆ. ರಾಮಾಶ್ವಮೇಧದಲ್ಲಿ ಸುರುವಿಗೆ ಮಳೆಗಾಲದ ವರ್ಣನೆ ಇದ್ದರೆ, ಅದೇ ಶೈಲಿಯಲ್ಲಿ ತಂಗಾಳಿಯ ವರ್ಣನೆಯನ್ನು ತಿಮ್ಮಪ್ಪಯ್ಯನವರು ಮಾಡಿದ್ದಾರೆ. ಮನೋರಮೆ, ಹಾಗೂ ಕಬ್ಬಿಗರ ಬಿಲ್ಲಹನಾದ ಮುದ್ದಣನಿಗೆ ಪ್ರತಿಯಾಗಿ ಭಾರತಿ ಮತ್ತು ಕಬ್ಬಿಗರಾಣ್ಮ ಬಂದಿದ್ದಾರೆ. ಭಾರತಿಯೂ ಮಧ್ಯೆ ಪ್ರಶ್ನೆ ಕೇಳುತ್ತಾಳೆ. ಅದೇ ನವುರಾದ ಹಾಸ್ಯ ಇಲ್ಲಿಯೂ ಇದೆ. ಹೀಗೆ ಸಂಭಾಷಣೆ ಯಲ್ಲಿ ರಾಮಾಶ್ವಮೇಧದ ಗಾಢವಾದ ಅನುಸರಣೆ ಇದ್ದರೆ, ಉಪಕತೆಗಳ ವಿಚಾರದಲ್ಲಿ ಚಂದ್ರಾವಳೀ ವಿಲಾಸವು ಅದ್ಭುತ ರಾಮಾಯಣದ ರೀತಿಯನ್ನು ಅನುಸರಿಸಿದೆ. ಶಬ್ದಗಳು, ಸ್ತ್ರೀ ಸಂಬೋಧನೆಗಳು, ಪದಗುಚ್ಛಗಳು ವಾಕ್ಯಗಳು - ಇವುಗಳಲ್ಲಿ ಕೂಡ ಮುದ್ದಣನ ಮಾರ್ಗವನ್ನೇ ಮುಳಿಯರು ಅನುಸರಿಸಿದ್ದಾರೆ. ಮುನ್ನುಡಿಯಲ್ಲಿ ಮುದ್ದಣನ ಋಣವನ್ನು ನೆನೆದಿದ್ದಾರೆ.

## ಮುದ್ದಣ ವಿಮರ್ಶೆ ಬೆಳೆದು ಬಂದ ಬಗೆ

ಮರಣಾನಂತರ ಮನ್ನಣೆ ಪಡೆದ ಕವಿಗಳಲ್ಲಿ ಮುದ್ದಣ ಪ್ರಮುಖನೆನ್ನಬಹುದು. ಒಟ್ಟಿನಲ್ಲಿ ಸಾಮಾನ್ಯವಾಗಿದ್ದ ಅವನ ಬದುಕಿಗೆ ಮಹತ್ವ ಬಂದದ್ದು ಅವನು ಗತಿಸಿದ ೨೫ ವರ್ಷಗಳ ಅನಂತರ. ಅವನ ಕೃತಿಗಳು ಬೆಳೆದು ವಿಶೇಷ ಅರ್ಥ ವ್ಯಾಪ್ತಿಯನ್ನು ಪಡೆದದ್ದು ಅವುಗಳ ವಿವಿಧ ವಿಮರ್ಶೆಯಲ್ಲಿಯೇ. ಈ ಸಂದರ್ಭದಲ್ಲಿ ಕವಿ ಕಾಣದ್ದನ್ನು ವಿಮರ್ಶಕರು ಕಂಡದ್ದು ಅದೆಷ್ಟೊ! ಆದಕಾರಣ ಮುದ್ದಣನ ಮೇಲಿನ ಈ ಅಧ್ಯಯನದಲ್ಲಿ ಅವನ ವಿಮರ್ಶೆ ಬೆಳೆದು ಬಂದ ಬಗೆಯನ್ನು ತಿಳಿದುಕೊಳ್ಳುವುದು ಅವಶ್ಯವೆನಿಸುತ್ತದೆ. ಆ ಮೂಲಕ, ಅವನ ಬದುಕು ಬರಹಗಳ ಕುರಿತು ವ್ಯಕ್ತವಾದ ಅಭಿಪ್ರಾಯಗಳ ಪುನರ್ ಮೌಲ್ಯ ಮಾಪನವು ಸುಕರವಾಗುತ್ತದೆ.

'ಕುಮಾರ ವಿಜಯ' ಯಕ್ಷಗಾನವನ್ನು ಬಹಿರಂಗವಾಗಿ ಪ್ರಶಂಸಿಸಿ (೧೯೨೫) ಪಂಜೆ ಮಂಗೇಶರಾಯರು ಮುದ್ದಣ ಪ್ರಶಸ್ತಿ- ವಿಮರ್ಶೆಗಳ ನಾಂದಿಯನ್ನು ಹಾಡಿದರು. ಆಗಿನ ಪತ್ರಿಕೆಗಳಲ್ಲಿ ಅವನ ಯಕ್ಷಗಾನಗಳ ವಿಮರ್ಶೆ ಬಂದಿತೊ ಇಲ್ಲವೊ ತಿಳಿಯದು. ಯಕ್ಷಗಾನ ಕೃತಿಗಳ ಸಾಹಿತ್ಯಿಕ ಗುಣವನ್ನು ವಿಮರ್ಶಿಸುವ ಪ್ರಮೇಯ ಈಗಾದರೂ ಎಲ್ಲಿದೆ?

ಅನಂತರದ ಮುದ್ದಣನ ವಿಮರ್ಶಕರೆಂದರೆ ಎಂ.ಎ. ರಾಮಾನುಜಯ್ಯಂಗಾರರು ಮುದ್ದಣನು ಕಳಿಸಿದ ಹಸ್ತಪ್ರತಿಗಳನ್ನು ಕೂಲಂಕಷವಾಗಿ ಮೊದಲಿಗೆ ಓದಿದವರು ಅವರೇ

ತಾನೆ. ಮುದ್ದಣನ ಒಡನಾಡಿಗಳೆನಿಸಿದ್ದ ಹುರಳಿ ಬಂಧುಗಳು, ಪಂಜೆ ಮಂಗೇಶರಾಯ, ಹಟ್ಟಿಯಂಗಡಿ ನಾರಾಯಣರಾಯ, ಐರೋಡಿ ಶಿವರಾಮಯ್ಯ ಮೊದಲಾದವರು ಮುದ್ದಣನ ಬರಹವನ್ನು ಮೆಚ್ಚಿಕೊಂಡು, ಅವನಿಗೆ ತೃಪ್ತಿಯನ್ನು ತಂದುಕೊಟ್ಟಿದ್ದಾರೆ. ಅದ್ಭುತ ರಾಮಾಯಣ, ರಾಮಪಟ್ಟಾಭಿಷೇಕಗಳು ಪ್ರಕಟವಾದ ಅನಿತರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪಠ್ಯಗಳೆಂದು ನೇಮಿತವಾದ ಅಂಶವೂ ಕವಿಗೆ ಮನ್ನಣೆ ಕೊಟ್ಟುದರ ದ್ಯೋತಕ. ಬೆನಗಲ್ ರಾಮರಾಯರು 'Renaissance in Modern Kannada' ಎಂಬ ತಮ್ಮ ಎಂ. ಎ. ಪ್ರಬಂಧ ಗ್ರಂಥದಲ್ಲಿ (೧೯೦೦, ಅಪ್ರಕಟಿತ) ಇವೆರಡೂ ಕೃತಿಗಳನ್ನು ಮೆಚ್ಚಿ ಬರೆದಿದ್ದಾರೆ.

ಮುದ್ದಣ ಎಂದರೆ ನಂದಳಿಕೆ ಗ್ರಾಮದ ಲಕ್ಷ್ಮೀನಾರಾಯಣನೇ ಎಂಬುದನ್ನು ಬೆನಗಲ್ ರಾಮರಾಯರೇ ಮೊದಲಿಗೆ ಬಹಿರಂಗ ಪಡಿಸಿದವರು - ತಮ್ಮ ಥೀಸಿಸಿನ ಹಾಗೂ ೧೯೦೧ನೆಯ ವರ್ಷದ 'ಸುವಾಸಿನಿ'ಯ ಮೂಲಕ. ಇದಕ್ಕೆ ಪಂಜೆಯವರು ದನಿಗೂಡಿಸಿದರು. ಮುದ್ದಣನ ಕಾವ್ಯಗಳನ್ನು ಪ್ರಕಟಿಸಿದ ರಾಮಾನುಜ ಅಯ್ಯಂಗಾರರ ಸಂಶಯ ನಿವೃತ್ತಿಯಾಗದಿದ್ದ ಆ ಕಾಲದಲ್ಲಿ ಸೇಂಟ್ ಅಲ್ಯೋಸಿಯಸ್ ಕಾಲೇಜಿನ ಆಗಿನ ಯೂರೋಪಿಯನ್ ಪ್ರಿನ್ಸಿಪಾಲರಾದ ರೆವರೆಂಡ್ ಜೆ. ಮೂರ್ ಮರುದನಿಯಿತ್ತುದೊಂದು ವಿಶೇಷದ ಸಂಗತಿಯಾಗಿದೆ. ಇದಕ್ಕೆ ಕಾಲೇಜಿನ ಕನ್ನಡ ಪಂಡಿತರಾಗಿದ್ದ ಸಜೀಪ ರಾಮಕೃಷ್ಣಯ್ಯರು ನಿಮಿತ್ತರಾದರು.

ಇತ್ತ 'ಸುವಾಸಿನಿ'ಯಲ್ಲಿ ರಾಮಾಶ್ವಮೇಧವು ಪ್ರಕಟವಾದ ಕೆಲವೇ ತಿಂಗಳೊಳಗೆ ಅದರ ಸೊಗಸಾದ ವಿಮರ್ಶೆಯನ್ನು 'ಎಂ.ಎನ್.ಎಸ್. ಹಾಗೂ ಬಿ.ಎಂ.ಎಸ್.' (ಎಂ. ಎನ್. ಶ್ರೀನಿವಾಸರಾವ್ ಹಾಗೂ ಬಿ.ಎಂ. ಶ್ರೀಕಂಠಯ್ಯನವರು) ಬರೆದರು* ಇನ್ನೊಂದು ವಿಮರ್ಶೆಯು ದೂರದ ಮದರಾಸಿನ 'Indian Review' ಪತ್ರಿಕೆಯಲ್ಲಿ ಪ್ರಕಟವಾಯಿತು.

ಉತ್ತರ ಕರ್ನಾಟಕದಲ್ಲಿ ಮುದ್ದಣನನ್ನು ಆದರದಿಂದ ಪ್ರಥಮತಃ ಬರಮಾಡಿಕೊಂಡ ಮ. ಪ್ರ. ಪೂಜಾರರು ರಾಮಾಶ್ವಮೇಧವನ್ನು ಸಂಗ್ರಹಿಸಿ ಟಿಪ್ಪಣಿ ಸಹಿತವಾಗಿ ಪ್ರಕಟಿಸಿದರು (೧೯೨೦). ಈ ಮುದ್ದಣ ನಂದಳಿಕೆಯ ಲಕ್ಷ್ಮೀನಾರಾಯಣಯ್ಯನೇ ಎಂಬುದು ಅವರಿಗೆ ಗೊತ್ತಿದ್ದರೂ ಸಂದೇಹ ನಿವೃತ್ತಿಯಾಗಿರಲಿಲ್ಲ.

ಮುದ್ದಣನ ಬಗ್ಗೆ, ಅವನ ಕೃತಿಗಳ ಬಗ್ಗೆ ಉಂಟಾದ ಆಸ್ಥೆಯ ಮೂಲಕ ಅವನ ಇತರ ಅಪೂರ್ಣ ಬರಹಗಳು, ಹಸ್ತಪ್ರತಿಗಳು ಎಲ್ಲಿವೆ ಎಂಬ ಜಿಜ್ಞಾಸೆ ಮೂಡಿತು. ಅದ್ಭುತ ರಾಮಾಯಣ, ರಾಮಾಶ್ವಮೇಧಗಳ ಎರಡೆರಡು ಪ್ರತಿಗಳನ್ನಂತೂ ಆತ ಸಿದ್ಧಗೊಳಿಸಿದ್ದನು.

---

* ಆಧುನಿಕ ದೃಷ್ಟಿಕೋನದಿಂದ ಬರೆಯಲಾದ ಈ ಪ್ರಬಂಧವು ನಮ್ಮ ಸಾಹಿತ್ಯವಿಮರ್ಶನದಲ್ಲಿ ಚಾರಿತ್ರಿಕ ಮಹತ್ವವುಳ್ಳದ್ದು. ಮುದ್ದಣನು ಆಯ್ದುಕೊಂಡ ಕಥಾವಸ್ತು ಹಳೆಯದೇ ಆದರೂ ಅವನಲ್ಲಿ [ಕವಿಸಮಯಾದಿ ಸಂಪ್ರದಾಯ ಕೃತಿಗಳ - ವಿ.ಸೀ.] ದೋಷಗಳಿಲ್ಲ; ಅವನ ಕಾವ್ಯ ಹೊಸತನದಿಂದ ಕೂಡಿದೆ ಎಂಬುದು ಆ ಲೇಖದ ತಿರುಳಾಗಿದೆ.

ಅವುಗಳ ಎರಡನೇ ಪ್ರತಿಯು ಯಾರ ಬಳಿಯಲ್ಲಿ ಉಳಿಯಿತು? ಇತರರ ಹೇಳಿಕೆಗಳ ಪ್ರಕಾರ ಕೆ. ಸುಂದರರಾಯರೆಂಬವರು ಮುದ್ದಣನ ಎಲ್ಲ ಹಸ್ತಪ್ರತಿಗಳನ್ನು ಕೊಂಡೊಯ್ದರಂತೆ. ಹಟ್ಟಿಯಂಗಡಿ ನಾರಾಯಣರಾಯರ ಹತ್ತಿರವೊ, ಗುಲ್ವಾಡಿ ಅಣ್ಣಾಜಿರಾಯರ ಹತ್ತಿರವೊ 'ಅದ್ಭುತ ರಾಮಾಯಣ'ದ ಪ್ರತಿಯಿದ್ದಿತು. ಅಂತೂ ಅಣ್ಣಾಜಿ ರಾಯರ ಮೂಲಕ ಆ ಪ್ರತಿಯು ಎಚ್. ಚೆನ್ನಕೇಶವ ಅಯ್ಯಂಗಾರರ ಕೈ ಸೇರಿತು. ಅದರಲ್ಲಿ ಕರ್ತೃವಿನ ಹೆಸರು ಎನ್. ಲಕ್ಷ್ಮೀನಾರಾಯಣಯ್ಯ ಎಂದು ಸ್ಪಷ್ಟವಾಗಿ ಇರುವುದರಿಂದ ಈ ವ್ಯಕ್ತಿ ಕಾವ್ಯವನ್ನು ಬರೆಯಬಲ್ಲ ಎಂಬ ಮಟ್ಟಿಗಂತೂ ನಿಶ್ಚಿತವಾಯಿತು. ಈ ಹಸ್ತಪ್ರತಿಯು ಕರ್ತೃತ್ವ ನಿರ್ಣಯ ವಿಚಾರದಲ್ಲಿ ಅತ್ಯಂತ ಮಹತ್ವದ ಪಾತ್ರವಹಿಸಿದೆ. ಈ ಪ್ರತಿಯಲ್ಲಿ ೧೧- ೧೫ ಆಶ್ವಾಸಗಳು ಬೇರೆಯಾಗಿ ಇವೆಯೆಂದು ಬೆನಗಲ್ ರಾಮರಾಯರು ಹೇಳುತ್ತಾರೆ. ಅದನ್ನು ಬದಲಿಸಿದವರು ಯಾರು ಎಂಬುದು ಕುತೂಹಲಕಾರಿಯಾಗಿದೆ. ಅಲ್ಲದೆ, ರಾಮಾನುಜಯ್ಯಂಗಾರರು ಹೊರತಂದ ಆವೃತ್ತಿಯಲ್ಲಿ ೧೬ ಆಶ್ವಾಸಗಳಿದ್ದರೆ ಇದರಲ್ಲಿ ೨೫. ಈ ಹಸ್ತಪ್ರತಿಯನ್ನು ಸದ್ಯ ಪಡೆದಿದ್ದವರು ಅದನ್ನು ಇದ್ದುದ್ದಿದ್ದಂತೆ ಪ್ರಕಟಿಸುವುದು ಅತ್ಯಂತ ಅವಶ್ಯವಿದೆ. ಅನಂತರ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದವರು ರಾಮಾಶ್ವಮೇಧದ ಹಸ್ತಪ್ರತಿಯೊಂದನ್ನು ದೊರಕಿಸಿದ್ದು 'ಗ್ರಂಥ ಸಂಪಾದನ ಶಾಸ್ತ್ರ'ದ ದೃಷ್ಟಿಯಿಂದ ಅದರ ಪರಿಶೀಲನೆ ನಡೆಯಬಹುದಾಗಿದೆ.

ಈ ವೇಳೆಗೆ ಮುದ್ದಣನ ರಾಮಾಯಣ ಕೃತಿಗಳು ಮುಂಬಯಿ ವಿಶ್ವವಿದ್ಯಾಲಯ ದಲ್ಲಿಯೂ ಪಠ್ಯ ಪುಸ್ತಕಗಳಾಗಿ ಗೊತ್ತಾದುವು. ಅದರಿಂದಾಗಿಯೂ ಮುದ್ದಣ ಮನೋರಮೆಯರ ಸಂವಾದ ದೃಷ್ಟಿಯಿಂದಾಗಿಯೂ ಅಧ್ಯಾಪಕ - ವಿದ್ಯಾರ್ಥಿ ವೃಂದದಲ್ಲಿ, ಅದರಂತೆ ಕನ್ನಡ ಕಾವ್ಯ ರಸಿಕರಲ್ಲಿ ಅವನ ಕೃತಿಗಳ ಪ್ರಸಾರ ಹೆಚ್ಚುತ್ತ ನಡೆಯಿತು. ಕ್ರಿ.ಶ. ೧೯೨೩ರಲ್ಲಿ ಮಂಗಳೂರಿನ ಕೆಲವು ಗಣ್ಯರೂ ಬೆನಗಲ್ ರಾಮರಾಯರೂ ಸೇರಿ ಕವಿಯ ಸ್ಮಾರಕವೊಂದನ್ನು ರಚಿಸಬೇಕು. ಭಾಷಣಾದಿಗಳನ್ನು ಏರ್ಪಡಿಸಬೇಕು - ಎಂಬುದಾಗಿ ನಿರ್ಧರಿಸಿದರು. ಆದರೆ ನೆರೆಹಾವಳಿಯಿಂದಾಗಿ ಅದು ಹಾಗೇ ಉಳಿದು ಬಿಟ್ಟಿತು.

ಮುಂದಿನ ಹೆಜ್ಜೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನವರದು. ಮುದ್ದಣ ಜಯಂತಿಯನ್ನಾಚರಿಸಿ ಉಪನ್ಯಾಸಗಳನ್ನೇರ್ಪಡಿಸಿದರಲ್ಲದೆ ಪ್ರಬುದ್ಧ ಕರ್ಣಾಟಕದ ಒಂದು ಸಂಚಿಕೆಯನ್ನು (೧೯೨೫) ಮುದ್ದಣನಿಗೆಂದು ಮೀಸಲಿಟ್ಟರು. ಅದರಲ್ಲಿಯ ಲೇಖನಗಳನ್ನು ಪ್ರತ್ಯೇಕವಾಗಿ ಗ್ರಂಥರೂಪದಲ್ಲಿ ಹೊರತಂದರು. ಮುಂದಿನ ಕನ್ನಡ ಕವಿ ಪ್ರಶಸ್ತಿಯ ಗ್ರಂಥ ಪರಂಪರೆಗೆ (ರನ್ನಕವಿ ಪ್ರಶಸ್ತಿ, ಕುಮಾರವ್ಯಾಸ ಪ್ರಶಸ್ತಿ ಇ.) ಇದುವೆ ಮಾರ್ಗದರ್ಶಿಯಾಯಿತು. ಇದರ ಪ್ರಚೋದಕರಾರೆಂಬುದರ ಸುಳುಹು ಗ್ರಂಥದಲ್ಲಿ ದೊರೆಯುತ್ತಿಲ್ಲವಾದರೂ, ಅವರು ಟಿ.ಎಸ್. ವೆಂಕಣ್ಣಯ್ಯ ಹಾಗೂ ಎ. ಆರ್. ಕೃಷ್ಣಶಾಸ್ತ್ರಿಗಳೇ ಇರಬೇಕೆಂಬುದು ಸಯುಕ್ತಿಕವಾಗಿದೆ. ಅವರಿಬ್ಬರ ಲೇಖನಗಳು ಸಂಕಲನದಲ್ಲಿರದಿದ್ದುದು ಮಾತ್ರ ಸೋಜಿಗದ ಸಂಗತಿ. ಹಾಗೆ

ಉಳಿದುಕೊಂಡ ಆ ಕಾಲದ ಇನ್ನೊಂದು ಲೇಖನವೆಂದರೆ, ಐರೋಡಿ ಶಿವರಾಮಯ್ಯನವರು 'ಸುವಾಸಿನಿ'ಯ ನವೆಂಬರ್, ಡಿಸೆಂಬರ್ ೧೯೨೫ರಲ್ಲಿ ಬರೆದ ಲೇಖನ. ಶಿವರಾಮಯ್ಯನವರು ಮುದ್ದಣನ ನಿಕಟ ಪರಿಚಯವಿದ್ದವರು. ಅನೇಕ ಮಹತ್ವದ ಮಾತುಗಳನ್ನು ಅವರು ಅದರಲ್ಲಿ ಕಾಣಿಸಿದ್ದಾರೆ. "ಈ ಕವಿವರ್ಯರು ನನ್ನ ಪ್ರಾಣಮಿತ್ರರು. ನಾನು ಅವರೊಡನೆ ಎಷ್ಟೋ ಬಾರಿ... ಸಾಹಿತ್ಯ ಸಂಬಂಧ ವಿಚಾರಗಳ ಬಗ್ಗೆ ಚರ್ಚಿಸಿರುವೆನು. ಅವೆಲ್ಲವುಗಳಿಂದ ಅವರ ಬುದ್ಧಿಶಕ್ತಿಯನ್ನು ಮಟ್ಟ ಹಾಕಿರುವೆನು.* ಅವರು ಗ್ರಂಥಗಳನ್ನು ಬರೆಯುವುದನ್ನು ಕಣ್ಣಾರೆ ಕಂಡಿರುವೆನು" ಎಂದು ಸ್ಪಷ್ಟವಾಗಿ ಸಾರಿದ್ದಾರೆ.

ಮುದ್ದಣ ವಿಮರ್ಶೆಯ ಗ್ರಂಥಗಳು ಅನಂತರ ಹಲವಾರು ಹೊರಬಿದ್ದು, ಆ ಮೂಲಕ ಇನ್ನು ಕೆಲವು ಹೊಸ ಅಂಶಗಳು ಬೆಳಕಿಗೆ ಬಂದಿದ್ದರೂ ಈ ಗ್ರಂಥದ ಪ್ರತಿಷ್ಠೆ ಮಾಸಿಲ್ಲ. ಇದರಲ್ಲಿ ಬಂದಿರುವ ಲೇಖಕರೆಲ್ಲ ಹಳೆಯ ತಲೆಮಾರಿನ ಸುಪ್ರಸಿದ್ಧರೇ. ಮುನ್ನುಡಿಕಾರ ಡಿ.ವಿ.ಜಿ. ಯವರು ಮುದ್ದಣನು ಹುಟ್ಟುಕವಿ ಮತ್ತು ನೂತನ ಮಾರ್ಗಾನ್ವೇಷಿ ಎಂಬ ಅಂಶಗಳನ್ನು ಅಧಿಕಾರ ವಾಣಿಯಲ್ಲಿ ನಿರೂಪಿಸಿದ್ದಾರೆ. ಕವಿಚರಿತಕಾರ ಆರ್. ನರಸಿಂಹಾಚಾರ್ಯರು ಮುದ್ದಣ ಕವಿಯ ಬಗ್ಗೆಯೂ ಅಧಿಕೃತ - ವಿವರಗಳನ್ನು ಒದಗಿಸಿದ್ದಾರೆ - ಅವನ ತಂದೆ ತಾಯಿಯರ ಹುಟ್ಟಿದ ವರ್ಷ ಮೊದಲ್ಗೊಂಡು! ಮುದ್ದಣನ ತಮ್ಮನಿಂದಲೂ ಮಿತ್ರರೊಬ್ಬರಿಂದಲೂ ಸಂಗ್ರಹಿಸಿದುದಂತೆ. ಆ ವೇಳೆಗೆ ಇನ್ನಾರಾದರೂ ಅದಕ್ಕೂ ಹೆಚ್ಚಿನ ಮಾಹಿತಿಯನ್ನು ಕಲೆಹಾಕಿದ್ದರೆ ನೆಟ್ಟಗಿತ್ತು. ಅದರಿಂದ ಕವಿಯ ಜೀವನದ ಬಗ್ಗೆ ಈಗಲೂ ಉಳಿದಿರುವ ಕೆಲವು ವಿರೋಧಾಭಾಸಗಳಿಗೆ ಉತ್ತರ ದೊರೆಯುತ್ತಿತ್ತು.

ಅದೇನೇ ಇರಲಿ, ಈ ಗ್ರಂಥದಲ್ಲಿ ಮುದ್ದಣನ ಜೀವನಾಂಶಗಳನ್ನು ಮಳಲಿ ಸುಬ್ಬರಾಯರು, ಪಂಜೆ ಮಂಗೇಶರಾಯರು ಮತ್ತು ಬೆನಗಲ್ ರಾಮರಾಯರು ಬಲು ಶ್ರದ್ಧೆಯಿಂದ ಒದಗಿಸಿದ್ದಾರೆ. ಹುರಳಿ ಭೀಮರಾಯರು ಅದಕ್ಕೆ ಧ್ವನಿಗೂಡಿಸಿದ್ದಾರೆ. ಮುದ್ದಣನ ಮಾಸ್ತರಿಕೆ, ಅವನ ಯಕ್ಷಗಾನದ ಅಭಿರುಚಿ, ಸಂಸ್ಕೃತ ಜ್ಞಾನದ ಮಟ್ಟ, ಸಂಗೀತದ ಅಭ್ಯಾಸ, ವಿವಿಧ ಹೆಸರುಗಳಲ್ಲಿ ಗ್ರಂಥ ಪ್ರಕಟಿಸಿದ್ದರ ಹಿನ್ನೆಲೆ, ಅವನ ದಾಂಪತ್ಯ ಜೀವನ, ಸ್ವಭಾವ, ಲಕ್ಷಣ, ಕೊನೆಗಾಲದಲ್ಲಿ ಅಂಟಿಕೊಂಡ ಕ್ಷಯರೋಗ ಬಾಧೆ - ಇತ್ಯಾದಿ ವಿವರಗಳಿಗೆ ಈ ನಾಲ್ವರ ಲೇಖನಗಳೇ ಮೂಲಾಧಾರ. ಮುದ್ದಣನು ದಕ್ಷಿಣ ಕನ್ನಡ ಜಿಲ್ಲೆಯ ಅತ್ಯಂತ ಶ್ರೇಷ್ಠ ಕವಿ ಎಂಬ ಅಭಿಮಾನದಿಂದ ಪ್ರೇರಿತವಾದ ವಾಕ್ಸರಣಿ ಈ ಲೇಖಗಳಲ್ಲಿ ಕಂಡು ಬಂದಿದ್ದರೆ ಅದು ಸಹಜವೇ ಆಗಿದೆ. ಇವು ಕವಿ ತೀರಿಕೊಂಡು ೨೫ ವರ್ಷ ಕಳೆದ ಮೇಲಿನ ನೆನಹುಗಳಾದ್ದರಿಂದ ಅಲ್ಲಲ್ಲಿ ಮರೆವಿನ ಮೂಲಕವಾದ ವಿಸಂಗತಿಗಳಿಲ್ಲದೆ ಇಲ್ಲ.

---

* ಮೈಸೂರು ಕಡೆ ಈ ಮಾತಿಗೆ ಕೀಳ್ಮೆ ಇದ್ದರೂ ಇಲ್ಲಿ ಅದರ ಅರ್ಥ Level, Rank ಎಂಬುದು - ವಿ.ಸೀ.

'ಮುದ್ದಣ' ಗ್ರಂಥದ ಮೊದಲ ಭಾಗದಲ್ಲಿ ಈ ಲೇಖಗಳು ಬಂದಿವೆಯಾದರೆ, ಎರಡನೆ ಭಾಗದಲ್ಲಿ ಉಗ್ರಾಣ ಮಂಗೇಶರಾಯರು, ಮ. ಪ್ರ. ಪೂಜಾರರು ಮತ್ತು ಮಾಸ್ತಿಯವರು ಮುದ್ದಣನ ರಾಮಾಯಣ ಕೃತಿಗಳನ್ನು ಒಂದೊಂದಾಗಿ ಪರಾಮರ್ಶಿಸಿದ್ದಾರೆ. ಕೊನೆಯಲ್ಲಿ ಕರ್ತೃತ್ವ ವಿಚಾರದಲ್ಲಿ ಬಲವಾದ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದ ರಾಮಾನುಜಯ್ಯಂಗಾರರ ಲೇಖವಿದೆ. ಇತರರ ಒಕ್ಕಣಿಕೆಯಲ್ಲಿರಬಹುದಾದ ನ್ಯೂನತೆಗಳನ್ನು, ಅವರು ತಮ್ಮ ಆಫೀಸಿನಲ್ಲಿದ್ದ ಹಳೆಯ ದಾಖಲೆಗಳ ಆಧಾರದಿಂದ ತೋರಿಸಿಕೊಟ್ಟಿದ್ದಾರೆ. ಉದಾಹರಣೆಗೆ 'ಮೈಸೂರಿಂದ ಬರುತ್ತಿದ್ದ ಪ್ರೂಫ್‌ಗಳನ್ನು ಮುದ್ದಣ ತಿದ್ದುತ್ತಿದ್ದ' ಎಂಬ ಹುರುಳಿ ಭೀಮರಾಯರ ಹೇಳಿಕೆಗೆ ಪ್ರತಿಯಾಗಿ ಎಂ.ಎ. ಆರ್. " ನಾವು ಒಂದಾವೃತ್ತಿಯಾದರೂ ಒಂದು ಫಾರಂಮಿಗೂ ಕೂಡ ಪ್ರೂಫನ್ನು ಅವರಿಗೆ ಕಳುಹಿಸಿಲ್ಲ. ನನಗೆ ಚೆನ್ನಾಗಿ ಗೊತ್ತುಂಟು; ನಮ್ಮ ರೆಕಾರ್ಡುಗಳಲ್ಲಿಯೂ ದಾಖಲೆಯಿಲ್ಲ.... ಬೆನಗಲ್ ರಾಮರಾಯರ ಲೇಖನದಲ್ಲಿಯೂ ಇಂಥ ದೃಷ್ಟಾಂತಗಳು ಸಿಕ್ಕುತ್ತವೆ" ಎಂದಿದ್ದಾರೆ.

ಮುದ್ದಣನ ವಿವಿಧ ನಾಮಧೇಯಗಳಿಂದ ಯಾರಿಗಾದರೂ ಅನ್ಯಾಯವಾಗಿದ್ದರೆ ಅದು ರಾಮಾನುಜಯ್ಯಂಗಾರರಿಗೇನೆ! ಆಧುನಿಕನಾದ ತಾನು ಸ್ವಂತದ ಹೆಸರು ಹೇಳಿದರೆ ಇವರು ಪ್ರಕಟಿಸಲಿಕ್ಕಿಲ್ಲ - ಎಂಬ ಪೂರ್ವಾಗ್ರಹದಿಂದ ಅವನು ವರ್ತಿಸಿದುದು ತಿಳಿದು ಬಂದು ಅವರಿಗೆ ಬೇಸರವನ್ನುಂಟು ಮಾಡಿರಬೇಕು. ರಾಮಾಶ್ವಮೇಧದ ಪ್ರಕಟಣೆಯ ಕಾಲಕ್ಕೆ ಅವರು 'ಗ್ರಂಥಕರ್ತರು ನೀವೇ ಆಗಿರಬೇಕೆಂದು ಊಹಿಸುತ್ತೇವೆ. ಗ್ರಂಥವು ಪ್ರೌಢವಾಗಿದೆ; ಆಧುನಿಕರಾಗಿದ್ದರೂ ಬಾಧಕವಿಲ್ಲ. ಅವರ ಹೆಸರನ್ನು ಪ್ರಚಾರಗೊಳಿಸಲು ಸಿದ್ಧರಿದ್ದೇವೆ. ಖಂಡಿತವಾಗಿ ತಿಳಿಸುವುದು" ಎಂದಾಗಲೂ ಮುದ್ದಣ ಒಪ್ಪಿಕೊಳ್ಳಬೇಡವೆ? ಆಗೂ ತಾನು ಗ್ರಂಥಕರ್ತನಲ್ಲ ಎಂದು ಸಾಧಿಸಿದಾಗ ಅವರಿಗೆ ಸಾತ್ವಿಕ ಸಂತಾಪವುಂಟಾಗಿರಲು ಸಾಕು. ಅಂತೆಯೇ 'ಗ್ರಂಥತ್ರಯಕ್ಕೂ ಅವರೇ ಕರ್ತೃವಾಗಿದ್ದ ಪಕ್ಷದಲ್ಲಿ ಅವರು ಬಲು ಸುಳ್ಳು, ತಟವಟಗಳನ್ನು ಹೇಳಿ ನಮಗೆ ಮೋಸ ಮಾಡಿದರೆಂದು ಹೇಳಬೇಕಾಗುತ್ತದೆ" ಎಂದವರು ನೊಂದ ಮನದಿಂದ ನುಡಿದಿದ್ದಾರೆ. ಮುಂದುವರಿದು ಅವರು 'ಶ್ರೀ ರಾಮಪಟ್ಟಾಭಿಷೇಕಕ್ಕೂ ನಮ್ಮ ನಂದಳಿಕೆಯವರೇ ಕರ್ತೃವೆಂದು ಯಾರು ಎಷ್ಟು ವಿಚಾರ ಮಾಡಿ ಹೇಳಿದರೂ, ನಾನು ಒಪ್ಪಲಾರೆನು" ಎಂದುಬಿಟ್ಟರು. ಮುದ್ದಣ ನಡೆದುಕೊಂಡ ರೀತಿಯ ಬಗ್ಗೆ ಮಾತ್ರ ಅವರಿಗೆ ಬೇಸರವಿತ್ತಲ್ಲದೆ, ಕೃತಿಗಳ ಬಗ್ಗೆ ಅಸಮಾನವಾದ ಮೆಚ್ಚಿಕೆಯನ್ನು ಅಲ್ಲಲ್ಲಿ ವ್ಯಕ್ತಪಡಿಸಿದ್ದಾರೆ.

ರಾಮಪಟ್ಟಾಭಿಷೇಕದ ಬಗ್ಗೆ ಅಯ್ಯಂಗಾರರ ಈ ಅಭಿಪ್ರಾಯವು ಗೋವಿಂದ ಪೈಗಳಿಗೆ ಒಪ್ಪಿಗೆಯಾಗಲಿಲ್ಲ. 'ಈ ಕಾವ್ಯವು ಇತ್ತೀಚಿನದು, ಹಳೆಯದಲ್ಲ; ದಕ್ಷಿಣ ಕನ್ನಡ ಜಿಲ್ಲೆಯವರಿಂದಲೇ ರಚಿತವಾದುದು; ೧೯ನೇ ಶತಮಾನದಲ್ಲಿ ಇಷ್ಟರಮಟ್ಟಿಗಿನ ಕಾವ್ಯ ಸಿದ್ಧಿಯನ್ನು ಪಡೆದ ಕವಯಿತ್ರಿ ಇರಲೇ ಇಲ್ಲ; ಹಾಗಿದ್ದವ ಮುದ್ದಣ ಒಬ್ಬನೇ; ಅತ ಏವ ಅದು ಮುದ್ದಣ ವಿರಚಿತ" ಎಂಬ ನಿಲುಮೆಯನ್ನು ಹಂತಹಂತವಾಗಿ ಪ್ರತಿಪಾದಿಸಲು ದೂರ

ದೂರದ ಪ್ರಮಾಣಗಳನ್ನು ಹುಡುಕಿ ತಂದರು(೧೯೨೮). ಈ ಲೇಖವು ಗೋವಿಂದ ಪೈಗಳ ಪ್ರೌಢ ಸಂಶೋಧನ ಲೇಖನಗಳಲ್ಲಿ ಒಂದಾಗಿದೆ.

ಎಸ್. ವಿ. ರಂಗಣ್ಣನವರಿಗೆ ಮುದ್ದಣನ ಕುರಿತ ಅದುವರೆಗಿನ ವಿಮರ್ಶೆ ಅಭಿಮಾನಾಂಧವಾದ ಪ್ರಶಂಸೆಯಾಗಿ ತೋರಿತು, ಮುದ್ದಣನನ್ನು ಶೇಕ್ಸಪಿಯರ್, ಕಾಳಿದಾಸ, ರಸ್ಕಿನ್ ಮೊದಲಾದವರಿಗೆ ಹೋಲಿಸಿದ ಬರಹವೂ ಇದ್ದಿತು. ಮುದ್ದಣ ಅಷ್ಟರಮಟ್ಟಿಗೆ ಮಹಾಕವಿಯೆ? ರಂಗಣ್ಣನವರು ತಮ್ಮ ಲೇಖದಲ್ಲಿ ಮಹಾಕಾವ್ಯದ ಸ್ಥೂಲ ಸೂತ್ರಗಳನ್ನು ಮೊದಲಿಗೆ ಹೇಳಿ, ರಾಮಾಶ್ವಮೇಧದ ಕಥಾನಕವು ಆ ಮಾನದಂಡಕ್ಕೆ ನಿಲ್ಲುವುದಿಲ್ಲ; ಅದರ ಗದ್ಯಶೈಲಿ ಹಾಗೂ ಮುದ್ದಣ - ಮನೋರಮೆಯರ ಸಂವಾದಗಳಷ್ಟೇ ಗಣನೀಯವಾಗಿವೆ, ಎಂದರು (ಪ್ರ.ಕ. ೧೯೩೪). ಆ ಲೇಖ ಬರೆದು ೨೫ ವರ್ಷಗಳ ಅನಂತರ ಪುನರ್ಮುದ್ರಿಸಬೇಕಾಗಿ ಬಂದಾಗ, ಅದರಲ್ಲಿ ಯಾವುದೇ ಮಾರ್ಪಾಟನ್ನು ಮಾಡುವ ಅಗತ್ಯ ತೋರಲಿಲ್ಲವಂತೆ! ಮುದ್ದಣಾಭಿಮಾನಿಗಳಿಗೆ ಸ್ವಾಭಾವಿಕವಾಗಿಯೇ ಈ ಲೇಖ ಹಿಡಿಸಲಿಲ್ಲ. ಗೋವಿಂದ ಪೈಯವರು "ಶೇಕ್ಸ್‌ಪಿಯರನ ನಾಟಕಗಳನ್ನು ಟಾಲ್‌ಸ್ಟಾಯಿಯಂತವರು ತೆಗಳಿದರಾದರೂ ಅವನ ಸ್ಥಾನಮಾನಕ್ಕೆ ಚ್ಯುತಿಯಿದೆಯೆ?" ಎಂದು ಕೇಳಿದ್ದಾರೆ. ರಾಮಚಂದ್ರ ಉಚ್ಚಿಲರು ರಂಗಣ್ಣನವರ ನಿಲುಮೆಯನ್ನು 'ಸುವರ್ಣ ಚಿತ್ರದ ಸಾಮಾನ್ಯ ವಿಮರ್ಶೆ' ಎಂದು ಕರೆದು, ಆ ಲೇಖವನ್ನು ಖಂಡಿಸಿದ್ದಾರೆ.

ಈ ಮಧ್ಯೆ ಬವುಳಾಡಿ ವೆಂಕಟರಮಣ ಹೆಬ್ಬಾರರ ಹೇಳಿಕೆಯೊಂದು ಹೊರ ಬಂದಿತು (೧೯೪೪). ಮುದ್ದಣನ ಪದ್ಯರಚನೆಯನ್ನು ಅಲ್ಲಲ್ಲಿ ತಿದ್ದಿದ್ದಲ್ಲದೆ, ಅವರು ರಾಮಪಟ್ಟಾಭಿಷೇಕದ ೩೩ ಷಟ್ಪದಿಗಳನ್ನು ಬರೆದು ಕೊಟ್ಟರಂತೆ. ಗದ್ಯ ಮಾಧ್ಯಮ ಅವರೇ ಸೂಚಿಸಿದುದಂತೆ. ಇದು ಕೂಡ ಪ್ರತಿರೋಧಕ್ಕೆ ಗುರಿಯಾಯಿತು. ಮೇಲ್ಮಟ್ಟದ ಕಾವ್ಯ ಸಿದ್ಧಿಯನ್ನು ಹೊಂದಿದ್ದ ಮುದ್ದಣನು, ಬೇರೆಯವರು ಬರೆದುಕೊಟ್ಟದ್ದನ್ನು ಇದ್ದುದಿದ್ದಂತೆ ಸ್ವೀಕರಿಸಿಯಾನೆ? - ಎಂಬುದಾಗಿ ಕೆ. ವೆಂಕಟರಾಯಾಚಾರ್ಯರು ಪ್ರಶ್ನಿಸಿದ್ದಾರೆ. ಏನಿದ್ದರೂ ಬವುಳಾಡಿಯವರ ಹೇಳಿಕೆಗೆ ಇನ್ನೊಂದು ಕಾರಣದಿಂದ ಮಹತ್ವವಿದೆ. ಅದೆಂದರೆ, ೧೯೪೪ಕ್ಕೆ ಸುಮಾರು ೨೦ ವರ್ಷಗಳ ಹಿಂದೆ, ಪೂರ್ವೋಕ್ತ ಐರೋಡಿ ಶಿವರಾಮಯ್ಯನವರು, ಬವುಳಾಡಿ - ಮುದ್ದಣರ ಸಂಪರ್ಕವನ್ನು ತಾವಾಗಿ ಉಲ್ಲೇಖಿಸಿದ್ದಾರೆ. ಬವುಳಾಡಿಯವರ ವಿದ್ವತ್ತನ್ನು ಮುದ್ದಣ ಅವರಿಂದ ವಿಶೇಷ ನೆರವು ಪಡೆದುದನ್ನು ಎದ್ದು ಕಾಣುವಂತೆ ಪ್ರಸ್ತಾಪಿಸಿದ್ದಾರೆ.

ರಾಮಾಶ್ವಮೇಧವೂ ಪಠ್ಯ ಪುಸ್ತಕಗಳ ಸಾಲಿನಲ್ಲಿ ಸೇರಿತು. ಮುದ್ದಣನ ಕೃತಿಗಳ ಪ್ರಸಾರವು ಮುಂದುವರಿಯಿತು. ಅವುಗಳ ಅಭ್ಯಾಸವು ಸುಕರವಾಗಲೆಂದು ಗದ್ಯಾನುವಾದಗಳು ಹೊರಟವು. ಎಸ್.ವಿ. ಪರಮೇಶ್ವರ ಭಟ್ಟರು ವಿಸ್ತೃತವಾದ ಪೀಠಿಕೆ, ಟಿಪ್ಪಣಿಗಳೊಂದಿಗೆ ರಾಮಪಟ್ಟಾಭಿಷೇಕ ಮತ್ತು ಅದ್ಭುತರಾಮಾಯಣಗಳನ್ನು ಪ್ರಕಟಿಸಿದರು. ಕಾವ್ಯಾಲಯದವರು ರಾಮಾಶ್ವಮೇಧವನ್ನು ಹೊರತಂದರು. ಯಕ್ಷಗಾನ ಕೃತಿಗಳು ಸಹ ಪುನರ್ಮುದ್ರಣಗೊಂಡವು. ಮೈಸೂರಿನ ಪ್ರಚಾರ ಪುಸ್ತಕ ಮಾಲೆಯವರು ೧೯೪೩ರಷ್ಟು ಹಿಂದೆ ತ. ಸು. ಶಾಮರಾಯರಿಂದ

ಪುಸ್ತಕ ಬರೆಯಿಸಿದರು. ಮಂಗಳೂರಿನ ತರುಣ ಕಲಾವೃಂದದವರು ಮುದ್ದಣನ ನೆನಹಿನ ರೂಪದ ಸ್ಮಾರಕ ಗ್ರಂಥವನ್ನು ಪ್ರಕಟಿಸಿದರು (೧೯೫೪).

ಇತ್ತ ಬಿಡಿ ಲೇಖನಗಳು ಪ್ರಕಟವಾಗುತ್ತಲೇ ಇದ್ದುವು. ಅವುಗಳಲ್ಲಿ ಮುದ್ದಣ, ಮನೋರಮೆಯರ ಸರಸ ಸಂಭಾಷಣೆಗೆ ಹೆಚ್ಚು ಇಂಬು ದೊರೆತುದು ಸಹಜವೇ ಆಗಿದೆ. ಹಳೆಯ ತಲೆಮಾರಿನ ಲೇಖಕರಲ್ಲಿ ಮುಳಿಯ ತಿಮ್ಮಪ್ಪಯ್ಯ, ದ. ರಾ. ಬೇಂದ್ರೆ, ರಂ.ಶ್ರೀ. ಮುಗಳಿ, ರಾಜರತ್ನಂ ಮೊದಲಾದವರು ಮುದ್ದಣನ ಪ್ರತಿಭಾ ವಿಶೇಷಗಳನ್ನು ವಿವರಿಸಿದ್ದಾರೆ. ವಿ.ಕೃ. ಗೋಕಾಕರು ರಾಮಾಶ್ವಮೇಧದಲ್ಲಿ ಆಧುನಿಕ ಕಾವ್ಯದ ನಡೆಯನ್ನು ಕಂಡರು! ಅದರ ಆರಂಭದ ಭಾಗವನ್ನು ಸರಳ ರಗಳೆಗೆ ಪರಿವರ್ತಿಸಲು ಸಾಧ್ಯವೆಂದಿದ್ದಾರೆ. ಏರ್ಯ ಲಕ್ಷ್ಮೀನಾರಾಯಣ ಆಳ್ವರು 'ರಾಮಾಶ್ವಮೇಧದ ರಸ ತರಂಗ'ಗಳನ್ನು ಪ್ರತ್ಯೇಕವಾಗಿ ಎತ್ತಿ ತೋರಿಸಿದ್ದಾರೆ. ಇತ್ತೀಚಿನ ರಾಮಾಶ್ವಮೇಧದ ಒಂದು ಆವೃತ್ತಿಯು (೧೯೭೩) ತೆಕ್ಕುಂಜ ಗೋಪಾಲ ಕೃಷ್ಣ ಭಟ್ಟರ ಪರಿಶ್ರಮದ ಫಲವಾಗಿದ್ದು ರಾಜ್ಯ ಸಾಹಿತ್ಯ ಅಕಾಡೆಮಿಯು ಅದನ್ನು ಗೌರವಿಸಿದುದು ಉಚಿತವೇ ಆಗಿದೆ.

ಮುದ್ದಣನ ಮೇಲಿನ ಪ್ರೀತ್ಯಾದರವು ಇನ್ನು ಹಲವು ರೂಪ ತಾಳಿತು. ವಸಂತ ಕವಲಿಯವರು 'ಎನ್ನ ಮುದ್ದಿನ ಮುದ್ದಣ' ವೆಂಬ ನಾಟಕ ಬರೆದು ಮುಂಬಯಿ ರಂಗದ ಮೇಲೆ ಯಶಸ್ವಿಯಾಗಿ ಆಡಿ ತೋರಿಸಿದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಂತೂ ಅವನ ಹೆಸರು ಮನೆಮಾತಾಗಿ ಬಿಟ್ಟಿತು. ಎಳೆಯ ವಿದ್ಯಾರ್ಥಿಗಳಿಗೆ ಸಪ್ತವಾರಗಳನ್ನು ಕಲಿಸುವಾಗ, "ಸೋಮವಾರ ಮುದ್ದಣನ ಜನನ, ಮಂಗಳವಾರ ಮುದ್ದಣ ಪಾಣಿಗ್ರಹಣ.... ಇತ್ಯಾದಿ ಉಕ್ತಿ ಮಾಲಿಕೆ ಸಿದ್ಧವಾಯಿತು. ಉಡುಪಿ ಮುಂತಾದ ಊರುಗಳಲ್ಲಿ ಮುದ್ದಣ ಜಯಂತಿಯು ನಿಯಮಿತವಾಗಿ ನಡೆಯುತ್ತಿದ್ದುದನ್ನೂ ಇಲ್ಲಿ ಸ್ಮರಿಸಬೇಕು. ವಿಶೇಷತಃ ಮುಂಬಯಿಯಲ್ಲಿ ರಾತ್ರಿ ಶಾಲೆಯ ವಿದ್ಯಾರ್ಥಿಗಳು ಇಂಥ ಜಯಂತ್ಯುತ್ಸವವನ್ನು ಉತ್ಸಾಹದಿಂದ ನಡೆಸಿಕೊಂಡು ಬರುತ್ತಿದ್ದಾರೆ. ಅಲ್ಲದೆ ನಂದಳಿಕೆಯಲ್ಲಿ ಅವನ ಸ್ಮಾರಕವನ್ನು ರಚಿಸಬೇಕೆಂಬ ಪ್ರಯತ್ನ ನಡೆದುದು ಉಲ್ಲೇಖನೀಯವಾಗಿದೆ.

ಮುದ್ದಣ ಶತಮಾನೋತ್ಸವವು (೧೯೬೯-೭೦) ಮುದ್ದಣ ವಿಮರ್ಶನ ಕ್ಷೇತ್ರವನ್ನು ಇನ್ನಷ್ಟು ವಿಸ್ತರಿಸಿತು. ಉತ್ಸವ ಕಾರ್ಯಕ್ರಮಗಳ ವಿವಿಧ ಭಾಷಣಗಳನ್ನು ಆ ಸಂಸ್ಥೆಯವರು ಪ್ರಕಟಿಸಿದರು. ಆ ದೃಷ್ಟಿಯಿಂದ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆ, ಉಡುಪಿಯ ಎಂ.ಜಿ.ಎಂ. ಕಾಲೇಜು ಮತ್ತು ಕ್ರಿಶ್ಚಿಯನ್ ಹೈಸ್ಕೂಲ್ - ಇವುಗಳ ಪ್ರಕಟನೆಗಳೂ ಮುಂಬಯಿಗರ 'ಯಕ್ಷಗಾನ ಚರಿತ್ರೆ ಹಾಗೂ ಮುದ್ದಣ' ಗ್ರಂಥವೂ ಮನನೀಯವಾಗಿವೆ. ವಿಶೇಷ ಸಂಚಿಕೆಗಳನ್ನು ಹೊರತಂದ ಪತ್ರಿಕೆಗಳಲ್ಲಿ 'ಕರ್ಮವೀರ'ದ ಪರಿಶ್ರಮ ಎದ್ದು ತೋರುವಂತಿದೆ. ಈ ನಿಮಿತ್ತದಿಂದ ಪ್ರಕಟವಾದ ಅನೇಕ ಲೇಖನಗಳು ತೇಲು ಮೇಲಿನವಾಗಿದ್ದರೂ ಮುದ್ದಣನ ಕಾವ್ಯ ಪ್ರತಿಭೆಯ ಕೆಲವು ಹೊಸ ಮುಖಗಳನ್ನು ಕಂಡುಹಿಡಿದ

ಹಲವು ಲೇಖಗಳು ಬೆಳಕಿಗೆ ಬಂದುದು ಒಂದು ವಿಶೇಷ. ಇಷ್ಟರವರೆಗೆ ಅವನ ಯಕ್ಷಗಾನ ಕೃತಿಗಳ ನಿಜವಾದ ಪರಿಶೀಲನೆ ನಡೆದಿರಲಿಲ್ಲ. ಕಾರಂತರ 'ಯಕ್ಷಗಾನ ಬಯಲಾಟ' ದಲ್ಲಿಯೂ ಆ ಕುರಿತ ವಿವೇಚನೆ ವಿವರವಾದುದಲ್ಲ. ರಾಮಚಂದ್ರ ಉಚ್ಚಿಲರು ಮೇಲೆ ಹೇಳಿದ ಮುಂಬಯಿ ಪ್ರಕಟನೆಯಲ್ಲಿ ಪ್ರಥಮತಃ ಆಳವಾದ ವಿಮರ್ಶೆಯನ್ನು ಒದಗಿಸಿದ್ದಾರೆ.

ವಿಶೇಷ ಬೆಳಕಿಗೆ ಬಂದಿರದಿದ್ದ ಇನ್ನೊಂದು ಅಂಶವೆಂದರೆ ಮುದ್ದಣನ ಶಬ್ದಭಂಡಾರ. ಎಂ. ರಾಜಗೋಪಾಲಾಚಾರ್ಯರು ಮುದ್ದಣನಲ್ಲಿ ಬಾಣನ ಪದಶೈಲಿಯನ್ನು ಕಂಡಿದ್ದಾರೆ. ಇನ್ನೊಂದು ಲೇಖದಲ್ಲಿ ಅವರು ಮುದ್ದಣ ಪ್ರಯೋಗಿತ ಶಬ್ದಗಳ ಅರ್ಥ ನಿರ್ಣಯದಲ್ಲಿ ಆದ ಕೆಲವು ತಪ್ಪುಗಳನ್ನು ತೋರಿಸಿದ್ದಾರೆ. ಕಾವ್ಯಾಲಯದವರ ರಾಮಾಶ್ವಮೇಧ ಪ್ರಕಟನೆಗೆ ಕೆ. ನರಸಿಂಹಶಾಸ್ತ್ರಿಯವರು ಶಬ್ದಾರ್ಥವನ್ನು ಬರೆದುದಲ್ಲದೆ, ಪದಗಳ ಆಯ್ಕೆಯಲ್ಲಿ ಮುದ್ದಣನ ಜಾಣ್ಮೆ, ಔಚಿತ್ಯ ಪರಿಜ್ಞಾನಗಳನ್ನು ವಿವರಿಸಿದ್ದಾರೆ. ಪ್ರಸ್ತುತ ಲೇಖಕ ಮತ್ತು ರಾಮಚಂದ್ರ ಉಚ್ಚಿಲರು ಬಳಕೆಯವಲ್ಲದ ಮುದ್ದಣನ ಎಲ್ಲ ಶಬ್ದಗಳನ್ನು ಗಣಕ ಯಂತ್ರದ ಮೂಲಕ ವಿಶ್ಲೇಷಿಸುವ ಯೋಜನೆಯೊಂದನ್ನು ರೂಪಿಸಿದ್ದು. ಯೋಜನೆಯ ಹಂತವಾಗಿ ಈಗಾಗಲೇ ೨೭೦೦ ಶಬ್ದಗಳನ್ನು ಗಣಕ ಯಂತ್ರಕ್ಕೆ ಪೂರೈಸಲಾಗಿದೆ. ಅವುಗಳ ವಿಶ್ಲೇಷಣೆಯಿಂದ ಹೊರಡುವ ಅಂಶಗಳನ್ನು ಮುಂದಿನ ಲೇಖದಲ್ಲಿ ವಿವರಿಸಲಾಗಿದೆ.

ಇಂತು ಮುದ್ದಣ ಹಾಗೂ ಅವನ ಕೃತಿಗಳನ್ನು ಕುರಿತು ನೂರರಷ್ಟು ಲೇಖಗಳು ಹತ್ತು ಗ್ರಂಥಗಳು, ಆರು ವಿಶೇಷ ಸಂಚಿಕೆಗಳು, ಒಂಬತ್ತು ಸಾರಸಂಗ್ರಹ ಗದ್ಯಾನುವಾದಗಳು ಪ್ರಕಟವಾಗಿವೆ. ಇನ್ನೂ ಬರುತ್ತಲೇ ಇವೆ. ಉದಾಹರಣೆಗೆ ಸರ್ವಶ್ರೀ ಜಿ. ವೆಂಕಟಸುಬ್ಬಯ್ಯ ಅವರ 'ಮುದ್ದಣನ ಶಬ್ದಭಂಡಾರ'. ನಂದಳಿಕೆ ಬಾಲಚಂದ್ರರಾಯರು ಬೇರೊಂದು ಬಗೆಯಲ್ಲಿ ಮುದ್ದಣ ಸ್ಮರಣೆಯನ್ನು ಕೈಕೊಂಡಿದ್ದಾರೆ. ಮುದ್ದಣ ವಿಮರ್ಶೆಗೆ ಮುಕ್ತಾಯವೇ ಇಲ್ಲವೇನೋ!



---

ವಿ.ಸೀ. ಅವರು ಸಂಪಾದಿಸಿದ ಮುದ್ದಣ ಗ್ರಂಥದ ಮೊದಲನೆಯ ಲೇಖ. (ಕನ್ನಡ ಕವಿ ಕಾವ್ಯ ಮಾಲೆ. ಐ.ಬಿ.ಎಚ್. ಪ್ರಕಟನೆ.)

# ೨ ಮುದ್ದಣ ಕಂಡ ಶಿವ

ಮುದ್ದಣನ ಯಕ್ಷಗಾನ ಕೃತಿಗಳಾದ ರತ್ನಾವತೀ ಕಲ್ಯಾಣ ಮತ್ತು ಕುಮಾರ ವಿಜಯಗಳಲ್ಲಿ ಶಿವನು ಕಥಾನಾಯಕನಲ್ಲ. ಅದ್ಭುತ ರಾಮಾಯಣ, ಶ್ರೀ ರಾಮ ಪಟ್ಟಾಭಿಷೇಕ ಹಾಗೂ ರಾಮಾಶ್ವಮೇಧಗಳಲ್ಲಿ ರಾಮನೇ ಮುಖ್ಯನಲ್ಲದೆ ಶಿವನಲ್ಲ. ಆದರೂ ಇವೈದೂ ಕೃತಿಗಳಲ್ಲಿ ಶಿವನು ಪ್ರಾಮುಖ್ಯವಾಗಿ ಕಾಣಿಸಿಕೊಳ್ಳುತ್ತಾನೆ! ಮುದ್ದಣನು ಸೃಷ್ಟಿಸಿದ ಯಾವುದೇ ನರ-ದೇವತಾ ಪಾತ್ರಗಳಿಗಿಂತ ಶಿವನು ಉನ್ನತ ಸ್ಥಾನದಲ್ಲಿದ್ದಾನೆ-ವೈಕುಂಠದ ಶ್ರೀ ಹರಿ ಹಾಗೂ ಅಯೋಧ್ಯೆಯ ರಾಮಚಂದ್ರನೂ ಇದಕ್ಕೆ ಸರಿಸಾಟಿಯಲ್ಲ.

ಅದು ಹೇಗೆ ಸಾಧ್ಯ? ಮುದ್ದಣನು ಹರಿ-ಹರರಲ್ಲಿ ಭೇದ ಮಾಡದ ಅದ್ವೈತಿ. 'ಶಿವನೊಳಂ ತನ್ನೊಳಂ ಭೇದಮೇಂ ತಿಲಮಾತ್ರವಿಲ್ಲ' (ರಾಮಪ.) ಎಂದು ಸ್ವತಃ ಶ್ರೀರಾಮನ ಬಾಯಿಯಿಂದ ಹೇಳಿಸಿದ್ದಾನೆ - ಮುದ್ದಣ. ಮತ್ತಲ್ಲದೆ ರಾಮಚಂದ್ರನು ಶತ್ರುಘ್ನನಿಗೆ 'ಹರಿಹರರೊಳ್ ಭೇದಮನೆಣಿಸದವರಂ ಕಂಡರೆ ನೀನೂ ಅವರಲ್ಲಿ ಭೇದಮನೆಣಿಸಬೇಡ' ಎಂದೂ ಉಪದೇಶಿಸಿದ್ದಾನೆ. ಹೀಗಿರುತ್ತ, ಮುದ್ದಣನು ಹರನಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಸಲ್ಲಿಸಿರುವನೆಂಬ ಮಾತು ಮುದ್ದಣಾಭ್ಯಾಸಿಗಳಿಗೆ ಹಿಡಿಸದು. ನಾವಾದರೂ ಮೊದಲು ಹಾಗೇ ತಿಳಿದಿದ್ದೆವು. ಈಗ ಮಾತ್ರ ಮುದ್ದಣನು ಶಿವ ಪಕ್ಷಪಾತಿ - ಎಂಬ ನಿಶ್ಚಿತ ನಿಲುಮೆಗೆ ಬಂದಿದ್ದೇವೆ. ಇದನ್ನು ನಮಗೆ ಮನಗಾಣಿಸಿದ್ದು - ಗಣಕ ಯಂತ್ರ!

ಹೌದು. ಮುದ್ದಣನ ಶಬ್ದಸೃಷ್ಟಿಯ ವ್ಯಾಪ್ತಿ ವೈವಿಧ್ಯಗಳನ್ನು ಗಣಕ ಯಂತ್ರದ ನೆರವಿನಿಂದ ಅಭ್ಯಸಿಸುವ ಯೋಜನೆಯೊಂದನ್ನು ಹಮ್ಮಿಕೊಂಡಿದ್ದು, ಯೋಜನೆಯ ಮೊದಲ ಹಂತವೆಂದು, ಮುದ್ದಣನ ಕೃತಿ ಪಂಚಕದಲ್ಲಿ ಬರುವ ಶಿವನ ಹೆಸರಿನ ಎಲ್ಲ ಶಬ್ದಗಳನ್ನು ಗಣಕಯಂತ್ರಕ್ಕೆ ಪೂರೈಸಿದೆವು. ಅದರ ವಿಶ್ಲೇಷಣೆಯಿಂದ ಶಿವನೇ ಮುದ್ದಣನ ಆರಾಧ್ಯದೈವತವೆಂಬುದು ಸ್ಪಷ್ಟವಾಗಿ ಗೋಚರವಾಯಿತು.

ಮೇಲಣ ಅಧ್ಯಯನಕ್ಕಾಗಿ ನಾವು ಇನ್ನು ಕೆಲವು ದೇವತಾ ಶಬ್ದಗಳನ್ನು ಕಂಪ್ಯೂಟರಿಗೆ ಪೂರೈಸಿದ್ದೆವು. ಆ ಯಂತ್ರವು ವಿಶ್ಲೇಷಿಸಿದ ಪ್ರಕಾರ ಅವನ ವಿವಿಧ ಕೃತಿಗಳಲ್ಲಿ ಎಷ್ಟು ಶಬ್ದಗಳಿವೆಯೆಂಬುದನ್ನು ಈ ಮುಂದಿನ ಪಟ್ಟಿಯಿಂದ ಕಾಣಬಹುದು.

| ದೇವತೆ | ರತ್ನಾ | ಕು. ವಿ. | ರಾಮಪ. | ಅ.ರಾ. | ರಾಮಾಶ್ವ | ಒಟ್ಟು |
|---|---|---|---|---|---|---|
| ಬ್ರಹ್ಮ | ೬ | ೪೧ | ೧೪ | ೨೬ | ೧೬ | ೧೦೩ |
| ಇಂದ್ರ | - | ೧೧೯ | ೧೨ | ೧೦ | ೮ | ೧೪೯ |
| ಹರಿ | ೨೭ | ೪೬ | ೬ | ೫೪ | ೨೬ | ೧೫೯ |
| ರಾಮಚಂದ್ರ | ೨ | - | ೧೦೬ | ೧೯ | ೬೪ | ೧೯೧ |
| ಹರ | ೧೨ | ೨೧೨ | ೨೫ | ೫ | ೫೧ | ೩೦೫ |

ಇಂದ್ರ ಬ್ರಹ್ಮರು ಶಿವನ ಹಿರಿಮೆಗೆ ಸಾಟಿಯಾಗಲಾರರೆಂಬುದು ಸರಿಯೇ. ಹರಿಯನ್ನೂ ಬೇಕಾದರೆ ಕ್ಷಣ ಹೊತ್ತು ಬದಿಗಿರಿಸೋಣ. ಆದರೆ ಒಂದಲ್ಲ, ಮೂರು ಕಾವ್ಯಗಳಲ್ಲಿ ಕಥಾನಾಯಕನಾಗಿ ಬಂದಿದ್ದ ಶ್ರೀರಾಮನನ್ನೂ ಹಿಂದೆ ಹಾಕಿ ಶಿವನು (ಶಬ್ದ ರೂಪದಲ್ಲಿ) ಇಷ್ಟರ ಮಟ್ಟಿಗೆ ಕಾಣಿಸಿಕೊಳ್ಳುವುದಕ್ಕೆ ಏನೆಂದು ಅರ್ಥ ಹಚ್ಚುವಿರಿ?

ಒಟ್ಟಿನ ಪದ ಪ್ರಯೋಗದ ಸಂಖ್ಯೆ ೩೦೫ ಎಂದೆವು. (ಅವುಗಳಲ್ಲಿ ಶಿವ, ಹರ, ಈಶ್ವರ ಎಂಬ ಸಾಮಾನ್ಯ ಬಳಕೆಯಲ್ಲಿ ಪದಗಳನ್ನು ನಾವು ಗಣನೆಗೆ ತೆಗೆದುಕೊಂಡಿಲ್ಲ.) ಈ ೩೦೫ರಲ್ಲಿ ಕೆಲವು ಪುನರುಕ್ತವಾಗುವುದು ಸಹಜವೇ. (ಉದಾ.ಗೆ 'ಇಂದುಶೇಖರ'ವು ನಾಲ್ಕು ಸಲ ಬಂದಿದೆ). ಈ ಪುನರುಕ್ತಿಗಳನ್ನು ಬಿಟ್ಟರೆ, ಮುದ್ದಣನು ಬಳಸಿದ್ದ ಶಿವಾರ್ಥದ ವಿಶಿಷ್ಟ ಶಬ್ದಗಳು ೧೮೮ ಇವೆ. ಇದು ದೊಡ್ಡ ಸಂಖ್ಯೆಯೇ. ಸಮಾನಾರ್ಥವನ್ನು ಕೊಡುವ ಅಮರಕೋಶದಲ್ಲಿ ಶಿವಪರವಾದ ನಾಮಗಳು ೫೩ ಇವೆ. ಅವುಗಳಲ್ಲಿ ಮುದ್ದಣನು ಬಳಸಿಕೊಂಡದ್ದು ೨೬ ಮಾತ್ರ. ಇನ್ನುಳಿದವುಗಳು ಹಳೆಯ ಕಾವ್ಯಗಳಿಂದ ಸ್ವೀಕರಿಸಿದವುಗಳು. ಅದಕ್ಕಿಂತ ಹೆಚ್ಚಾಗಿ, ಮುದ್ದಣನೇ ಸೃಷ್ಟಿಸಿ ಕನ್ನಡ ವಾಗ್ದೇವಿಯ ಭಂಡಾರಕ್ಕೆ ಕಾಣಿಕೆಯಾಗಿ ಅರ್ಪಿಸಿದ ಶಬ್ದಗಳು ಸಾಕಷ್ಟಿವೆ. ಈ ಶಬ್ದ ಸಮುದಾಯವನ್ನು ಇನ್ನಷ್ಟು ವಿಶ್ಲೇಷಿಸಿದಾಗ ತೋರಿ ಬಂದ ಶಿವನ ಗುಣ ವಿಶೇಷಗಳ ಹರಹು ನಮ್ಮನ್ನು ಬೆರಗುಗೊಳಿಸಿತು. ಸ್ಥಾಲೀಪುಲಾಕನ್ಯಾಯದಿಂದ ಕೆಲವನ್ನು ಮಾತ್ರ ಇಲ್ಲಿ ನಿರ್ದೇಶಿಸುತ್ತೇವೆ.

ಶಿವನು ತನ್ನ ಹಣೆಗಣ್ಣಿನಿಂದ ಕಾಮನನ್ನು ಸುಟ್ಟು ಹಾಕಿದ ಅಂಶವು ಮುದ್ದಣನನ್ನು ವಿಶೇಷವಾಗಿ ಸೆರೆ ಹಿಡಿದಿದೆ. ಆತ ಹಣೆಗಣ್ಣನೆಂಬುದನ್ನು ಅನಲೇಕ್ಷಣ, ಕೃಶಾನುನೇತ್ರ, ತ್ರಿಲೋಚನ, ನಿಟಿಲನಯನ, ನೀಲಲೋಹಿತ, ಫಾಲಾಕ್ಷ, ಭಾಳಾಕ್ಷ, ರಂಗತ್ರಿಣೇತ್ರ ಮುಂತಾದ ಶಬ್ದಗಳು ಸಾರುತ್ತವೆ. ಜೊತೆಗೆ ಉರಿಗಣ್ಣ, ನೊಸಲ (ಕಣ್ಣ), ಪಣೆಗಣ್ಣ - ಎಂಬ ಅಚ್ಚಕನ್ನಡ ಶಬ್ದಗಳೂ ಇವೆ. ಇನ್ನು ಅವನು ಕಾಮಧ್ವಂಸಿಯೆಂಬುದನ್ನು ಅಂಗಜಾರಿ, ಕಂತುವೈರಿ, ಕಾಮಾರಾತಿ, ಜಿತಮದನ, ಚಿತ್ತಜಾರಿ, ಸ್ಮರಹರ, ಹರಿಸುತಾಹಿತವೆಂಬೀ ಶಬ್ದಗಳ ಬಳಕೆಯಲ್ಲಿ ಕಾಣುತ್ತೇವೆ. ದಪ್ಪಕವಗೆಯ (= ಕಂದರ್ಪಾರಿ) ಎಂಬುದು ಮುದ್ದಣನ ಖಾಸಾ ಸೃಷ್ಟಿ.

ಶಿವನಿಗೆ ಮುಖಗಳು ಒಂದೊ? ಐದೊ? ಪುರಾಣಗಳಲ್ಲಿಯೇ ಈ ಭೇದವಿದೆ. ಮುದ್ದಣನು ಶಿವನನ್ನು ಐಗಳ, ಐಮೊಗ, ಪಂಚವದನನೆಂದು ಕರೆದುದರ ಜೊತೆಗೆ ಅಷ್ಟಮೂರ್ತಿ, ಎಣ್ಮೆಯ್ಯವ ಎಂದೂ ಹೆಸರಿಸಿದ್ದಾನೆ. ಶಿವನ ಬಿಳಿಯ ಕುತ್ತಿಗೆಯು ಕಾಲಕೂಟ

ವಿಷದಿಂದ ಕಪ್ಪು-ನೀಲಿ ಬಣ್ಣ ತಾಳಿದುದನ್ನು ಕಂದುಗೊರಲ, ನೀಲಕಂಧರ, ನಂಜುಂಡ, ಶಿತಿಕಂಠ - ಎಂಬೀ ಪದಗಳು ವರ್ಣಿಸುತ್ತವೆ.

ಶಿವನ ಶಿರೋಭೂಷಣಗಳಾದ ಅರ್ಧಚಂದ್ರ ಹಾಗೂ ಗಂಗಾ ಸಲಿಲ - ಇವು ಅರೆದಿಂಗಳ, ಗಂಗೋತ್ತಮಾಂಗ, ತೊರೆದಲೆಯ, ವಿಧುಲಾಂಛನ ಎಂಬ ಪದಗಳ ಮೂಲಕ ನಮ್ಮ ಮನದಲ್ಲಿ ಚೆನ್ನಾಗಿ ನೆಲೆಗೊಳ್ಳುತ್ತವೆ. ಇವುಗಳಲ್ಲಿ ತೊರೆದಲೆಯ ಎಂಬುದು ಮುದ್ದಣನ ಸ್ವಸೃಷ್ಟಿಯೆಂದು ತೋರುತ್ತದೆ. ಶಿವನು ವ್ಯೋಮಕೇಶನೆಂಬ ಕಲ್ಪನೆಯನ್ನು ಮುದ್ದಣನು ವಿಶೇಷವಾಗಿ ಮೆಚ್ಚಿಕೊಂಡಿರಬೇಕೆಂಬುದು, ಬಾಂಗುರುಳ, ಬಾಂಗೂದಲ, ಬಾಂಬೊಚ್ಚದಲೆಯ, ಬಾನ್ನವಿರ ಎಂಬೀ ಸ್ವಸೃಷ್ಟಿಯ ಇಲ್ಲವೆ ಈ ಹಿಂದೆ ಕ್ವಚಿತ್ತಾಗಿ ಬಂದ ಶಬ್ದಗಳ ಬಳಕೆಯಲ್ಲಿ ವ್ಯಕ್ತವಾಗಿದೆ.

ಶಿವನು ಸರ್ಪಭೂಷಣನೆಂಬುದು ಬಹು ಜನಪ್ರೀತವಾದುದು. ಮುದ್ದಣನಿಗೂ ಅಷ್ಟೇ. ಅಹೀನಾಲಂಕೃತಾಂಗ, ದ್ವಿಜರಾಜಧರ, ಫಣಿಕುಂಡಲ, ಭುಜಗತತಿಭೂಷ ಎಂದೆಲ್ಲ ಶಿವನನ್ನು ವರ್ಣಿಸಿದ್ದಾನೆ. ಆದರೆ ಶಿವನು 'ಎಲರುಣಿವೆದೆಯ' (ಸರ್ಪವು ಹೆಡೆಯಾಗಿ ಉಳ್ಳವ) ಎಂಬ ಅಂಶವು ಅಪೂರ್ವವಾದುದು. ಇತರ ವೇಷಭೂಷದ ಬಗ್ಗೆ ಹೇಳುವುದಾದರೆ, ಶಿವನು ಸಿತಾಂಗ, ಅರ್ಥಾತ್ 'ಬೂದಿಬಡಕ' ಎಂದಿದ್ದಾನೆ. ಅವನ ವ್ಯಾಘ್ರಾಂಬರವನ್ನು ಮುದ್ದಣನು 'ಬಗ್ಗದೊವಲುಡೆಯ' ಎಂದು ಕನ್ನಡಿಸಿದ್ದಾನೆ. ತೊವಲುಡೆಯ, ತೊವಲ್ವೊದೆಯ ಎಂದೂ ಕರೆದಿದ್ದಾನೆ.

ಶಿವನನ್ನು ಅರೆಮೆಯ್ಯ, ಅರೆವೆಣ್ಮಯ್ಯ ಎಂದು ಹೇಳುವಾಗ, ಆತ ಗಿರಿಜಾಪತಿಯೆಂಬುದನ್ನು ಮುದ್ದಣನು ಗಮನಿಸಿರಲೇಬೇಕು. ಆ ಭಾವವನ್ನು ಹೊಮ್ಮಿಸುವ ಅನೇಕ ಶಬ್ದಗಳನ್ನು ಮುದ್ದಣನು ಬಳಸಿದ್ದಾನೆ. ಶಿವನು `ಅಚಲಾತ್ಮಜಾನನ ಕೈರವಾಬ್ಜ' ಎಂಬುದರ ಹಿಂದಿನ ಕಲ್ಪನೆ ರಮ್ಯವಾದುದು.

ಶಿವನು ಭವನೂ ಹೌದು, ಅಭವನೂ ಹೌದು. ಈಶನೂ ಅಹುದು, ಈಶನೀಶನೂ ಅಹುದು; ಅದರಂತೆ ಕಾಲಕಂಧರ ಕಾಲನು. ಶಿವನನ್ನು ಸಾಂತ (ಶಾಂತ) ಮತ್ತು ಸಬ್ಬ (ಶರ್ವ) ಎಂದು ವಿಶೇಷಿಸಿದುದು ಒಂದು ವಿಶೇಷ. ಇವು ಮುದ್ದಣನ ತದ್ಭವಪ್ರಿಯತೆಯ ಜೊತೆಗೆ ಶಿವನ ಸ್ವರೂಪ ದರ್ಶನಕ್ಕೆ ಹೊಸ ಆಯಾಮಗಳನ್ನು ಜೋಡಿಸಿವೆ.

ಮೇಲಿನ ವಿವೇಚನೆಯುಷ್ಟರಿಂದಲೇ ಮುದ್ದಣನು ಶಿವನನ್ನು ಅದೆಷ್ಟು ವೈವಿಧ್ಯಮಯವಾಗಿ ರೂಪಿಸಿರುವನೆಂಬುದು ಕಂಡುಬಾರದಿರದು. ಗಮನಿಸಬೇಕಾದ ಇನ್ನೊಂದು ಮಾತೆಂದರೆ, ಶಿವನ ವ್ಯಕ್ತಿತ್ವದ ಅನೇಕ ಅಂಶಗಳು ನಮಗೆ ಗೊತ್ತಿದ್ದುವೇ ಆಗಿದ್ದರೂ, ಅವನ್ನು ಕಾವ್ಯದಲ್ಲಿ ಮೂಡಿಸುವಾಗ ಮುದ್ದಣನು ಹೊಸ ಹೊಸ ಶಬ್ದಗಳನ್ನು ಸೃಷ್ಟಿ ಮಾಡುತ್ತಿದ್ದುದು. ಜೊತೆಗೆ, ಒಮ್ಮೆ ಬಳಸಿದ ಶಬ್ದಗಳನ್ನು ಮತ್ತೆ ಮತ್ತೆ ತರಲು ಅವನ ಮನಸ್ಸು ಒಡಂಬಡುತ್ತಿದ್ದಿಲ್ಲ. ಶಿವವಾಚಿ ಶಬ್ದಗಳ ೧೮೮ : ೩೦೫ ಈ ಒಟ್ಟಿನ ಪ್ರಮಾಣವನ್ನು (ratio) ಗಮನಿಸಿದಾಗ ಇದು ವೇದ್ಯವಾಗುತ್ತದೆ.

ಇನ್ನೀಗ ಮುದ್ದಣನು ಕಥಾ ಸಂದರ್ಭಗಳಲ್ಲಿ, ಮತ್ತು ಇತರ ವರ್ಣನೆಗಳಲ್ಲಿ ಎಷ್ಟರಮಟ್ಟಿಗೆ ಶಿವಪಾರಮ್ಯವನ್ನು ತೋರಿದ್ದಾನೆಂಬುದನ್ನು ನೋಡೋಣ. ಮುದ್ದಣನು ಹಳೆಯ ಕವಿಗಳಂತೆ ದೇವತಾಸ್ತುತಿಯಿಂದ ಕಾವ್ಯವನ್ನು ಆರಂಭಿಸುವ ಪ್ರವೃತ್ತಿಯವನಲ್ಲವಾದರೂ, ಮೊದಲಿನ ಮೂರು ಕೃತಿಗಳಲ್ಲಿ ಆ ಕ್ರಮವೇ ಇದೆ, ಹಾಗೆ ಮಾಡುವಾಗ ಅವನು ಶಿವನಿಗೇ ಆದ್ಯತೆಯನ್ನು ನೀಡಿದ್ದಾನೆ. ರತ್ನಾವತೀ ಕಲ್ಯಾಣವನ್ನು 'ಹರಗಿರಿಜೆಯರಿಗೆ ಎರಗಿ' ಆರಂಭಿಸುತ್ತಾನೆ. ಹಾಗೂ 'ಪುರಹರನ ಕೃಪೆಯಿಂದ ಮುಂಗಥೆಯನ್ನು ವರ್ಣಿಪೆ'ನೆಂದು ಅದೇ ಪದ್ಯದಲ್ಲಿ ಹೇಳಿದ್ದಾನೆ. ಕುಮಾರವಿಜಯದಲ್ಲಿ ಗಣೇಶಸ್ತುತಿ ಮೊದಲಿಗೆ ಇದೆಯಾದರೂ, ಅದರ ನಂತರದ್ದು ಹರಸ್ತೋತ್ರವೇ. ಇದರಲ್ಲಿ ಕಥೆ ಹೇಳುವ ಸೂತ ಮತ್ತು ಅದನ್ನು ಆಲಿಸುವ ಮುನಿಗಳು ಪುರಹರನನ್ನು 'ನಿಶ್ಚಲ ಚಿತ್ತದಿಂದ ನೆನೆದು' ಮುಂದುವರಿಯುತ್ತಾರೆ. ಶ್ರೀರಾಮಪಟ್ಟಾಭಿಷೇಕದ ನಾಂದೀಪದ್ಯ ಶಿವ ರಾಮರಿಬ್ಬರದೂ ಸ್ತುತಿಯಾಗಿದೆ. ಶ್ಲೇಷೆಯಿಂದಾಗಿ, ಕುಮಾರವಿಜಯದ ಕೊನೆಯಲ್ಲಿ ಮುದ್ದಣನು 'ಹರನು ಪ್ರೇರೇಪಿಸಿದ ತೆರನಿದೆ ಬರೆದೆ' ಎಂದು ಸ್ಪಷ್ಟಗೊಳಿಸಿ, ಶಿವನ ಹೆಸರಿನಲ್ಲೇ ಮಂಗಳ ಗೀತ ಹಾಡಿದ್ದಾನೆ.

ಮುದ್ದಣನು ತನ್ನ ಕೃತಿ ಪಂಚಕದಲ್ಲಿ ಚಿತ್ರಿಸಿದ ಪಾತ್ರಗಳಲ್ಲಿ ಮುಕ್ಕಾಲು ಪಾಲಿನ ಜನ ಶಿವಭಕ್ತರು. ಅವರಲ್ಲಿ ಎದ್ದು ಕಾಣುವವರೆಂದರೆ ನಾರದ ಹಾಗೂ ಇಂದ್ರ -ಇಂದ್ರಾಣಿಯರು. ವೈಕುಂಠ ಲೋಕದಲ್ಲಿದ್ದುಕೊಂಡು ಸದಾ ವಿಷ್ಣುಧ್ಯಾನದಲ್ಲಿ ನಿರತನಾಗಿರಬೇಕಾದ ನಾರದನು ಶಿವದೀಕ್ಷೆಯನ್ನು ಹೊಂದಿದನೆ? ಎಂದೆನಿಸುವಷ್ಟು ಶಿವ ಧ್ಯಾನದಲ್ಲಿ ತೊಡಗಿದ್ದಾನೆ! ಅವನು ನಮಗೆ ಮೊದಲು ಕಾಣಿಸಿಕೊಳ್ಳುವುದು ದೃಢವರ್ಮನ ಆಸ್ಥಾನದಲ್ಲಿ. ಆಗಿನ 'ಕಂತುಪಿತನಂ ಮನದಿ ಚಿಂತಿಸುತ' ಎಂಬೊಂದು ಕುಂಟುಪಂಕ್ತಿಯನ್ನು ಬಿಟ್ಟರೆ, ಮತ್ತಿನದೆಲ್ಲ ಶಿವಸ್ತುತಿಯೇ. ದೃಢವರ್ಮನಾದರೂ ಮೂಲತಃ ಶ್ರೀಕಾಂತನ ಕಟಾಕ್ಷವನ್ನು ಹೊಂದಿದವ. ಆದರೆ ಅವನಿಗೆ ಕರುಣದಿಂದ ಮಕ್ಕಳನ್ನು ದಯಪಾಲಿಸುವವ ಭಾವಜಾರಿಯು. ದೃಢವರ್ಮನ ಹೆಂಡತಿ ಸೌರಂಭೆಯಾದರೂ ಪುರಹರನನ್ನು ನೆನೆವುತ್ತ ಮಂತ್ರಪೂತ ಫಲವನ್ನು ಭಕ್ಷಿಸುತ್ತಾಳೆ.

ನಾರದನ ಎರಡನೇ ಭೇಟಿ ನಮಗೆ ಶೂರ ಪದ್ಮಾಸುರನ ಆಸ್ಥಾನದಲ್ಲಿ. ಅವನು 'ಕಾಲಕಂಧರ ಕಾಲಕಾಲ ನಿಶಾಪಟಿ ಫಾಲನಯನ ಶಂಕರ' ಎಂದು ಹಾಡಿಕೊಳ್ಳುತ್ತಲೇ ಒಳಗೆ ಪ್ರವೇಶಿಸುವನು. ಅಲ್ಲಿ ಕಲಹ ಬೀಜವನ್ನು ಬಿತ್ತಿ ಇಂದ್ರನ ಆಸ್ಥಾನಕ್ಕೆ ಹೋದಾಗ ಇಂದ್ರನು ಬರಮಾಡಿಕೊಳ್ಳುವುದು, 'ಈಶ ಗಿರೀಶ ಗಣೇಶ ಮಹೇಶ ಉಮೇಶನ ಕರುಣದ ದಾಸ'ನನ್ನು. ಮತ್ತೊಂದು ಬಾರಿ ಇಂದ್ರನಲ್ಲಿಗೆ ಬಂದಾಗಲೂ ಅವನ ತಾಳ-ತಂಬೂರಿಗಳು ಶಿವಸ್ತೋತ್ರವನ್ನೇ ನುಡಿಸುತ್ತಿದ್ದವು! ಯಕ್ಷಗಾನಗಳಲ್ಲಿ ಬರುವ ನಾರದ ಪಾತ್ರವು ಶಿವನನ್ನು ಹಾಡಿ ಹೊಗಳುವುದು ಅಪೂರ್ವವಲ್ಲವಾದರೂ ಮುದ್ದಣ ಸೃಷ್ಟಿಸಿದ ನಾರದ ಮಾತ್ರ ೯೯% ಶಿವಭಕ್ತನೇ ಇದ್ದಾನೆ.*

* ಬೇರೆ ಕೆಲವು ಯಕ್ಷಗಾನ ಪ್ರಸಂಗಗಳಲ್ಲಿಯೂ ನಾರದ ಶಿವಭಕ್ತನಾದುದಿದೆ.

ರಾಕ್ಷಸನಾದ ಪದ್ಮಾಸುರನು ಇಂದ್ರಾಣಿಯನ್ನು ಅಪಹರಿಸಿಕೊಂಡು ಹೋಗುವದರ ಬರಿ ವಾರ್ತೆಯಿಂದ ಕಂಗೆಟ್ಟ ಇಂದ್ರನಿಗೂ ಸಾಮಾನ್ಯ ಮನುಷ್ಯನಿಗೂ ಅಂತರವೇ ಇಲ್ಲ. ಇದರಿಂದ ಪಾರಾಗಲು ಗಂಡ ಹೆಂಡರಿಬ್ಬರೂ ಮೊದಲಿನಿಂದ ಕೊನೆಯವರೆಗೆ ಶಿವನನ್ನೇ ನಂಬಿದ್ದಾರೆ. ಪದ್ಮಾಸುರನ ಇಂಗಿತವು ತಿಳಿದಾಗ 'ಏತಕೆ ಮುನಿದನೊ ಶಂಕರನು?' ಎಂದು ಇಂದ್ರನ ಯೋಚನೆ. ಇಂದ್ರಾಣಿ? ಡಿಟೊ! 'ಕಂಗೊರಳ ದಯವನು ತೊರೆದನೆ?' ಎನ್ನುತ್ತಾಳೆ. ಆ ಮುಂದೆ ಇಂದ್ರನು ಸತಿಯೊಡನೆ 'ವಿಪಿನದೊಳ್ ಈಶನ ಪದಯುಗ ಜಪಿಸುತ್ತ' ಇದ್ದನು. ಅತ್ತ, ಅಮರಾವತಿಯಲ್ಲಿ ಮಗ ಜಯಂತನು ಸೆರೆಹಿಡಿಯಲ್ಪಟ್ಟ ವಾರ್ತೆ ತಿಳಿದಾಗ 'ಚಂದ್ರಶೇಖರನ ಹೊರತು ಎಮ್ಮ ಸಾಕುವರಿಹರೆ' ಎಂದು ಇಂದ್ರಾಣಿ ದುಃಖಿಸುತ್ತಾಳೆ. ಆಗ 'ಕ್ಲೇಶ ಲೇಶ ಬೇಡ. ಮಧುರಭಾಷೆ, ಹರನ ಭಜಿಸಿರು' ಎಂದು ಅವಳ ಪತಿರಾಯನು ಸಮಾಧಾನ ಹೇಳುವನು. ಪದ್ಮಾಸುರನ ತಂಗಿ ಅಜಮುಖಿಯು ತನ್ನ ಮೇಲೆ ಕೈಮಾಡಿದಾಗಲಂತೂ ಇಂದ್ರಾಣಿಯ ಶಿವಭಕ್ತಿ ಉಕ್ಕೇರಿದೆ. 'ನಂಬಿದ ಭಕ್ತರ ಸಲಹುವೆನೆಂಬುವ ಬಿರುದೆಲ್ಲಿಹುದೆಲೆ ಶಂಭು, ಸದಾಶಿವ ಮೃಡ ಎನಗಿಂಬಿಲ್ಲವೆ ಸ್ವಾಮಿ' ಎಂದು ಹಲುಬುತ್ತಾಳೆ. ಜೊತೆಗೆ ಗಿರಿಜೆಯನ್ನೂ ಪ್ರಾರ್ಥಿಸುತ್ತಾಳೆ.

ದೇವೇಂದ್ರನ ಮನಃಸ್ಥಿತಿಯೇ ಹಾಗಿದ್ದಾಗ ಉಳಿದ ದೇವತೆಗಳ ಪಾಡೇನು? ಮುದ್ದಣನು ಅವರ ಮುಖದಿಂದ ಹಲವಾರು ಸ್ತೋತ್ರಗಳನ್ನು ಹೊರಡಿಸಿ ಆ ಮೂಲಕ ತನ್ನ ಶಿವಭಕ್ತಿಯನ್ನು ಪ್ರದರ್ಶಿಸಿದ್ದಾನೆ.

ಮುದ್ದಣನು ಕೈಕೇಯಿಯನ್ನೂ ಶಿವಭಕ್ತೆಯನ್ನಾಗಿ ಮಾಡಿದ್ದಾನೆ. ಸಂದರ್ಭ: ಶ್ರೀ ರಾಮನು ಅಯೋಧ್ಯೆಗೆ ಮರಳಿದ ಮೇಲೆ ತನ್ನ ತಾಯಂದಿರನ್ನು ಕಾಣಹೋಗಿದ್ದುದು. ಕೈಕೇಯಿಯ ಎದುರಿಗೆ ನಿಂತು ರಾಮನು ಮಾತನಾಡಿಸಿದರೂ ಆಕೆ ಮಾತಾಡಲೊಲ್ಲಳು. ಅದರ ಕಾರಣವನ್ನು ಮುದ್ದಣನು ಊಹಿಸಿದ್ದು ಹೀಗೆ: "ಏಕಚಿತ್ತದಿಂ ಮೌನಗೊಂಡು ಅಭವನಂ ಧ್ಯಾನಿಪಳೆ?" ಇನ್ನೊಬ್ಬ ಶಿವಭಕ್ತನೆಂದರೆ, 'ಕಾಮಹರನಡಿಯ ನೆನೆವ ಯೋಗಿಯಹೆ' ಎಂದು ಹೇಳಿಕೊಳ್ಳುವ ದೂರ್ವಾಸ. ರಾಜಕುವರಿ ರತ್ನಾವತಿಯ ಶಿವ ನಿಷ್ಠೆಯು 'ಲೋಕೇಶನಪ್ಪಣೆಯ ಲೋಕದೊಳು ಮೀರ್ವರಾರು' ಎಂದು ತಂದೆಗೆ ಉಪದೇಶಿಸುವಷ್ಟು ಗಾಢವಾದುದು. ಅದನ್ನು ಕೇಳಿ ಅವನಿಗೆ ತುಂಬ ಸಂತೋಷವಾಯಿತಂತೆ. ಅವಳ ಪ್ರಿಯಕರನಾದ ವತ್ಸಾಖ್ಯ, ಅದರಂತೆ ಭರತ ಇವರು ಕೂಡ ಶಿವನನ್ನೇ ನೆನೆಯುತ್ತಾರೆ. ಮುದ್ದಣನ ಪಾತ್ರಗಳಿಗೆ ಆಣೆ ಹಾಕುವ ಪ್ರಸಂಗ ಬಂದರೆ, ಜಿತಕಾಲನಾಣೆ, ವಿಧುಧರನಾಣೆ, ಧೂರ್ಜಟಿಯಾಣೆ - ಎಂದೇ ಹೇಳುತ್ತಾರೆ. ಇವರ ಪಾಲಿಗೆ 'ಸಂಕಟ ಬಂದಾಗ ಗಿರಿಜಾರಮಣ'ನಲ್ಲದೆ, ವೆಂಕಟರಮಣನಲ್ಲ!

ರಾಕ್ಷಸರಿಗೂ ಶಿವನೇ ದೇವರು - ಅವರಲ್ಲಿ ಕೆಲವರನ್ನು ಅವನು ಸಂಹರಿಸಿದ್ದರೂ ಕೂಡ! ದೇವತೆಗಳಂತೂ, ಶಿವನಿಂದಲೇ ಅವರು ಅಷ್ಟು ಸೊಕ್ಕಿಗೇರಿದುದೆಂದು ನೆರೆ ನಂಬಿದ್ದಾರೆ. ಭಾಳನಯನನು ಅವರ ಆಳಾಗಿಹನು ಎಂದು ನಿರ್ಭಿಡೆಯಿಂದ ಹೇಳುತ್ತಾರೆ. ಅದ್ಭುತ ರಾಮಾಯಣದಲ್ಲಿ ಶತಕಂಠನಿಗೆ ಮಹಾದೇವನ ಕೃಪಾಪ್ರಸಾದವಿದ್ದಿತೆಂದೇ, ಅವನು ರಾಮನನ್ನು

ಹಣ್ಣು ಮಾಡಿದನು. ಕುಮಾರವಿಜಯದಲ್ಲಿ ಬರುವ ಭಾನುಕೋಪನು ಯುದ್ಧಕ್ಕೆ ಹೊರಡುವ ಮುನ್ನ ತಾಯಿಯ ಬಳಿಗೆ ಹೋದಾಗ, ಆಕೆ 'ಪುರಹರನ ಪಾದವನ್ನು ನೆರೆನಂಬು' ಎನ್ನುತ್ತಾಳೆ. ಅವನ ಬಂಧುವಾದ (ಪದ್ಮಾಸುರನ ಇನ್ನೊಬ್ಬ ಮಗ) ಹಿರಣ್ಯನನ್ನು ನಮಗೆ ಪರಿಚಯಿಸಿಕೊಡುವಾಗ, ಮುದ್ದಣನು 'ಶ್ರೀ ಮಹೇಶ ಪದಾಬ್ಜ ಮಧುಕರ ಪ್ರೇಮಪುತ್ರ'ನೆಂಬ ಶಿಫಾರಸನ್ನು ಅವನಿಗೆ ಕೊಟ್ಟುಬಿಟ್ಟಿದ್ದಾನೆ. ವಿಭೀಷಣನನ್ನು ನೆನಪಿಗೆ ತರುವ ಹಿರಣ್ಯನು ಷಣ್ಮುಖನೊಂದಿಗೆ ಯುದ್ಧ ಬೇಡವೆಂಬ ಸಲಹೆಯನ್ನು ಮಾಡಿದ್ದಾಗ, ತಂದೆ ಕೇಳುವುದಿಲ್ಲ. 'ಚಿಂತೆಯಿಲ್ಲ, ಯುದ್ಧದಲ್ಲಿ ಮಡಿದರೆ, ವೃಷಾರೂಢನಂಘ್ರಿಯನ್ನು ಕಾಣಬಹುದು' ಎಂಬ ಮನೋಭಾವ ಅವನದು. ಯುದ್ಧರಂಗದಲ್ಲಿ ಸ್ವತಃ ಶಿವನ ಮಗನೇ ಎದುರಿಗಿದ್ದರೇನಾಯಿತು. 'ಪಿನಾಕಿ ಭಕುತರು ನಾವು ರಣದೊಳಪಜಯ ಸೋಕದು' ಎಂಬ ದೃಢಭಕ್ತಿ ಅವನದು.

ಇನ್ನೀಗ ಶ್ರೀಹರಿ, ಅವನ ಸುದರ್ಶನ ಚಕ್ರವು ರುದ್ರಾನುಗ್ರಹದಿಂದ ದೊರೆತುದೆಂದು ಮುದ್ದಣನು ಹೇಳುತ್ತಾನೆ, ಅದ್ಭುತ ರಾಮಾಯಣದಲ್ಲಿ. ಅದರಲ್ಲಿಯೇ ಒಂದೆಡೆ, ರಾಮನನ್ನು 'ನೀನೆ ಮಾದೇವಂ, ನೀನೆ ಮಾಧವಂ' ಎಂದು ಸೊಗಸಾಗಿ ವರ್ಣಿಸಿದ್ದಿದೆ. ಇಲ್ಲಿ ಹರಿಹರಾಭೇದವು ಸ್ಪಷ್ಟವಾಗಿ ಬಂದಿದೆ. ಇತ್ತ ಪದ್ಮಾಸುರ ರಕ್ಕಸನಿಂದ ಬಂದ ವಿಪತ್ತನ್ನು ಪರಿಹರಿಸಲು ಬ್ರಹ್ಮನ ಸಲಹೆಯ ಮೇರೆಗೆ ಇಂದ್ರನು ದೇವತೆಗಳೊಡನೆ ಕಾತರಭಾವದಿಂದ ವಿಷ್ಣುವಿನ ಬಳಿ ಬಂದರೆ, ಅವನಲ್ಲಿರುವ ಪರಿಹಾರ ಒಂದೇಯೆ, "ದಯಾಂಬುಧಿ ಚಂದ್ರಶೇಖರನ ಮರೆ ಸಾರು, ನಿಜ ಪತ್ನಿಯೊಡನೆ!" ಇದಕ್ಕೆ ಪ್ರತಿಯಾಗಿ ಒಂದು ಸನ್ನಿವೇಶವು ಕುಮಾರವಿಜಯದಲ್ಲಿ ಬರುತ್ತದೆ. ಗಿರಿಜೆಯು ತನ್ನ 'ಕುಮಾರ'ನನ್ನು ಯುದ್ಧಕ್ಕೆ ಕಳಿಸುವಾಗ ಉಪದೇಶಿಸುವುದು ಹೀಗೆ: "ರತಿಪತಿಪಿತನ ನೆಚ್ಚುತ ಜತನದಿ ದಿತಿಸುತರನು ಜಯಿಸುತ ಬಾ."

ಹಾಗೆಂದು ಮುದ್ದಣನ ಮಾಧವನು ನಿಷ್ಕ್ರಿಯನೇನಲ್ಲ. ತನ್ನ ಚೊಚ್ಚಿಲ ಕೃತಿಯಲ್ಲಿ ಮುದ್ದಣನು ಶ್ರೀಕೃಷ್ಣನಿಗೆ ಮಂಗಳವನ್ನು ಹಾಡಿದ್ದಾನೆ. ಅದ್ಭುತ ರಾಮಾಯಣದ ಪೂರ್ವಾರ್ಧದಲ್ಲಿರುವ ಶ್ರೀಮತೀಪರಿಣಯ ಪ್ರಸಂಗದಲ್ಲಿ ಅವನೇ ಕಥಾನಾಯಕನು. ನಾರದನಿಗೆ ಬುದ್ಧಿಗಲಿಸಿದ, ಹೃದ್ಯವಾದ ಆ ಸನ್ನಿವೇಶವನ್ನು ಮುದ್ದಣನು ಆತ್ಮೀಯತೆಯಿಂದ ಚಿತ್ರಿಸಿದ್ದಾನೆ. ತಿಳಿಯಬೇಕಾದ್ದೆಂದರೆ, ಮುದ್ದಣನು ಶ್ರೀ ಹರಿಯ ಮಟ್ಟವನ್ನೇನು ಕೆಳಗಿಳಿಸಿಲ್ಲ; ಹರನಿಗೆ ಸಮನಾಗಿಯೆ ಅವನು ಕೊಟ್ಟಿದ್ದಾನೆ. ಆದರೆ ಮಾದೇವನಿಗೆ ಕೊಟ್ಟಷ್ಟು ಮಹತ್ವ - ಪ್ರಾಶಸ್ತ್ಯಗಳನ್ನು ನಮ್ಮೀ ಮಾಧವನಿಗೆ ಕೊಟ್ಟಿಲ್ಲ!

ಶ್ರೀರಾಮಚಂದ್ರ, ಶಿವರ ಸಂಬಂಧವು ಇದಕ್ಕೂ ಹೆಚ್ಚು ಆಳವಾಗಿ ಬಂದಿದೆ; ವೈವಿಧ್ಯದಿಂದ ಕೂಡಿದೆ. ಶ್ರೀರಾಮನು 'ಇಂದುಶೇಖರನ ಕೃಪೆ ಮೊದಲು ಎಮ್ಮೊಳಾಯ್ತು' ಎಂದೂ, ಕೈಕೇಯಿಯೆದುರು 'ಮಾತೆ ನೀಂ ಪರಸಲ್, ಎಣ್ಮಯ್ಯವಂ ಕರುಣಿಸಲ್' ಎಂದೂ ಶಿವನ ಮೇಲ್ಮೆಯನ್ನು ಒಪ್ಪಿಕೊಂಡಿದ್ದಾನೆ. ಕೈಲಾಸದ ಈ 'ಬರಿಮ್ಮೆ ಗೊರವ'ನು, ರಾಮನ ಪಟ್ಟಾಭಿಷೇಕದ ಕಾಲಕ್ಕೆ ಸುವರ್ಣವನ್ನು ಉಡುಗೊರೆಯಾಗಿ ಕೊಟ್ಟನು. ಸ್ವಯಂ ಬಂದು

'ನಿನ್ನ ನರನಟನೆಯಿಂದ ಧರೆಗೆ ಮಂಗಳಮಾಯ್ತು..... ನಿನ್ನವತರಣೆ ಲೇಸು ಪೊಸತಾದುದೆಂದು' ಅಭವನನ್ನು ಅಭಿನಂದಿಸಿದನು.

ಈ ಸಂದರ್ಭದಲ್ಲಿ ಶಿವನು ರಾಮನಿಗೆ ಹಿರಿಯಣ್ಣನಂತೆ ಇದ್ದರೂ, ರಾಮಾಶ್ವಮೇಧದ ಯಾತ್ರೆಯ ಕಾಲಕ್ಕೆ ರಾಮನಿಗೆ ಹೆಚ್ಚಿನ ಪ್ರಾಶಸ್ತ್ಯ ಸಂದಿದೆ. ಇಲ್ಲಿ ಶಿವನೂ ರಾಮನಂತೆ ಭೂಮಿಗಿಳಿದು ಬಂದಿದ್ದಾನೆ. ವೀರಮಣಿ ಎಂಬ ರಾಜನ ಮಗಳು ಇಕ್ಷುಮತಿಯ ಗಂಡನಾಗಿ, ಅಳಿಯನು ತನ್ನಲ್ಲಿಯೇ ನಿಂತು ರಾಜ್ಯರಕ್ಷಣೆ ಮಾಡಬೇಕೆಂಬುದು, ಮದುವೆಯ ಕಾಲಕ್ಕೆ ಮಾವ ಹಾಕಿದ ಕರಾರು. ಸರಿ; ರಾಮನ ಯಾಗದ ಕುದುರೆ ಬಂದಿತು. ವೀರಮಣಿಯು ಅದನ್ನು ಕಟ್ಟಿಹಾಕಿದಾಗ ಶಿವನು ರಾಮನ ಸೈನ್ಯದ ವಿರುದ್ಧ ಕಾದಾಡಬೇಕಾಯಿತು. ಶಿವನು ಹನುಮಂತನೊಡನೆ ಸೆಣಸುತ್ತಿದ್ದಾಗ ಶ್ರೀರಾಮನೇ ಯುದ್ಧರಂಗಕ್ಕೆ ಬರಬೇಕೆ! ಆಗ ಯುದ್ಧವನ್ನು ನಿಲ್ಲಿಸಿ, ಶಿವನು ರಾಘವನ ದರ್ಶನಕ್ಕೆ ಧಾವಿಸಿ, ಕುದುರೆಯನ್ನು ಕಟ್ಟಿಹಾಕಿದ ತನ್ನ ತಪ್ಪನ್ನು ಮನ್ನಿಸಬೇಕೆಂದು ಕೇಳಿಕೊಳ್ಳುವನು. 'ತನಗುಂ ಶಿವಂಗಂ ಇನಿಸುಂ ಭಿನ್ನಮಿಲ್ಲೆಂ'ಬ ಮಾತನ್ನು ರಾಮನು ಬಹಿರಂಗವಾಗಿ ಸಾರುತ್ತಾನೆ. ಇದನ್ನೆಲ್ಲ ಗಮನಿಸಿದಾಗ, ಮುದ್ದಣನು ಚಿತ್ರಿಸಿದುದು ಶಿವ-ರಾಮನನ್ನು; ವಿಷ್ಣುವಿನ ದಶಾವತಾರಗಳಲ್ಲಿ ಒಬ್ಬನಾದ ರಾಮನನ್ನಲ್ಲ, ಎನಿಸುತ್ತದೆ.

ವಿವಿಧ ವರ್ಣನೆಗಳ ಸಂದರ್ಭದಲ್ಲಿ ಮುದ್ದಣನು ಶಿವನನ್ನು ನೇರವಾಗಿ ಪ್ರಶಂಸಿಸಿ, ತನ್ನ ಭಕ್ತಿಯನ್ನು ವ್ಯಕ್ತಪಡಿಸಿದ ಉದಾಹರಣೆಗಳು ಬೇಕಾದಷ್ಟಿವೆ. ಮಳಲಿ ಸುಬ್ಬರಾಯರು 'ವಿಧುಧರನ ಸದ್ಭಕ್ತ'ರಂತೆ. ಅವರ ಈ ಪರಮಶಿಷ್ಯನು ಅವರಂತೆಯೇ ಇರುವುದು ಸಹಜವೆನ್ನೋಣವೇ? ಮುದ್ದಣನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದ್ದಾನೆ. ಶಿವನ ಒಂದು ಹೆಸರನ್ನೇ ತಾನಿಟ್ಟುಕೊಂಡಿದ್ದಾನೆ!! ಲಕ್ಷ್ಮೀ ನಾರಾಯಣ? ಅಲ್ಲ, ಅದು ತೊಟ್ಟಿಲ ಹೆಸರಾಯಿತು. 'ಮುದ್ದಣ' ಎಂಬುದು ಅವನ ತಂದೆತಾಯಿಗಳು ಅಚ್ಚೆಯಿಂದ ಕರೆದ ಹೆಸರಾಯ್ತು. ಮುದ್ದಣನಿಟ್ಟುಕೊಂಡಿದ್ದ ಕಾವ್ಯನಾಮ ಕನ್ನ(ಣ್ಣ)ಡಿಗ! ರಾಮನು ತನ್ನ ಕಣ್ಣನ್ನು ಕಿತ್ತು ಶಿವನ ಪಾದಕ್ಕೆ ಒಪ್ಪಿಸಿದನೆಂಬುದು ಯಾವುದೋ ಪುರಾಣದ ಕಥೆ.

ಮುದ್ದಣನ ಪೇಟೆಂಟ್ ಆದ ಸಪ್ತಾಕ್ಷರೀ ಮಂತ್ರವನ್ನು ಶಿವನೇ ಮೊದಲು ಜಪಿಸಿದುದಂತೆ! ಅದರಿಂದ ಶಿವನಿಗೆ ಸಿದ್ಧಿಯೂ ದೊರೆಯಿತಂತೆ. ರಾಮಚಾರಿತ್ರ್ಯವೆಂಬ ಪೀಯೂಷದ ಕಣಗಳು ಸ್ವರ್ಗದಿಂದ ಭೂಮಿಗೆ ಜಗಳ್ದುವು. ಸರಿ; ಅದು ಮುದ್ದಣನಿಗೆ. `ಶಿವನ ಜಟಾಜೂಟದಿಂ ಕೆಳಗೆ ಜಗುಳ್ದ ವಿಯದ್ಗಂಗಾಸಲಿಲ'ದಂತೆ ಭಾಸವಾಯಿತು. ಸಮುದ್ರದ ವರ್ಣನೆ ಮಾಡುವಾಗ (ರಾಮಪ. ದಲ್ಲಿ) ಒಂದೆಡೆ ಸಮುದ್ರನಾಥನು ದೇವತೆಗಳೆಲ್ಲ ತನ್ನನ್ನು ಕಡೆಗಣಿಸಿ ತಮ್ಮ ಸ್ವಾರ್ಥ ಸಾಧಿಸಿಕೊಂಡರೆಂದು ಹೇಳುವಂತೆ ತೆರೆಗಳು ಮೊರೆಯುತ್ತಿದ್ದುವೆಂದು ವರ್ಣಿಸಿದ್ದಿದೆ. ಉದಾಹರಣೆಗೆ ಇಂದ್ರ; ಅವನ ಕಾಮಧೇನು ಐರಾವತಗಳೆಲ್ಲ ಸಮುದ್ರಮಂಥನದ ಕಾಲಕ್ಕೆ ದೊರೆತವುಗಳು. ಅಷ್ಟನ್ನೂ ಅವನು ಪಡೆದು ಸಮುದ್ರದ ನೀರನ್ನು ಮೇಘರೂಪದಿಂದ ಹೀರುತ್ತಾನಲ್ಲವೆ. ಆದರೆ ಮೃಡನು ಹಾಗಲ್ಲ! ವಿಷವನ್ನಿತ್ತರೂ ಆತ ವಿಷವನ್ನೆಣಿಸಲಿಲ್ಲವಂತೆ.

ಇನ್ನಷ್ಟು ಉದಾಹರಣೆಗಳನ್ನು ಕೊಡೋಣವೆ? ವಾಲ್ಮೀಕಿ ಮುನಿಯನ್ನು ವರ್ಣಿಸುವ ಪ್ರಸಂಗದಲ್ಲಿ ಮುದ್ದಣನಿಗೆ ಶಿವನ ವೇಷ-ಭೂಷಣಗಳೇ ಹೋಲಿಕೆಯಾಗಿ ದೊರೆತವು. ರಾಮಾಶ್ವಮೇಧದಲ್ಲಿ ಒಂದೆಡೆ ಹೂಗಳ ವರ್ಣನೆ ಮಾಡಬೇಕೆಂದೆನಿಸಿತು, ಮುದ್ದಣನಿಗೆ. ಅವು ಕಾಮನ ಬತ್ತಳಿಕೆಯಂತಿವೆ, ಎಂದು ಊಹಿಸಿದ. ಯಾಕೆ? ತಪಸ್ಸಿಗೆ ಕುಳಿತಿದ್ದ ಶಿವನನ್ನು ಗೆಲ್ಲಲು ತನ್ನ ಬತ್ತಳಿಕೆಯಲ್ಲಿದ್ದ ಐದು ಬಾಣಗಳು ಸಾಕಾಗಲಿಲ್ಲವೆಂದು ಕಾಮನು ಇದನ್ನು ಒಟ್ಟುಗೂಡಿಸಿದನೆಂದು ಮುದ್ದಣ ಕಲ್ಪಿಸಿದ್ದಾನೆ. ಇದೊಂದು ಎಳೆದು ತಂದ ಕಲ್ಪನೆ ಎಂದೆನಿಸಬಹುದು. ಆದರೆ ಮುದ್ದಣನ ಉತ್ಕಟ ಶಿವಭಕ್ತಿಗೆ ಮಿತಿಯೆಲ್ಲಿದೆ? ಅವನು ಶಿವನನ್ನು ತೆಂಗಿನಕಾಯಿಗೂ ತಳಕು ಹಾಕಿದ್ದಾನೆ. ಶಿವನಂತೆ ಅದೂ ಮುಕ್ಕಣ್ಣ ಹಾಗೂ ತೊವಲ್ದೊದೆಯ!

ಮುನಿಗಳ ಆಶ್ರಮ ವರ್ಣನೆಯಲ್ಲಿ. ಅಲ್ಲಿದ್ದ ಪ್ರಾಣಿಗಳು ತಮ್ಮ ವೈರತ್ವವನ್ನು ಮರೆತು ಕೂಡಿ ಬಾಳುತ್ತಿದ್ದುವೆಂದು ನಮ್ಮ ಪ್ರಾಚೀನ ಕವಿಗಳು ತಪ್ಪದೇ ಹೇಳಿದ್ದಾರೆ. ಮುದ್ದಣನು ಇದಕ್ಕೆ ಹೊರತಲ್ಲ. ವಾಲ್ಮೀಕಿಯ ಆಶ್ರಮದಲ್ಲಿ ಸಿಂಹ, ಎತ್ತು, ನವಿಲು, ಸರ್ಪ - ಈ ಪ್ರಾಣಿಗಳು ಜೊತೆಯಾಗಿ ಇದ್ದುವಂತೆ. ಇವೇ ಪ್ರಾಣಿಗಳನ್ನು ಮುದ್ದಣನು ಆಯ್ದುಕೊಂಡದ್ದರ ಬುದ್ಧಿವಂತಿಕೆ ಹೀಗಿದೆ! ಸಿಂಹವು ಪಾರ್ವತಿಯ ವಾಹನ; ಬಸವ ಅವನದ್ದೇ. ಇತ್ತ ನವಿಲು ಷಣ್ಮುಖನ ವಾಹನವಾದರೆ, ಹಾವು ಗಣಪತಿಯ ಹೊಟ್ಟೆಯ ಪಟ್ಟಿಯಾಗಿದ್ದಿತು. ತನ್ನ ಬಳಗದವರ ಪರಸ್ಪರ ಕಾದಾಟವನ್ನು ನಿಲ್ಲಿಸಲು ತಾನೇ ವಿಷವನ್ನು ನುಂಗಿದ ಶಿವನು ಮೇಲಣ ನಾಲ್ಕು ಪ್ರಾಣಿಗಳಿಗೆ ಸಹ ಜೀವನದ ಬುದ್ಧಿವಾದ ಹೇಳಿದನೊ ಎಂಬಂತೆ, ಅವು ಅಲ್ಲಿ ಇದ್ದುವಂತೆ! ಮುದ್ದಣನು ಹಳೆಯ ಕವಿಸಮಯವೊಂದನ್ನು ಶಿವನ ಹೆಗ್ಗಳಿಕೆಗೆ ನಿದರ್ಶನವಾಗಿ ಮಾರ್ಪಡಿಸಿಕೊಂಡಿದ್ದಾನೆ.

ಅದರಂತೆ ಋತುವರ್ಣನೆಯೂ ಹಳಗನ್ನಡ ಕಾವ್ಯದಲ್ಲಿ ಕ್ರಮಪ್ರಾಪ್ತವಾದುದು. ಚಳಿಗಾಲ ಬಂದಾಗ ವಿಷ್ಣು ಮೊದಲಾದ ದೇವತೆಗಳು ಹೇಗೆ ತಮ್ಮನ್ನು ರಕ್ಷಣೆ ಮಾಡಿಕೊಂಡರೆಂಬುದರ ವರ್ಣನೆ ರಾಮಾಶ್ವಮೇಧದಲ್ಲಿ ಬರುತ್ತದೆ. ಅವರಲ್ಲಿ ಶಿವನ ಹೂಟವು ಅತ್ಯಂತ ಮನೋಜ್ಞವಾಗಿದೆ. ಹಿಮಗಿರಿವಾಸನಾಗಿದ್ದರೂ ಶಿವನು ಹಿಮಕ್ಕೆ ಹೆದರಿ, ಹೊತ್ತ ಹೊರೆಯಾದ ಚಂದ್ರನನ್ನು ಮೊದಲು ಆಕಾಶಕ್ಕೆ ತಳ್ಳಿದನು. ನೆತ್ತಿಯಲ್ಲಿದ್ದ ಗಂಗೆಯನ್ನು ನೆಲಕ್ಕಿಳಿಸಿದನು. ಇವೆರಡೂ ತಂಪನ್ನು ಹೆಚ್ಚಿಸುವಂಥವು, ತಾನೇ. ಪುಣ್ಯಕ್ಕೆ ಅವನ ಬಳಿ ಹಣೆಗಣ್ಣ ಬೆಂಕಿಯಿದ್ದಿತಲ್ಲ! ಶಿವನು ಅದನ್ನು ಉರಿಮಾಡಿ, ಅದರ ಬಿಸಿಬಿಸಿ ಬೂದಿಯನ್ನು ಮೈತುಂಬ ಬಳಿದುಕೊಂಡ. ಮೇಲೆ ದಪ್ಪನಾದ ಹುಲಿ ಚರ್ಮವನ್ನು ಹೊದ್ದುಕೊಂಡ. ಹೇಗೂ ಅರ್ಧನಾರೀಶ್ವರ! 'ಅಂಗಜವೈರಿಸು ಬೆರೆವೊಡಲೊಳಿರ್ದನು'.

ಇನ್ನೊಂದೇ ನಿದರ್ಶನವನ್ನು ಕೊಟ್ಟು ಮುದ್ದಣನ ಅಂತರ್ಯದ ಶಿವಪ್ರೇಮದ ವಿವರಣೆಯನ್ನು ಮುಕ್ತಾಯಗೊಳಿಸೋಣ. ಇಕ್ಷುಮತಿಯ ಗಂಡನಾಗಿ ಶಿವನು ಒಂದಂಶದಲ್ಲಿ ಭೂಮಿಯ ಮೇಲಿದ್ದುದನ್ನೂ ಮಾವನಿಗಾಗಿ ಯುದ್ಧಕ್ಕೆ ಹೊರಟದ್ದನ್ನೂ ಈ ಮೊದಲು

ಪ್ರಸ್ತಾಪಿಸಿದ್ದೇವೆ. ನೆನಪಿಡಿ : ಮೊದಲ ಹೆಂಡತಿ - ಪಾರ್ವತಿಯ ತಂದೆಯನ್ನು ಧ್ವಂಸ ಮಾಡಿದಂಥ ಶಿವನು, ಈ ಕಿರಿಯ ಹೆಂಡತಿಯ ಅಪ್ಪನ ಮನೆಯಳಿಯನಾಗಿದ್ದಾನೆ! ಯುದ್ಧಕ್ಕೆ ಹೊರಡುವ ಮುನ್ನ ಶಿವನು ತನ್ನ ಹರೆಯದ ಪತ್ನಿಯನ್ನು ಬೀಳ್ಕೊಡಲೆಂದು ಬಂದನು. ಆಗ ಆ ಚೆಲುವೆ ಅವನನ್ನು ತಡೆದು ನಿಲ್ಲಿಸಿ, ಆ ಬಾನ್-ಕುರುಳನ ಮುಂಗುರಳನ್ನು ತೀಡಿ, ನೇವರಿಸಿದಳು. ಜಟಾಧರನ ಜಡೆಯನ್ನು ಮುಡಿಗಟ್ಟಿದಳು. ಚಂದ್ರಮೌಳಿಯ ನಡುನೆತ್ತಿಯ ಜೋಲ್ಮುಡಿಗೆ ಪೂಸರವನ್ನು ಮುಡಿಸಿದಳು. ಗಂಗೋತ್ತಮಾಂಗನ ಮುಂದಲೆಗೆ ಶಿರಸ್ತ್ರಾಣವನ್ನು ಅಳವಡಿಸಿದಳು. ಫಣಿಕುಂಡಲನ ಕಿವಿಗೆ ಮಕರ ಕುಂಡಲವನ್ನಿಟ್ಟಳು. ಕಂದುಗೊರಲನ ಕೊರಳಿಗೆ ಪಚ್ಚೆಯ ಕಂಠಿಕೆಯನ್ನು ತೊಡಿಸಿದಳು. ರುಂಡಮಾಲನ ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಹಾಕಿದಳು. ವ್ಯಾಘ್ರಚರ್ಮಾಂಬರನಿಗೆ ಉತ್ತಮ ವಸ್ತ್ರಗಳನ್ನು ತೊಡಿಸಿದಳು. ಭಸ್ಮಧರನ ಮೈಗೆ ಗಂಧವನ್ನು ಲೇಪಿಸಿದಳು. ಬೆಳ್ಳಡಿಯನ ಧವಳ ಪಾದಕ್ಕೆ ಬಂಗಾರದ ಪಾದುಕೆಯನ್ನು ಒಪ್ಪಿಸಿದಳು. ತ್ರಿಶೂಲಿಯ ಕೈಗೆ ಬಿಲ್ಲು ಬಾಣಗಳನ್ನು ಕೊಟ್ಟಳು. ಫಾಲನೇತ್ರನ ಹಣೆಗೆ ವೀರ ಸೇಸೆಯನ್ನಿಕ್ಕಿದಳು..... ಮನಸ್ಸಿನಂತೆ ಮಾದೇವ! ಹೀಗೆ ತನಗಿಷ್ಟ ಬಂದಂತೆ ಅಲಂಕರಿಸಿ, ಆ ಪಂಚಮುಖನ ಶೋಭೆಯನ್ನು ತಾನೇ ಮೆಚ್ಚಿಕೊಂಡು ಮುದ್ದಿಟ್ಟು ಕಳುಹಿದಳು!

ಈ ರೀತಿಯ ಮಂಗಳ ಮನೋಹರ ಶಿವನ ದರ್ಶನವನ್ನು ನಮಗೆ ಒದಗಿಸಿದ ಮುದ್ದಣನೇ, ನಿನಗೆ ನಮ್ಮ ಮನಃಪೂರ್ವಕ ವಂದನೆಗಳು!



---

ಈ ಲೇಖನವನ್ನು ಬರೆಯುವಲ್ಲಿ ವಿದ್ವಾನ್ ರಾಮಚಂದ್ರ ಉಚ್ಚಿಲರ ನೆರವನ್ನು ವಿಶೇಷವಾಗಿ ಪಡೆದಿದ್ದೇನೆ.

# ೩ ಹಟ್ಟಿಯಂಗಡಿ ನಾರಾಯಣರಾಯರು

'ಹೊಸಗನ್ನಡ ಸಾಹಿತ್ಯದ ಆರಂಭ ಕಾಲದಲ್ಲಿ ಇಂಗ್ಲಿಷ್ ಕವನಗಳನ್ನು ಅನುವಾದಿಸಿದ ಮೂವರು ಆದ್ಯರಲ್ಲಿ ಹಟ್ಟಿಯಂಗಡಿ ನಾರಾಯಣರಾಯರು ಒಬ್ಬರು' - ಎಂಬ ಮಟ್ಟಿಗೆ ಮಾತ್ರ ಅವರನ್ನು ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಿಸಲಾಗಿದೆ. ಅವರ ಲೇಖನ ಕಾರ್ಯ ಬೇರೆ ಯಾವ ಕ್ಷೇತ್ರಗಳಲ್ಲಿ ಕಂಡು ಬಂದಿದೆ? ಅವರ ಬರವಣಿಗೆಯ ಹಿನ್ನೆಲೆ ಮತ್ತು ಪ್ರೇರಣೆಗಳಾವುವು? ಅವರ ಬದುಕು ಹೇಗಿದ್ದಿತು? ಇವೆಲ್ಲ ವಿಚಾರಗಳನ್ನು ತಿಳಿಯಲು ಬಹು ದೊಡ್ಡ ಆತಂಕವೆಂದರೆ ಅವರ ಪ್ರಸಿದ್ಧಿವಿಮುಖತೆ. ಸ್ವತಃ ತಮ್ಮ ಬಗ್ಗೆ ತಮ್ಮ ಬಂಧು-ಬಳಗದವರೆದುರೂ ಹೇಳಿದವರಲ್ಲ. ಅವರ ಬರಹಗಳಲ್ಲಿಯೂ ಈ ಕುರಿತ ವಿವರಗಳು ಸಿಕ್ಕುವ ಸಂಭವ ಕಡಿಮೆ. ಸಾಲದ್ದಕ್ಕೆ ಎಷ್ಟೋ ಬರಹಗಳಿಗೆ ತಮ್ಮ ಹೆಸರನ್ನೇ ಕಾಣಿಸುತ್ತಿರಲಿಲ್ಲ. ಹೀಗಿರುವುದರಿಂದ ಅವರ ಜೀವನ ಹಾಗೂ ವ್ಯಕ್ತಿತ್ವದ ಪರಿಚಯ ಸಮಗ್ರವಾಗಿ ದೊರೆಯದು.

ನಾರಾಯಣರಾಯರ ಜನನ ೧೧ ಫೆಬ್ರವರಿ ೧೮೬೩ ರಂದು ಮಂಗಳೂರಲ್ಲಿ. ದೈವಭಕ್ತಿಯುಳ್ಳ ಪರಮೇಶ್ವರಯ್ಯ ಮತ್ತು ಸರಸ್ವತಿ - ಅವರ ತಂದೆತಾಯಿಗಳು. ಆ ಕಾಲಕ್ಕೆ ಉಡುಪಿಯ ಕಡೆಯಲ್ಲಿ ಭಜನೆ ಗೋಪಾಲಯ್ಯ ಎನ್ನುವ ಅನ್ವರ್ಥಕ ಹೆಸರಿನವರಿದ್ದರು. ಅವರು ನಾರಾಯಣರಾಯರ ಕಕ್ಕ. ಬಡತನದ ಮನೆತನ. ಆದರೂ ಜನ ನಿಷ್ಠಾವಂತರು; ಉದ್ಯಮಶೀಲರು.

ನಾರಾಯಣನ ಶಿಕ್ಷಣ ಕಾರ್ಕಳದಲ್ಲಿ ಆಯಿತಂತೆ-ಅವರಿವರ ಸಹಾಯದಿಂದ. ೧೮೭೯ರಲ್ಲಿ ಮೆಟ್ರಿಕ್, ಬಿ.ಎ. ಮುಗಿಸಲು ಮದ್ರಾಸಿಗೆ ಹೋದರು. ಅಭ್ಯಾಸದಲ್ಲಿ ಯಾವಾಗಲೂ ಮುಂದು, ಹೆಚ್ಚಿನ ಅಂಕಗಳನ್ನು ಪಡೆಯುತ್ತಿದ್ದರಾದ್ದರಿಂದ ಶಿಕ್ಷಣ ಕಾರ್ಯ ಸುಸೂತ್ರವಾಗಿ ಕೊನೆಗಂಡಿತು. ಅದೇ ಕಾರಣದಿಂದ ಬಿ. ಎ. ಫಲಿತಾಂಶವು ಹೊರಬಿದ್ದ ಮರುತಿಂಗಳಲ್ಲಿಯೇ ನೋಬಲ್ ಎಂಬ ಶಿಕ್ಷಣಸಂಸ್ಥೆಯಲ್ಲಿ ಮಾಸ್ತರಿಕೆಯನ್ನು ಆರಂಭಿಸಿದರು. ಮರುವರ್ಷವೇ ಮಡಿಕೇರಿಗೆ ವರ್ಗವಾಯಿತು. ಮೂರು ವರ್ಷ ಅಲ್ಲಿ ಇದ್ದರೆಂದು ಕಾಣುತ್ತದೆ. ೧೮೮೮ರಲ್ಲಿ ಮಂಗಳೂರಿನ ಸರಕಾರೀ ಕಾಲೇಜಿಗೆ ವರ್ಗವಾಯಿತು - ಬಡತಿಯ ಮೇಲೆ.

ಮುಂದೆ ಅದೇನು ಹೆಚ್ಚು ಕಡಿಮೆಯಾಯಿತೊ ಗೊತ್ತಿಲ್ಲ. ೧೮೯೧ರಲ್ಲಿ ರಾಜೀನಾಮೆ ಕೊಟ್ಟುಬಿಟ್ಟರು. ಮದ್ರಾಸಿಗೆ ಲಾ ಕಲಿಯಲು ಹೋದರು. ಆಗೂ ಭಾಗಶಃ ಮಾಸ್ತರಿಕೆಯನ್ನು ಮಾಡುತ್ತಿದ್ದರು. ಅದರಿಂದ ಅಭ್ಯಾಸಕ್ಕೆ ಯಾವ ವ್ಯತ್ಯಯ ಬರದೇ ಬಿ. ಎಲ್. ಮುಗಿಸಿದರು. (೧೮೯೪) ಸ್ವತಂತ್ರವಾಗಿ ಜೀವನ ಸಾಗಿಸುವ ಉದ್ದೇಶದಿಂದ ವಕೀಲಿವೃತ್ತಿಯನ್ನೇನೊ ಕೈಕೊಂಡರು. ಕವ್ಲೆ ನಾರಾಯಣರಾಯರೆಂಬ ಹಿರಿಯ ವಕೀಲರ ಕೈಯಲ್ಲಿ ಅನುಭವವನ್ನು ಪಡೆದರು. ಆದರೆ ಆ ವೃತ್ತಿಯಲ್ಲಿ ಯಶಸ್ವಿಯಾದಂತೆ ಕಾಣಲಿಲ್ಲ.

ಮತ್ತೆ ಮಾಸ್ತರಿಕೆ! ಮದ್ರಾಸಿನ ಟ್ರಿಪ್ಲಿಕೇನ್‌ನಲ್ಲಿದ್ದ ಹಿಂದೂ ಹೈಸ್ಕೂಲಿನಲ್ಲಿ, ಮುಖ್ಯಾಧ್ಯಾಪಕರೆಂದು ಸೇರಿದರು. ಹತ್ತಿಕುದರ ಶಿವರಾಮ-ಮದ್ರಾಸ ಸರಕಾರದಲ್ಲಿ ಎಗ್ರಿಕಲ್ಚರಲ್ ಕೆಮಿಸ್ಟ್ ಆಗಿದ್ದವರು - ಹ.ನಾ. ಅವರ ಶಿಷ್ಯರಾಗಿದ್ದರಂತೆ. ಆ ವಯೋವೃದ್ಧರು ಈಚೆಗೆ (ಅಂದರೆ, ಹ.ನಾ. ಅವರನ್ನು ಕುರಿತು ನಾನು ಮಾಹಿತಿ ಸಂಗ್ರಹಿಸುತ್ತಿದ್ದಾಗ) ಈ ರೀತಿ ಪತ್ರ ಬರೆದಿದ್ದಾರೆ;

> I have known and met Shri Rao on several occasions during the years 1900-1903, when I was a young lad of 8 years. He was of a fair complexion and short in stature. He had no issues and was sharing a big house, with Dhareshwar Sadashivrao, Dubash of Volkart Bros.... While Shri Rao was in Madras, he had a stint as the Head Master of the noted Hindu High School (just prior to Rt. Hon'ble V.S.S. Shastri, of revered memory) who not only elevated the much disparaged status of a Headmaster but embellished it. If this is an exaggeration I may be pardoned because I was one of his students. Bangalore, 8-1-1983. - H. Shivarao.

ಅಖಿಲ ಭಾರತ ಖ್ಯಾತಿಯ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳು ಹಿಂದೂ ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದ ವಿಷಯ ಅವರ ಚರಿತ್ರೆಗಳಲ್ಲಿ ಎದ್ದು ಕಾಣುವಂತೆ ಬಂದಿದೆ. ಅವರಿಗಿಂತ ಮುಂಚೆ ಆ ಶಾಲೆಯ ಬೆಳವಣಿಗೆಗೆ ಹ. ನಾ. ಅವರು ಕಾರಣರಾಗಿದ್ದರೆಂಬುದು ವಿಶೇಷದ ಸಂಗತಿಯಾಗಿದೆ.

'No issues', ಹೌದು ಮಂಗಳೂರಲ್ಲಿದ್ದಾಗಲೇ ನಾರಾಯಣರಾಯರ ಮದುವೆಯಾಗಿತ್ತು. ಮೂವರು ಮಕ್ಕಳು ಹುಟ್ಟಿದ್ದರು. ಆದರೆ ಕುಟುಂಬದ ನಾಲ್ವರೂ ತೀರಿಕೊಂಡು, ಏಕಾಂಗಿಯಾಗಿದ್ದರು. ಅದಕ್ಕೆಯೇ ಮಂಗಳೂರನ್ನು ಬಿಟ್ಟು ಮದ್ರಾಸಿಗೆ ಬಂದಿರಲೂ ಸಾಕು.

ನಾರಾಯಣರಾಯರು ಪತ್ರಿಕೋದ್ಯಮಿಯಾಗಿ ಕೆಲಸ ಮಾಡತೊಡಗಿದ್ದು ಇದೇ ಕಾಲದಲ್ಲಿ. ವಿಶೇಷತಃ ಬಿ. ಎಂ. ಮಲಬಾರಿಯವರ Indian Spectator ಮಾಸಿಕದಲ್ಲಿ ಅವರ ಲೇಖನಗಳು H.N.R ಎಂಬ ಸಂಕ್ಷಿಪ್ತ ಹೆಸರಿನಲ್ಲಿ ಬರುತ್ತಿದ್ದುವು. (೧೯೧೨ರಲ್ಲಿ ಮಲಬಾರಿಯವರು ತೀರಿಕೊಂಡ ಮೇಲೆ, ಕೆಲಕಾಲ ಅದರ ಸಂಪಾದಕರೂ ಆಗಿದ್ದರು). ಅವರ ಆಗಿನ ಬರವಣಿಗೆಯನ್ನು ಕುರಿತು, ಸರದಾರ ಜೋಗೇಂದರ್‌ಸಿಂಗ್ (ಮಲಬಾರಿಯವರ ಜೀವನ ಚರಿತ್ರೆಯನ್ನು ಬರೆದವರು) ಹೇಳಿದ ಮಾತುಗಳು ಗಮನಾರ್ಹವಾಗಿವೆ:

The columns of Indian Spectator testify to the innate benevolence of the Editor, no less than to his unerring judgement. The Indian Spectator under him spoke consistently for the people, yet represented no party, He often endeavoured to pour oil on troubled waters; and sometimes a note in the Indian Spectator served as a balm to wounded pride and won the heart of an opponent.

ಅವರು ೧೯೦೩ರ ಸುಮಾರಿಗೇನೆ ಮುಂಬಯಿಯಲ್ಲಿ ನೆಲಸಲು ಬಂದರು. ಬಹುಶಃ ಮೇಲೆ ಹೇಳಿದ ಪತ್ರಿಕೆಯನ್ನು ಮಲಬಾರಿಯವರು ತಮ್ಮ ವಶಕ್ಕೆ ತೆಗೆದುಕೊಂಡು ಮುಂಬಯಿಯಿಂದ ನಡೆಸತೊಡಗಿದ್ದುದು ಕಾರಣವಾಗಿರಬೇಕು. ಹ. ನಾ. ಅವರ ಈ ಪತ್ರಿಕೆಯಲ್ಲದೆ ಅಲ್ಲಿಯ Times of Indiaದಲ್ಲಿ Behind the Indian veil' ಎಂಬ ಅಂಕಣದಲ್ಲಿ ವಾರಂವಾರ ಬರೆಯುತ್ತಿದ್ದರು. ವಿಷಯ ಪ್ರಚಲಿತ ರಾಜಕೀಯ ಹಾಗೂ ಸಾಮಾಜಿಕ ಆಗುಹೋಗುಗಳು. ಅಖಿಲ ಭಾರತ ಮಟ್ಟದಲ್ಲಿ ಆ ಬರಹಗಳು. ಸ್ಪಷ್ಟತೆ ಹಾಗೂ ತೂಕದ ವಿಚಾರ ಸರಣಿಯಿಂದ ಕೂಡಿದ್ದ ಅವುಗಳಲ್ಲಿ ಕೆಲವನ್ನು ತಿರುವಿ ಹಾಕಿದ್ದೇನೆ. ಎಲ್ಲಿಯೂ ಆ ಲೇಖನಗಳ ಕೊನೆಯಲ್ಲಿ - ಸಂಕ್ಷಿಪ್ತವಾಗಿಯಾದರೂ - ಅವರ ಹೆಸರಿಲ್ಲ. ಅವರು ಲೇಖನಗಳನ್ನು ಪ್ರಕಟಿಸುತ್ತಿದ್ದ ಇನ್ನೊಂದು ಪತ್ರಿಕೆಯ ಹೆಸರು East & West ಎಂಬ ಮಾಸಿಕ. ಇವೆರಡೂ ಪತ್ರಿಕೆಗಳಲ್ಲಿ ಬರುತ್ತಿದ್ದ ಅವರ ಲೇಖನಗಳ ಬಗ್ಗೆ ಹೊರಬಂದ ಒಂದು ಅಭಿಪ್ರಾಯ ಹೀಗಿದೆ:

> Both the journals were conducted in the best traditions of journalism and exercised an immense power on the politics of the day. Mr. Rao's wide culture and wider human sympathies, his intimate knowledge of constitutional law and current movements, his keen sense of humour, combined with an ever unruffled temper and a style, chaste, clear and incisive made his writings always delightful reading.*

ಪತ್ರಿಕಾರಂಗದಲ್ಲಿ ಇಷ್ಟನ್ನು ಸಾಧಿಸಬೇಕಾದರೆ ಸತತಾಭ್ಯಾಸ ಹಾಗೂ ಚಿಂತನೆ ಬೇಕಾಗುತ್ತದೆ. ನಾರಾಯಣರಾಯರು ಒಂದು ಮಿನಿಟನ್ನೂ ವ್ಯರ್ಥ ಹೋಗಗೊಡದೆ ವಾಚನ, ಲೇಖನಗಳಲ್ಲಿ ನಿರತರಾಗಿರುತ್ತಿದ್ದರು. ಅದಕ್ಕಾಗಿ ಅವರು ದಿನದ ತಮ್ಮ ಬಹು ಸಮಯವನ್ನು (ರಾಯಲ್) ಏಶಿಯಾಟಿಕ್ ಸೊಸೈಟಿಯ ಲೈಬ್ರರಿಯಲ್ಲಿ, ತಮ್ಮ 'ಠರಾವಿಕ' ಜಾಗದಲ್ಲಿ ಕುಳಿತಿರುತ್ತಿದ್ದರಂತೆ. ತಾವಾಗಿ ಮಾತಾಡುವುದಾಗಲೀ, ಸ್ನೇಹಿತರೊಂದಿಗೆ ಕಲೆಯುವುದಾಗಲೀ ಅವರ ಜಾಯಮಾನಕ್ಕೆ ಒಗ್ಗುತ್ತಿದ್ದಿಲ್ಲ.

---

* His death is a distinct loss to Indian journalism ಎಂದು ಕೊನೆಗೊಳ್ಳುವ ಈ ಬರಹವು, ಹ. ನಾ. ಅವರ ಮರಣಾನಂತರ Bombay Chronicle ದಿನಪತ್ರಿಕೆಯಲ್ಲಿ ಪ್ರಕಟವಾಗಿದ್ದಿತು.

ಈ ಬಗ್ಗೆ ಅವರ ತಮ್ಮ ಎಚ್. ಶಂಕರರಾಯರು ಹೇಳಿದ್ದುದು ಹೀಗೆ:

I lived with him at Bandra for nine years and yet it is no exaggeration to say that our conversation during those nine years could not have taken up more than nine minutes. Indeed it often looked as if he had taken a vow of silence.

ಆಗಿನ ಅವರ ಬಹುಶ್ರುತತ್ವದ ಕಲ್ಪನೆಯನ್ನು ತಂದುಕೊಳ್ಳಬಹುದು. ದೇಶದ ರಾಜಕೀಯ ಆಗುಹೋಗುಗಳಂತೂ ಸರಿಯೇ, ವಿವಿಧ ಭಾಷೆಗಳಲ್ಲಿ ವಿಶೇಷತ ಸಂಸ್ಕೃತ, ಪ್ರಾಕೃತ, ಪಾಲಿ, ಮರಾಠಿ, ಗುಜರಾತಿ - ಇವುಗಳಲ್ಲಿ ಪರಿಣತಿಯನ್ನು ಹೊಂದಿದ್ದರು. ಇಂಗ್ಲೀಶ್ ಸಾಹಿತ್ಯದಲ್ಲಿಯಂತೂ ಮೊದಲಿನಿಂದ ಒಲವಿದ್ದಿತು. ಇತ್ತ ಭಾರತೀಯ ಸಾಂಸ್ಕೃತಿಕ ಪರಂಪರೆಯನ್ನು ಚೆನ್ನಾಗಿ ತಿಳಿದವರಾಗಿದ್ದರು. ಅವರಿಗೆ ಸಂಗೀತ ಶಾಸ್ತ್ರದ ಪರಿಜ್ಞಾನವೂ ಇತ್ತೆನ್ನುವುದಕ್ಕೆ ತಮ್ಮ ಕೆಲವು ಹಾಡುಗಳಿಗೆ ಅವರು ಕೊಟ್ಟ ರಾಗ ತಾಳಗಳ ಟಿಪ್ಪಣಿಗಳಿಂದ ತಿಳಿಯಬಹುದಾಗಿದೆ. ಇದೆಲ್ಲದರ ಅನುಷ್ಠಾನ ಇಲ್ಲವೆ ಪ್ರಯೋಗವು ಕನ್ನಡ ಲೇಖನ ಕಾರ್ಯದಲ್ಲಿ ಆಗಲಿಲ್ಲವೆಂಬುದು ತುಸು ಬೇಸರದ ಸಂಗತಿ.

ಅವರ ಮುಂಬಯಿಯಲ್ಲಿನ ವೈಯಕ್ತಿಕ ಜೀವನ ಹೇಗಿದ್ದಿತು? ಮೊದಲು ಅವರು ನಗರಮಧ್ಯೆ ಇರುವ ತಾರದೇವದಲ್ಲಿ ವಾಸವಾಗಿದ್ದರು. ಅನಂತರ ಬಾಂದ್ರಾದಲ್ಲಿ ನೆಲೆನಿಂತರು. ಎಂದಿನಂತೆ ಒಬ್ಬಂಟಿಗರು. ಆಯುಷ್ಯದ ೩೦ನೆಯ ವರ್ಷ ಇರಬೇಕು - ಹೆಂಡತಿ ತೀರಿಕೊಂಡು ಇನ್ನೊಂದು ಮದುವೆ ಮಾಡಿಕೊಳ್ಳಬೇಕಿತ್ತು. ಬಳಗದವರ ಒತ್ತಾಯವೂ ಇದ್ದಿತು. ಮದುವೆ ಆಗುವುದೇ ಆದರೆ, ವಿಧುರನಾದ ತಾನು ಓರ್ವ ವಿಧವೆಯನ್ನೆ ಮದುವೆಯಾಗಬೇಕು - ಎಂದು ನಿರ್ಧರಿಸಿದರು. ಆಗಿನ ಕಾಲಕ್ಕೆ ವಿಧವಾ ವಿವಾಹ ಎನ್ನುವ ಮಾತನ್ನು ಬಾಯಿಯಿಂದ ಕೂಡ ಆಡಲಾಗದಂಥ ಸ್ಥಿತಿ. ಆ ತಮ್ಮ ನಿರ್ಧಾರವನ್ನು ೧೭-೧೮ ವರ್ಷಗಳವರೆಗೂ ಉಳಿಸಿಕೊಂಡರು. ಅಷ್ಟು ವರ್ಷ ಕಾಯ್ದುದ್ದು ವ್ಯರ್ಥ ಹೋಗಲಿಲ್ಲವೆನ್ನುವಂತೆ, ಕೊನೆಗೊಮ್ಮೆ ಅಂಬಾಬಾಯಿ* ಎಂಬ ವಿಧವೆಯನ್ನೇ ಮದುವೆಯಾದರು. ಆಗ ಹ. ನಾ. ಅವರ ವಯಸ್ಸು ಐವತ್ತರ ಒಳಹೊರಗೆ ಇದ್ದಿರಬೇಕು.

ವಿಧವೆಯನ್ನು ಮದುವೆಯಾದದ್ದರ ಪರಿಣಾಮವಾಗಿ ಮಠಾಧೀಶರು ಹಾಗೂ ಇತರ ಸ್ವಜಾತಿ ಬಾಂಧವರನೇಕರು ಅವರನ್ನು ದೂರ ಇರಿಸಿರಲು ಸಾಕು. ಇವರು ಮಾತ್ರ ಯಾರಿಗೂ ಪ್ರತ್ಯುತ್ತರ ಕೊಡಹೋಗಲಿಲ್ಲ. ಮನಸ್ಸಿನಲ್ಲಿ ಅವರ ಬಗ್ಗೆ ಸಿಟ್ಟು ಬೇಸರ ತಾಳಲಿಲ್ಲ. ಸಮಾಜಸುಧಾರಣಾ ವಿಚಾರದಲ್ಲಿ ತಮ್ಮ ಮಠದ (ಚಿತ್ರಾಪುರ) ಪಾಂಡುರಂಗಾಶ್ರಮ ಸ್ವಾಮಿಗಳ ವಿರೋಧವನ್ನು ಕಟ್ಟಿಕೊಂಡರಾದರೂ ಅವರೊಂದಿಗೆ ಯಾವುದೇ ವಿವಾದಕ್ಕೆ ತೊಡಗಲಿಲ್ಲ. "The Swamiji's position is constitutionally right. But it is

---

* ಈಕೆ, ಆಗಿನ ಲೇಖಕರಲ್ಲೊಬ್ಬರಾದ ಶಿವರಾಮ ಭಾರದ್ವಾಜರ ಮಗಳು. ಭಾರದ್ವಾಜರು ಕಿಟೆಲ್ ನಿಘಂಟುವಿನ ರಚನೆಯಲ್ಲಿ ನೆರವಾಗಿದ್ದರು. ಹೋಮಿಯೋಪತಿ ವೈದ್ಯರಾಗಿದ್ದ ಅವರು ಆರೋಗ್ಯ ವಿಷಯಕ ಪುಸ್ತಕಗಳನ್ನು ಬರೆದಿದ್ದಾರೆ.

for the community to decide by a majority what it must have and to alter the present arrangements if it thinks fit" ಎಂಬುದು ಅವರ ನಿಲುಮೆಯಾಗಿದ್ದಿತು.**

ಅದೇನೆ ಇದ್ದರೂ ಸಾರಸ್ವತ ಸಮಾಜದ ಏಳ್ಗೆಯು ಅವರ ಮನ ತಟ್ಟಿದ ವಿಷಯವಾಗಿದ್ದಿತು. ಕೆನರಾ ಸಾರಸ್ವತ ಅಸೋಸಿಯೇಶನ್ನಿನ ಆಜೀವ ಸದಸ್ಯರಾಗಿದ್ದು ಅದರ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತಿದ್ದರು. ಸಂಸ್ಥೆಯ ಮುಖಪತ್ರವಾದ `ಸಾರಸ್ವತ ಕ್ವಾರ್ಟರ್ಲಿ'ಯನ್ನು ನಡೆಸುವಲ್ಲಿ ಸಕ್ರಿಯ ಪಾತ್ರ ವಹಿಸಿದ್ದರು.

ಅಂದ ಹಾಗೆ ಅವರು ಬ್ರಹ್ಮ (ಹ್ಮೊ) ಸಮಾಜದ ಕಟ್ಟಾನುಯಾಯಿಗಳಿದ್ದರು. ಮಂಗಳೂರಲ್ಲಿ ಇದ್ದಾಗಲೇ ಆ ಸಮಾಜದ ದೀಕ್ಷೆಯನ್ನು ಹೊಂದಿರಬೇಕು. ಜನಿವಾರವನ್ನು ಹಾಕುತ್ತಿದ್ದಿಲ್ಲ. ಆದರೆ ಗಾಯತ್ರಿ ಜಪವನ್ನು ತಪ್ಪದೇ ಮಾಡುತ್ತಿದ್ದರಂತೆ. ಉಪಾಸನೆಯು ಬ್ರಹ್ಮಸಮಾಜದವರ ಒಂದು ನಿತ್ಯದ ಕಾರ್ಯಕ್ರಮ. ಅದನ್ನು ಅವರು ಶ್ರದ್ಧೆಯಿಂದ ಪಾಲಿಸುತ್ತಿದ್ದರು. ಜೊತೆಗೆ ಭಜನಾ ಕಾರ್ಯಕ್ರಮ, ಮರಾಠಿ, ಕೊಂಕಣಿ ಸಂಸ್ಕೃತ-ಇವುಗಳಲ್ಲದೆ ತಾವೇ ರಚಿಸಿದವುಗಳನ್ನು ಹಾಡುತ್ತಿದ್ದರು. ಸುಮಧುರ ಕಂಠ, ಭಾವಪೂರ್ಣವಾದ ಹಾಡುಗಾರಿಕೆ, ಪ್ರತಿನಿತ್ಯದ ಭಜನೆ ಮನೆ ಮಂದಿಯ ಸಲುವಾಗಿ ಇದ್ದರೆ, ವಾರಕ್ಕೊಮ್ಮೆ ಆಸುಪಾಸಿನ ಜನರೂ ಪಾಲ್ಗೊಳ್ಳುತ್ತಿದ್ದರು. ಆಗಾಗ ಅಭಂಗಗಳ, ಸಂಸ್ಕೃತ ಶ್ಲೋಕಗಳ ಇಂಗಿತಾರ್ಥವನ್ನು ತಿಳಿಸಿಹೇಳುತ್ತಿದ್ದರು. ಭಜನೆ ನಡೆದಾಗ ಅವರ ಪತ್ನಿ ತಂಬೂರಿ ಇಲ್ಲವೆ ಹಾರ್ಮೋನಿಯಮ್ ನುಡಿಸುತ್ತಿದ್ದರು.

ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಅವರ ಲೇಖನ ಕಾರ್ಯವು ತಡವಾಗಿ ಎಂದರೆ ೧೯೧೬ರಿಂದ ಮೊದಲಾಯಿತು. ಆದರೆ ಕನ್ನಡದ ಅಭ್ಯಾಸವನ್ನು ಅದಕ್ಕೂ ಎಷ್ಟೋ ಪೂರ್ವದಲ್ಲಿ ಕೈಗೊಂಡಿದ್ದರು. ಹಳಗನ್ನಡ ಕಾವ್ಯಗಳಿಂದ, ಶಾಸನಗಳಿಂದ ಅಧಿಕಾರಯುತವಾಗಿ ಉದಾಹರಿಸುತ್ತ ತಮ್ಮ ಲೇಖನಗಳಲ್ಲಿ ಉಲ್ಲೇಖಿಸಿದ್ದನ್ನು ನೋಡಿದರೆ ಅವರ ಕನ್ನಡ ವ್ಯಾಸಂಗದ ಆಳ-ವಿಸ್ತಾರಗಳು ಬೆರಗುಗೊಳಿಸುತ್ತವೆ. ಕಿಟೆಲ್ ಕೋಶವನ್ನು ಕರತಲಾಮಲಕ ಎನ್ನುವಂತೆ ಪರಿಶೀಲಿಸಿದ್ದರು.

ಇದೇನೆ ಇರಲಿ, ೧೯೧೬ರಷ್ಟು ತಡವಾಗಿಯಾದರೂ ಆರಂಭಿಸುವುದಕ್ಕೆ ಅದರ ಹಿಂದಿನ ವರ್ಷ ಸ್ಥಾಪನೆಯಾದ ಕನ್ನಡ ಸಾಹಿತ್ಯ ಪರಿಷತ್ತು ಪ್ರೇರಣೆ ಕೊಟ್ಟಿತೆಂದು ಹೇಳಬೇಕು.

---

** ಚಿತ್ರಾಪುರ ಮಠದ ಕೆಲವು ಶಿಷ್ಯರು ವಿಧವಾ ವಿವಾಹಕ್ಕೆ (ಕೆಲವೊಂದು ಸಂದರ್ಭಗಳಲ್ಲಿ) ಅನುಮತಿಯನ್ನು ಇಲ್ಲವೆ ಸ್ಪಷ್ಟೀಕರಣವನ್ನು ಕೇಳಿದಾಗ, ಸ್ವಾಮಿಗಳು 'ವಿಧವೋದ್ವಾಹಚಿಕೀರ್ಷುಮತಭಂಜನ' ಎಂಬ ಗ್ರಂಥವನ್ನೇ ಬರೆದು (೧೮೮೯) ಶಾಸ್ತ್ರಾಧಾರವನ್ನು ಕೊಡುತ್ತ ಖಂಡಿಸಿದ್ದಾರೆ. ಅಂಥ ಸುಧಾರಕ ಪುರಸ್ಕರ್ತರಲ್ಲಿ, ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿ ಬರೆದ ಗುಳವಾಡಿ ವೆಂಕಟರಾಯರೂ ಒಬ್ಬರಾಗಿದ್ದರು.

ಪರಿಷತ್ಪತ್ರಿಕೆಯ ಮೊದಲ ಸಂಪುಟದಿಂದಲೇ ಅವರ ಲೇಖನಗಳು ಬರತೊಡಗಿದವು. ಅವರು ಆಯ್ದುಕೊಂಡ ಇನ್ನೆರಡು ಪತ್ರಿಕೆಗಳೆಂದರೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ವಾಗ್ಭೂಷಣ (ಇದರಲ್ಲಿಯೇ ಅವರು ತಮ್ಮ ಆಂಗ್ಲಾನುವಾದಗಳನ್ನು ಹೆಚ್ಚಾಗಿ ಪ್ರಕಟಿಸಿದ್ದರು) ಹಾಗೂ ಮಂಗಳೂರಿನ ವಾರ್ತಾಪತ್ರಿಕೆ 'ಸ್ವದೇಶಾಭಿಮಾನ' ಪರಿಷತ್ಪತ್ರಿಕೆಯಲ್ಲಿಯ ಗದ್ಯಲೇಖನಗಳು ಕನ್ನಡ ನುಡಿ ಹಾಗೂ ಹೊಸಗನ್ನಡ ಪದ್ಯರಚನಾ ವಿಧಾನಕ್ಕೆ ಸಂಬಂಧಿಸಿದವುಗಳು. ಅನೇಕ ಕನ್ನಡ ಶಬ್ದಗಳ ಮೂಲವು ಪ್ರಾಕೃತ ಹಾಗೂ ಅನ್ಯ ದೇಶೀಯಗಳಲ್ಲಿ ಮತ್ತು ಮರಾಠಿಗೆ ಸಮಾನವಾಗಿದ್ದದ್ದನ್ನು ಮನದಂದು ಆ ಕುರಿತು ದಿ ೨೬-೭-೧೯೨೧ರಂದು ಮುಂಬಯಿಯ (ರಾಯಲ್) ಏಶಿಯಾಟಿಕ್ ಸೊಸೈಟಿಯ ಸದಸ್ಯರೆದುರು ಉಪನ್ಯಾಸವಿತ್ತರು. (Etymological research in Kanarese and Marathi).

ಒಂದೆರಡನ್ನು ಬಿಟ್ಟರೆ ಅವರ ಯಾವ ಲೇಖವೂ ನಾಲ್ಕು ಪುಟಗಳನ್ನು ಮೀರಿದಂತಿಲ್ಲ! ಅದರಂತೆ ಅವರ 'ಪುಸ್ತಕ'ವಾವುದೂ ಮೂವತ್ತರ ಪುಟ ಸಂಖ್ಯೆಯನ್ನು ದಾಟಿಲ್ಲ. ಆಂಗ್ಲಾನುವಾದದ ಕವಿತೆಗಳನ್ನು ಬಿಡಿಬಿಡಿಯಾಗಿ ಮೊದಲು ಪ್ರಕಟಿಸಿ, ಅನಂತರ ಸಂಕಲನವಾಗಿ 'ಆಂಗ್ಲಕವಿತಾ'ವಳಿಯನ್ನು ಹೊರಹಾಕಿದರು. ಅಬ್ಬಾ, ಅದರ ಮುದ್ರಣ ವಿನ್ಯಾಸವೊ! ಅದರ ಒಂದು ಪುಟವನ್ನೂ ಸರಾಗವಾಗಿ ಓದಲಾಗದಷ್ಟು ಒತ್ತಾಗಿ ಜಡಿದು ಮುದ್ರಿಸಲಾಗಿದೆ (೧೯೧೯).

ಆದರೆ ಅದೇ ವರ್ಷ ಪ್ರಕಟವಾದ 'ಕನ್ನಡ ಕಥಾನಕ'ವು ಚೆನ್ನಾಗಿ ಮುದ್ರಣಗೊಂಡಿದೆ. 'ಕಥಾನಕ' ಎಂಬ ಶಬ್ದವಿದ್ದರೂ ಅದರ ವಿಷಯ ಕನ್ನಡ ಭಾಷೆ ಮತ್ತು ಅದರ ಶಬ್ದಗಳ ವ್ಯುತ್ಪತ್ತಿಯನ್ನು ಕುರಿತು ಇದೆ.

ಕನ್ನಡದಷ್ಟೇ ಅವರ ಮನಕ್ಕೆ ಒಪ್ಪಿದ ಭಾಷೆ, ಕೊಂಕಣಿ. ಎಷ್ಟೆಂದರೂ ಕೊಂಕಣಿ ಅವರ ತಾಯ್ನುಡಿ. ಕೊಂಕಣಿಯಲ್ಲಿಯೇ ಸಂಭಾಷಿಸಬೇಕು. ಬರೆಯಬೇಕು, ಬೇರಾವ ಭಾಷೆಯ ಶಬ್ದವನ್ನು ಸೇರಿಸದೆಯೂ ಕೊಂಕಣಿಯಲ್ಲಿ ಭಾಷಣವನ್ನು ಕೂಡಾ ಮಾಡಬಹುದು. ಈ ಉಪಕ್ರಮಗಳಿಂದ 'ನಮ್ಮ ಭಾಷೆ ಬೆಳೆಯುತ್ತದೆ; ಬೆಳೆಸಬೇಕು ಎಂಬುದು ಅವರ ಮಹದಾಸೆಯಾಗಿತ್ತು. ಆ ದೃಷ್ಟಿಯಿಂದ 'ಕೊಂಕಣಿ ಚೊ ಮೂಲಾದರ್ಶು' ಎಂಬ ಎರಡು ಭಾಗಗಳ ಪುಸ್ತಕವನ್ನು ಪ್ರಕಟಿಸಿದರು. (ಭಾಗ ೧. ೨೦ ಪುಟದ್ದು ೧೯೧೭ರಲ್ಲಿ. ಭಾಗ ೨. ೧೦ ಪುಟದ್ದು ೧೯೧೯ರಲ್ಲಿ) ಎರಡೂ ಸೇರಿ ಮೂರಾಣೆಗೆ ಲಭ್ಯ. ಆ ಮೌಲ್ಯ ಎಷ್ಟೇ ಇರಲಿ- ಅವುಗಳ ಮಾರಾಟದಿಂದ ಬರುವ ಹಣದ ವಿತರಣೆಯ ಬಗ್ಗೆ ಒಂದು ಪ್ರಕಟಣೆ ಬಂದಿತು.

'ಇದರ ಮಾರಾಟದಿಂದ ಹುಟ್ಟಿಬರುವ ಹಣವನ್ನು ಮಂಗಳೂರಿನ ನಿರಾಶ್ರಿತ ಜನಸಹಾಯಕ ಸಂಘಕ್ಕೆ ದಾನವಾಗಿ (ಲೇಖಕರು) ಕೊಟ್ಟಿರುವರು. ಆ ಸಂಘದ ಸೆಕ್ರೆಟರಿಗಳವರಾದ ಮ(ರಾ) ಕಾರ್ನಾಡ ಸದಾಶಿವರಾವ, ಕುದ್ಮಲ ರಂಗರಾವ್ ಮತ್ತು ಮಂಗಳೂರು ಕೋರ್ಟುಗುಡ್ಡೆಯ ಪಂಚಮಶಾಲೆಯ ಮೆನೇಜರ್ ಕೆ. ಮಾಧವನವರ - ಇವರಿಂದ ಈ ಪುಸ್ತಕವನ್ನು ಕೊಳ್ಳಬಹುದು.'

ಮೇಲೆ ಕಾಣಿಸಿದ ಮೂವರು ವ್ಯಕ್ತಿಗಳು ಆ ಕಾಲಕ್ಕೆ ಮಂಗಳೂರಿನಲ್ಲಿ ಅತ್ಯಂತ ನಿಷ್ಠೆಯಿಂದ, ಸಾಮಾಜಿಕ ಸೇವೆಯಲ್ಲಿ ತೊಡಗಿಕೊಂಡಿದ್ದವರು.

ಹಟ್ಟಿಯಂಗಡಿ ನಾರಾಯಣರಾಯರು ಪ್ರಕಟಿಸಿದ ಇನ್ನು ಮೂರು ಪುಸ್ತಕಗಳನ್ನು ಇಲ್ಲಿಯೇ ಪ್ರಸ್ತಾಪಿಸಬೇಕು. 'ಪ್ರಕಟಿಸಿದ' ಎಂದು ಹೇಳಿದ್ದರ ಕಾರಣವೆಂದರೆ, ಅವುಗಳಲ್ಲಿ ಪ್ರಕಾಶಕ ಎಂಬ ನಾತೆಯಿಂದ ಮಾತ್ರವೆ ತಮ್ಮ ಹೆಸರನ್ನು ಕಾಣಿಸಿದ್ದಾರೆ. ಮೋಜೆಂದರೆ ('ಇದೇ ಲೇಖಕರ 'ಕನ್ನಡದ ಕಥಾನಕ' ಮತ್ತು 'ಆಂಗ್ಲಕವಿತಾವಳಿ' ಮರಾಟಕ್ಕೆ ಲಭ್ಯ - ಎಂಬರ್ಥದ ಒಕ್ಕಣಿಕೆ ಒಂದರಲ್ಲಿದೆ!) ಈ ಕೃತಿಗಳೆಂದರೆ 'ಗಾಯತ್ರಿ' ಮತ್ತೊಂದು 'ಕನ್ನಡ ಕೃತಿಗಳು'; ಇನ್ನೊಂದು 'ಬ್ರಹ್ಮಗೀತ' ಅವರ ದಿನನಿತ್ಯದ ಉಪಾಸನೆಯ ಗಾಯತ್ರಿ ಮಂತ್ರದ ಮೂಲ ಹಾಗೂ ಇಂಗ್ಲೀಷ್ ಕನ್ನಡ ಅನುವಾದಗಳನ್ನು ಕೊಡಲಾಗಿದೆ. 'ಕನ್ನಡ ಕೃತಿಗಳು' ಇದರಲ್ಲಿ ಭಜನೆಯ ಹಾಡುಗಳಿವೆ. ೪೩ ಹಾಡುಗಳನ್ನು ಕೇವಲ ೧೬ ಪುಟದಲ್ಲಿ ಮುಗಿಸಿದ್ದಾರೆ. ಹೆಚ್ಚಿನ ಹಾಡುಗಳನ್ನು ದಾಸರ ಇಲ್ಲವೆ ಅಭಂಗಗಳ ಅನುವಾದ ಎಂದು ಗುರುತಿಸಬಹುದು. ಕೆಲವನ್ನು ಹ.ನಾ. ಅವರೇ ರಚಿಸಿರಲು ಸಾಕು. 'ಬ್ರಹ್ಮಗೀತೆ' ಬ್ರಹ್ಮಸಮಾಜದ ಅನುಯಾಯಿಗಳು ಹಾಡ ಬರುವಂತಹವು.

ಮೇಲಿನ ಪ್ರಕಟನೆಗಳಲ್ಲದೆ, ನಾರಾಯಣರಾಯರು ವಿಶೇಷ ಶ್ರದ್ಧೆಯಿಂದ ಕೈಕೊಂಡ ಪ್ರಕಟನೆಯೆಂದರೆ 'Tracks for Thinkers' ಎಂಬ ಮಾಲಿಕೆ, ಎಲ್ಲವೂ ಚಿಕ್ಕವು. Natures creed, Brahma vijnana 'ಸೂಕ್ತಸಾರ' 'ಅಭಂಗಮಾಲಿಕ' ಎಂಬ ಶೀರ್ಷಿಕೆಗಳ ಮೇಲಿಂದ ಅವುಗಳ ವಿಷಯದ ಕಲ್ಪನೆ ಬರಬಹುದು.

ಈ ಮಾಲಿಕೆಯಲ್ಲಿ The Faith of the Sages ಮತ್ತು The Faith of the Ages ಎಂಬ ಪುಸ್ತಕೆಗಳೂ ಇವೆ. ಮೊದಲನೆಯದು ಬೇರೆ ಬೇರೆಯವರ ಬುದ್ಧಿವಂತಿಕೆಯ ಸೂಕ್ತಿಗಳ ಸಂಕಲನ, ಆ ವಿವಿಧ ಉಕ್ತಿಗಳ ಆಕರಗಳನ್ನು V (ವೇದದಿಂದ) P (ವೇದೋತ್ತರ) E (ಪೌರ್ವಾತ್ಯ ಮುನಿಗಳಿಂದ) W (ಪಾಶ್ಚಾತ್ಯ ಸಾಧುಗಳಿಂದ) ಎಂಬುದಾಗಿ ಸೂಚಿಸಿದ್ದಾರೆ. ಈ ಸೂಕ್ತಿ ಸಮುಚ್ಚಯಗಳಲ್ಲಿ ಒಂದನ್ನು ಮಾದರಿಗಾಗಿ ಕೊಡುತ್ತಿದ್ದೇನೆ:

However mean your life is, meet it and live it - W. Enduarance is the highest test of character - W. Sadhu under suffering is like the sugar-cane, which does not lose its sweetness when it is crushed and its juice boiled. P. A. Sunny cheerful view of life is the true healthful poetry of existence - W.

ಪ್ರಾಮಾಣಿಕ ಹಾಗೂ ಪರಿಶುದ್ಧ ನಡವಳಿಕೆ ಹ.ನಾ. ಅವರ ಸ್ವಭಾವ ವಿಶೇಷತೆ ಎನ್ನಬಹುದು. ಅವರು ನ್ಯಾಯನಿಷ್ಠುರರಾದ್ದರಿಂದಲೇ ನ್ಯಾಯವಾದಿಯಾಗಿ ವಿಶೇಷ ಯಶಸ್ಸನ್ನು ಗಳಿಸಲಿಲ್ಲ. ಅದರಂತೆ ಯಾರನ್ನೆ ಆಗಲಿ ಟೀಕಿಸುವ ಅಥವಾ ಕಟುವಾಗಿ ವಿರೋಧಿಸುವ ಜಾಯಮಾನ ಅವರದಲ್ಲ. ಅಂಥ ಸನ್ನಿವೇಶ ಬಂದೊದಗಿದರೆ ತಾವು ಮುದುಡಿಕೊಂಡು

ದೂರ ಉಳಿಯುತ್ತಿದ್ದರು. ಅವರಲ್ಲಿಯ ಇನ್ನೊಂದು ಗುಣ ಸಹಾಯ ತತ್ಪರತೆ ಅದೂ ಸದ್ದುಗದ್ದಲವಿಲ್ಲದೆ. ಅವರಿಂದ ಸಹಾಯವನ್ನು ಯಾಚಿಸಿ ಬಡ ವಿದ್ಯಾರ್ಥಿಗಳು, ಸಂಸಾರಿಗರು ಬರುತ್ತಲೇ, ಇದ್ದರಂತೆ, ಯಾರನ್ನೂ ಅವರು ಬರಿಗೈಯಿಂದ ಹಿಂತಿರುಗಿಸಿದವರಲ್ಲ. ಯಾವುದೇ ನಡೆ, ನುಡಿ ಇರಲಿ ಸರಳತನ ಸಂಯಮ ಹಾಗೂ ಅನುಕಂಪ ಇವು ಯಾವ ಕಾಲಕ್ಕೂ ಮಸಕಾಗುತ್ತಿರಲಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಮನಸ್ಸು, ಮಾತು ಹಾಗೂ ಕೃತಿ ಈ ತ್ರಿಕರಣಶುದ್ಧಿಯ ಸಾಕಾರವಾಗಿದ್ದರು. ಮೌಲ್ಯಗಳ ಆರಾಧಕರಿದ್ದರು.

ತಮ್ಮ ಕಡೆಯ ದಿನಗಳಲ್ಲಿ ಅವರು ಕಿಟೆಲ್ ಕೋಶದ ಮಾದರಿಯಲ್ಲಿ ಇಂಗ್ಲಿಶ್ ಕನ್ನಡ ಕೋಶವೊಂದನ್ನು ಸಿದ್ಧಪಡಿಸಬೇಕು ಎಂಬ ಬಹು ದೊಡ್ಡ ಯೋಜನೆಯನ್ನು ಇರಿಸಿಕೊಂಡಿದ್ದರು. ಅದರ ಒಂದು ಉದ್ದೇಶ, ಇಂಗ್ಲಿಶಿನ ಅನೇಕ ಪದಗಳಿಗೆ ತತ್ಸಮಾನ ಕನ್ನಡ ಪದಗಳಿರುವುದಿಲ್ಲ. ಅವನ್ನು ಸೃಷ್ಟಿಸಬೇಕು ಎಂಬುದಾಗಿತ್ತು. ಆದರೆ ದಿ. ೧೭ ಜೂನ್ ೧೯೨೧ ರಂದು ತೀರಿಕೊಂಡರು. ಮಧುಮೇಹದ ಚಿಕಿತ್ಸೆಗಾಗಿ ಆಪರೇಶನ್ ಮಾಡಲಾಗಿತ್ತು ಆ ನಿಮಿತ್ತವಾಗಿ ತೀರಿಹೋದರೆಂದು ಒಂದೆಡೆ ಹೇಳಿದ್ದರೆ ಇನ್ನೊಂದೆಡೆ `ರಾಜಕುರುವಿನ ಕಾರಣದಿಂದ ಕೊನೆಯುಸಿರನ್ನೆಳೆದರೆಂದು ಹೇಳಲಾಗಿದೆ. ಮರಣಕಾಲಕ್ಕೆ ಅವರಿಗೆ ೫೮ ವರ್ಷ.

ಪತಿ-ಪತ್ನಿಯರಲ್ಲಿ ಅದಾವಾಗ ನಿರ್ಣಯವಾಗಿತ್ತೋ ತಿಳಿಯದು; ಅವರ ಮರಣಾನಂತರ ಅಂಬಾಬಾಯಿಯವರು - ಬಡ ಸಾರಸ್ವತ ವಿದ್ಯಾರ್ಥಿಗಳ ಫಂಡು, ಮಂಗಳೂರು; ನಿಮ್ನ ವರ್ಗದ ಮಿಶನ್, ಮಂಗಳೂರು; ಮಹಿಳಾ ವಿದ್ಯಾಲಯ, ಪುಣೆ (ಕರ್ವೆಯವರಿಂದ ಸ್ಥಾಪಿತವಾದದ್ದು); ಹಾಗೂ 'ಸೇವಾಸದನ' ಮುಂಬಯಿ - ಈ ನಾಲ್ಕೂ ಸಂಸ್ಥೆಗಳಿಗೆ ಸಮನಾಗಿ, ಒಟ್ಟಿಗೆ ೧೦ ಸಾವಿರ ರೂ.ಗಳನ್ನು ದಾನವಾಗಿ ಕೊಟ್ಟರು. ಹ.ನಾ. ಅವರು ತೀರಿಕೊಂಡ ಮೇಲೆ ಏಳು ವರ್ಷಗಳ ಕಾಲ ಅಂಬಾಬಾಯಿ ಬದುಕಿ ಇದ್ದರು.

ನಾರಾಯಣರಾಯರು ಬರೆದದ್ದು ತೀರ ಅಂದರೆ ತೀರ ಕಡಿಮೆ. ಆದರೆ ನವೋದಯ ಕಾವ್ಯದ ಹಾಗೂ ಕನ್ನಡ ಶಬ್ದ ಭಂಡಾರದ ಮೂಲವನ್ನು ಗುರುತಿಸುವಲ್ಲಿ ಮಾರ್ಗ ಪ್ರವರ್ತಕರೆನಿಸಿದರು.

ಅವರು ಬಾಳಿ ಬದುಕಿದ್ದುದು ಹೆಚ್ಚಾಗಿ ಹೊರನಾಡಿನಲ್ಲಿ; ಕನ್ನಡೇತರ ಪರಿಸರದಲ್ಲಿ ಆದಾಗ್ಯೂ ಕನ್ನಡದ ಬಗ್ಗೆ ಅತ್ಯಂತಿಕ ಅಭಿಮಾನವನ್ನು ಉಳಿಸಿಕೊಂಡು, ಅನನ್ಯ ರೀತಿಯಲ್ಲಿ ಶ್ರಮಿಸಿದುದು ಮೆಚ್ಚತಕ್ಕದ್ದಾಗಿದೆ.



# ೪ ಹಟ್ಟಿಯಂಗಡಿ ನಾರಾಯಣರ ಕೃತಿಪರಿಚಯ

ಹಟ್ಟಿಯಂಗಡಿ ನಾರಾಯಣರಾಯರು ಹೆಚ್ಚಾಗಿ ಬರೆದದ್ದು ಪತ್ರಿಕಾ ಲೇಖನಗಳನ್ನು Indian Spectator ಮುಂತಾದ ಇಂಗ್ಲೀಷ್ ಪತ್ರಿಕೆಗಳಲ್ಲಿ ಬರೆದ ಆ ಲೇಖನಗಳು 'ದುರ್ಲಭ' ಆಗಿರುವುದು ಬೇಸರದ ಸಂಗತಿ. ಅವುಗಳಿಂದ ಅವರ ವಿದ್ವತ್ತು ಹಾಗೂ ತದನುಗುಣವಾದ ವ್ಯಾಸಂಗ ಇವುಗಳ ಕಲ್ಪನೆ ಬರುತ್ತಿತ್ತು.

ಕನ್ನಡದಲ್ಲಿ ಅವರು ಹೆಚ್ಚಾಗಿ ಬರೆದದ್ದು ಕನ್ನಡ ಭಾಷೆ ಮತ್ತು ಹೊಸಗನ್ನಡ ಕವಿತೆಯ ಛಂದಸ್ಸನ್ನು ಕುರಿತು. ಜೊತೆಗೆ ಇಂಗ್ಲಿಶ್‌ನಿಂದ ಅನುವಾದಿಸಿದ ಕವಿತೆಗಳು. ಈ ಪಟ್ಟಿಗೆ ಅವರು ಮಾಡಿದ ಕೊಂಕಣಿ ಭಾಷೆಯ ವಿವೇಚನೆ ಹಾಗೂ ಕೆಲವು ತಾತ್ವಿಕ ಚಿಂತನೆಗಳನ್ನು ಸೇರಿಸಬೇಕು. ಅಂತೂ ಅವರ ಲೇಖನಿಯಿಂದ ಹರಿದು ಬಂದ ರಚನೆ ಅತ್ಯಲ್ಪ; ಅವರ ಅಧ್ಯಯನಕ್ಕೆ ಹೋಲಿಸಿದರೆ.

ಕನ್ನಡ ಭಾಷೆಯನ್ನು ವಿವೇಚಿಸಿದ 'ಅವರ ಕನ್ನಡ ಕಥಾನಕ' ಕೇವಲ ೩೦ ಪುಟಗಳದ್ದು. ಅದರಲ್ಲಿ ಅವರು ಹಳಗನ್ನಡದ ಕಾವ್ಯಗಳನ್ನು ಭಾಷಾಭೂಷಣ ಮುಂತಾದ ಶಾಸ್ತ್ರಗ್ರಂಥಗಳನ್ನು ಅದರಂತೆ ಪ್ರಾಕೃತದವನ್ನೂ ಅದೆಷ್ಟರ ಮಟ್ಟಿಗೆ ಕರಗತ ಮಾಡಿಕೊಂಡಿದ್ದರೆಂಬುದು ವೇದ್ಯವಾಗುತ್ತದೆ. 'ಕಥಾನಕ'ದಲ್ಲಿ ೩ ಪರಿಚ್ಛೇದಗಳಿವೆ. ಸುರುವಿಗೆ ದೇಶೀಯ ಶಬ್ದಗಳು - ಯಾವ ಬಗೆಯವು ಎಂಬುದರ ವಿವೇಚನೆ ಇದೆ. 'ದೇಶೀಯ' ಎಂದರೆ ಸಂಸ್ಕೃತ ಕಾವ್ಯಗಳಲ್ಲಿ ಪ್ರಸಿದ್ಧವಾಗಿರದೆ ಕೆಲವು ಪ್ರದೇಶಗಳಲ್ಲಿ ಮಾತ್ರ ಸಲ್ಲುವ ಶಬ್ದಗಳು; ಹಾಗೆಂದು ಆ ಎಲ್ಲ ಪ್ರದೇಶಗಳಲ್ಲಿ ಒಂದೇ ರೀತಿಯಲ್ಲಿ ಪ್ರಚಲಿತವಲ್ಲವಾದ್ದರಿಂದ ಅವಕ್ಕೆ ದೇಶೀಯ ಎಂಬ ಹೆಸರು ಪ್ರಾಪ್ತವಾಯಿತು. ಇದು ವಿನೂತನ ವ್ಯಾಖ್ಯೆಯಾಗಿದ್ದು, ತಮ್ಮ ಈ ಮಾತಿಗೆ ಸಾಕಷ್ಟು ಉದಾಹರಣೆಗಳನ್ನು ಕನ್ನಡದಿಂದಲ್ಲದೆ ಪ್ರಾಕೃತ, ಮರಾಠಿ, ಕೊಂಕಣಿಗಳಿಂದಲೂ ಆಯ್ದುಕೊಂಡಿದ್ದಾರೆ.

ಇತ್ತ ಕನ್ನಡದಲ್ಲಿ ಮೂಲ ರೂಪದ ಶಬ್ದಗಳು ಇವೆಯಷ್ಟೆ. ಅವನ್ನು 'ಹುಟ್ಟುಗನ್ನಡ' ಶಬ್ದಗಳೆಂದು ವಿಶೇಷಿಸಿದ್ದಾರೆ. ಕೇಶಿರಾಜನ ಧಾತುಪಾಠದಲ್ಲಿ ಇಂಥ ಕೆಲವು ಶಬ್ದಗಳು ಬಿಟ್ಟುಹೋದದ್ದನ್ನು ತೋರಿಸಿದ್ದಾರೆ. ಅಲ್ಲದೆ ಪೂರ್ವ ಕವಿಗಳು ಬರ್ದಿಲ, ಬಿಡುಗಂಣ

ಮುಂತಾಗಿ ಹುಟ್ಟುಗನ್ನಡದ ಕೂಡುನುಡಿಗಳನ್ನೂ ಮಾಡಿಕೊಂಡಿದ್ದರು. ಈಗ ಇಂಥ ಅಚ್ಚಗನ್ನಡದ ಬೆಳವಣಿಗೆಯೇ ನಿಂತು ಹೋಗಿದೆಯೆಂದು ವಿಷಾದಿಸಿದ್ದಾರೆ. ಬಾಸೆಲ್ ಮಿಶನರಿಯಾದ ಮೊವ್‌ಗ್ಲಿಂಗ್ ಜನಬಳಕೆಯ ೧೫೦೦ ಗಾದೆಮಾತುಗಳನ್ನು ಸಂಗ್ರಹಿಸಿದ್ದು, ಮೊದಲಿನ ೫೦ ಗಾದೆಗಳನ್ನು ಪರೀಕ್ಷಿಸಿದರೆ ಅವುಗಳಲ್ಲಿ ಸುಮಾರು ೬೦ ತತ್ಸಮ-ತದ್ಭವಗಳಿದ್ದರೆ ೧೨೦ ಹುಟ್ಟುಗನ್ನಡ ನುಡಿಗಳು ಸಿಗುತ್ತವೆ - ಎಂದಿದ್ದಾರೆ.

## ಕನ್ನಡ ತದ್ಭವಗಳು

ಕನ್ನಡದಲ್ಲಿರುವ ತದ್ಭವಗಳನ್ನೆಲ್ಲ ಕನ್ನಡಿಗರೇ ನಿರ್ಮಿಸಿಕೊಳ್ಳಲಿಲ್ಲ. ಪ್ರಾಕೃತದಿಂದ ಬಂದವುಗಳು, ಇಲ್ಲವೆ ಪ್ರಾಕೃತ, ಕನ್ನಡ ಎರಡರಲ್ಲಿಯೂ ಸಮಾನವಾಗಿ ಇರುವಂತಹವುಗಳು, ನಮ್ಮ 'ತದ್ಭವ'ದ ಪರಿಕಲ್ಪನೆಯಲ್ಲಿ ಒಳಗೊಂಡಿವೆ - ಎನ್ನುವ ಮಾತನ್ನು ಪ್ರಥಮತಃ (೧೯೧೯) ತೋರಿಸಿಕೊಟ್ಟಿದ್ದಾರೆ. ಈ ಪ್ರಾಕೃತದ ವರ್ಚಸ್ಸು ಬರಲು ಒಂದು ಕಾರಣವೆಂದರೆ ಜೈನಗುರುಗಳು ಪ್ರಾಕೃತ ಗ್ರಂಥಗಳನ್ನು ಬೋಧಿಸುತ್ತಿದ್ದು, ಪ್ರಾಕೃತ ಗ್ರಂಥ ಪಠಣವು ನಿಯಮಿತ ವ್ಯಾಸಂಗದ್ದೇ ಆಗಿದ್ದಿತು. ಕೇಶಿರಾಜನು ಅಪಭ್ರಂಶ ಪ್ರಕರಣದಲ್ಲಿ ಬರೆದ ಸೂತ್ರಗಳು ಪ್ರಾಕೃತ ವ್ಯಾಕರಣಗಳಿಂದ ತೆಗೆದು ಕನ್ನಡಕ್ಕೆ ಸರಿಪಡಿಸಿಕೊಂಡವುಗಳೇ.

ಮುಂದಿನ ಪರಿಚ್ಛೇದಗಳಲ್ಲಿ ಶಿಷ್ಟ ಭಾಷೆ ಮತ್ತು ಗ್ರಾಮ್ಯ ಭಾಷೆ- ಈ ವಿಚಾರವನ್ನು ಎತ್ತಿಕೊಂಡು ಹಿಂದಿನ ಶಿಷ್ಟಭಾಷೆಯಲ್ಲಿಲ್ಲದ ಕೆಲ ಪ್ರಯೋಗಗಳನ್ನು ಆಗಿನ ವೈಯಾಕರಣರು ತ್ಯಾಜ್ಯವೆಂದು ಹೇಳಿದರೂ ಇಂದು ಅವೇ ಶಿಷ್ಟಭಾಷೆಯ ಪ್ರಯೋಗಗಳಾಗಿವೆ: ಹೀಗೆ ಹೇಳಿ ಉದಾಹರಣೆ ಕೊಟ್ಟಿದ್ದಾರೆ. ಆ ಮುಂದೆ ದಕ್ಷಿಣೋತ್ತರ ಮಾರ್ಗಗಳ ವಿವೇಚನೆ ಮಾಡುತ್ತ ಅದರ ಹಿನ್ನೆಲೆಯನ್ನೂ ಬೆಳವಣಿಗೆಯನ್ನು ಕಾವ್ಯ, ಶಾಸನ ಎರಡರಲ್ಲಿಯೂ ಈ ಮಾರ್ಗಗಳು ಹೇಗೆ ರೂಪುಗೊಂಡಿವೆ ಎಂಬುದನ್ನೂ ಸೋದಾಹರಣ ವಿವರಿಸಿದ್ದಾರೆ.

ಕನ್ನಡ ಭಾಷೆ ಹಳಗನ್ನಡದಿಂದ ಹೊಸಗನ್ನಡಕ್ಕೆ ತಿರುಗುವಾಗಿನ ಬದಲಾವಣೆಗಳನ್ನು (ಬಿಂದು ಲೋಪ, ಪದಿಂದ ಹ ಮುಂ.,) ಈ ಮುಂಚೆ ಆರ್. ರಘುನಾಥರಾಯರೂ ಕಿಟೆಲ್ಲರೂ ವಿವರಿಸಿದ್ದಾರೆ. ಹ. ನಾ. ಅವರು ತಮ್ಮದೇ ಆದ ರೀತಿಯಲ್ಲಿ ಈ ವಿಷಯವನ್ನು ಮಂಡಿಸಿದ್ದಾರೆ. ಮತ್ತು ಇದು ಕಟ್ಟುನಿಟ್ಟಾದ ನಿಯಮವಾಗಿ ಇಲ್ಲ ಎಂದು ಸ್ಪಷ್ಟಪಡಿಸಿದ್ದಾರೆ. ಭಾಷೆಯ ವಿಷಯದಲ್ಲಿ ಪ್ರಾಸಂಗಿಕವಾಗಿ ಹೇಳಿದ ಒಂದು ಹಿತೋಕ್ತಿ ಎಂದರೆ ಭಾಷಾ ಚರಿತ್ರೆಯಲ್ಲಿ ಕಾಲ ವಿಭಾಗ ಮಾಡುವುದು ಬೇಡ.

ಅಲ್ಲಿಂದ ಹಳೆಯ ಛಂದಸ್ಸನ್ನು ಎಷ್ಟರಮಟ್ಟಿಗೆ ಹೊಸತನಕ್ಕೆ ತೆರೆಯಬೇಕು - ಎಂಬುದನ್ನು ಪ್ರಸ್ತಾಪಿಸಿ ಈ ರೀತಿ ಉಪಸಂಹಾರ ಮಾಡಿದ್ದಾರೆ.

> "ಛಂದಸ್ಸಿನಲ್ಲಿ ಕವಿಗಳಿಗೆ ಸ್ವಾತಂತ್ರವಿರಬೇಕು. ಹಿಂದಿನವರೂ ಹಾಗೆ ಮಾಡಿಯೇ ಇದ್ದಾರೆ. ಗಣನಿಯಮಗಳನ್ನುಲ್ಲಂಘಿಸಿ ಕಂದಪದ್ಯಗಳನ್ನು ಬರೆದ ಸೂರ್ಯಕವಿ ತಿಳಿಗೇಡಿಯಾಗಿರಲಿಲ್ಲ. ಪಾಂಡಿತ್ಯಕ್ಕಿಂತ ಉಪಯೋಗಿತೆಯನ್ನು ಹೆಚ್ಚಾಗಿ ಪ್ರೀತಿಸುವವರು

ಪೂರ್ವದಲ್ಲಿಯೂ ಇದ್ದರು, ಈಗಲೂ ಇದ್ದಾರೆ. ಇನ್ನು ಮುಂದೆ ಅವರ ಸಂಖ್ಯೆ ಬೆಳೆಯಬೇಕೆ? ಆಗ ಆಂಗ್ಲಭಾಷೆಯ ಅಪಭ್ರಂಶಗಳು ಎಷ್ಟು ಪ್ರವೇಶಿಸುತ್ತವೋ - ಗುಡ್ನೆಸ್ಸೇ ಬಲ್ಲುದು."

ಹೀಗೆ ಹಳೆಯ ಛಂದಸ್ಸಿನಲ್ಲಿ ಅಲ್ಲಲ್ಲಿ ಮಾರ್ಪಾಟು ಮಾಡಿಕೊಂಡು ಹೊಸ ವಿಚಾರದ ಪದ್ಯಗಳನ್ನು ಹೇಳಬಹುದೆಂಬ ವಿಚಾರವನ್ನು ತಮ್ಮ ಬಿಡಿ ಲೇಖನಗಳಲ್ಲಿಯೂ ಹೇಳಿದ್ದಾರೆ. ತಾವು ಸ್ವತಃ 'ಆಂಗ್ಲ ಕವಿತಾವಳಿ'ಯಲ್ಲಿ ತಾಳಕ್ಕೆ ಸರಿಯಾಗಿ ನಿಲ್ಲುವ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಬಂದ ಅವೆಲ್ಲ ಕಿರು ಲೇಖನಗಳನ್ನು ಇಲ್ಲಿ ಪಟ್ಟಿಮಾಡಬಹುದು:

| | |
|---|---|
| ಕವಿತಾವರ್ಧನ | ಕ.ಸಾ.ಪ ಜನವರಿ ೧೯೧೯. ಪು. ೨೨-೨೮ |
| ಛಂದೋವಿಚಾರದ ಟಿಪ್ಪಣಿಗಳು | ಕ. ಸಾ. ಪ. ೫-೧ ಪು. ೩೫ |
| ಪದ್ಯರಚನೆ | ಕ. ಸಾ. ಪ. ೫-೧. ಪು. ೫೪ |
| ದಕ್ಷಿಣೋತ್ತರ ಮಾರ್ಗಗಳು | ಕ. ಸಾ. ಪ. ೩ ಪು. ೧೦೧ |
| 'ನಮ್ಮ' (ಶಬ್ದದ) ಪಕ್ಷಪಾತಿಗಳು | ಕ. ಸಾ. ಪ. ೩. |
| ಕರ್ಣಾಟಕ ಧಾತುಗಳು | ಕ. ಸಾ. ಪ. ೧-೩ |

'ಅಜ್ಞಾತ ತದ್ಭವಗಳು' ಎಂಬ ಅವರ ಸವಿವರ ಲೇಖ - (ಕ.ಸಾ.ಪ. ಸಂ. ೨ ಪು. ೬೬ ಮತ್ತು ೧೨೮) ಇದನ್ನು ಪ್ರತ್ಯೇಕವಾಗಿ ಹೆಸರಿಸಬೇಕು.

ಕಿಟೆಲ್ಲರು ತಮ್ಮ ನಿಘಂಟುವಿನಲ್ಲಿ ಅಚ್ಚಗನ್ನಡ ಶಬ್ದಗಳೆಂದು ಅನೇಕ ಶಬ್ದಗಳನ್ನು ಗುರುತಿಸಿದ್ದಾರೆ. ಆದರೆ ಅವುಗಳಲ್ಲಿ ಎಷ್ಟೋ ತದ್ಭವಗಳೇ. ಅಜ್ಞಾತ ತದ್ಭವಗಳವು. ಹೀಗಾಗಿ ಅಚ್ಚಗನ್ನಡದ ವೇಷವನ್ನು ಧರಿಸಿದ ಕಳ್ಳನುಡಿಗಳು ಅವರನ್ನು ಮೋಸಗೊಳಿಸಿವೆಯಂತೆ. ಉದಾಹರಣೆಯಾಗಿ ಬಡ್ಡು (ಮೂಲ: ಅವಧಾ), ಒಪ್ಪಿಸು (ಅರ್ಪಣ) ಇವನ್ನು ಕೊಟ್ಟಿದ್ದಾರೆ. ಮುಂದುವರಿದು, ಸುಮಾರು ೭೫ + ೧೦೦ ಶಬ್ದಗಳನ್ನು ಅವುಗಳ ಮೂಲದೊಡನೆ ಕೊಟ್ಟಿದ್ದಾರೆ. ಅವಶ್ಯವಾಗಿ ಗಮನಿಸಬೇಕಾದ ಮಾತೆಂದರೆ ಇವು ನೇರವಾಗಿ ಸಂಸ್ಕೃತದಿಂದ ಬಂದವುಗಳಲ್ಲ. ಸಂಸ್ಕೃತದಿಂದ ಪ್ರಾಕೃತ, ಆಮೇಲೆ ಕನ್ನಡಕ್ಕೆ. ಯಾವ ಅಂಶವನ್ನು ಹಳಗನ್ನಡ ವೈಯಾಕರಣಿಗಳು ಸ್ಪಷ್ಟವಾಗಿ ಗುರುತಿಸಲಾಗಲಿಲ್ಲವೊ ಆ ಪ್ರಾಕೃತ ಪ್ರಭಾವವನ್ನು ಮೊದಲ ಬಾರಿಗೆ ಕೂಲಂಕುಷವಾಗಿ ಹ. ನಾ. ತೋರಿಸಿದ್ದಾರೆ. ಕನ್ನಡ ಭಾಷಾ ಶಾಸ್ತ್ರಕ್ಕೆ ಇದೊಂದು ಮೌಲಿಕ ಕೊಡುಗೆ.

ಕೊಂಕಣಿ ಭಾಷೆ ಹ. ನಾ. ಅವರ ತಾಯ್ನುಡಿ. ಆ ಭಾಷೆಯನ್ನು ಕುರಿತು 'ಕೊಂಕಣಿಚೇ ಮೂಲಾದರ್ಶೂ' ಎಂಬ ಪುಸ್ತಕ ಬರೆದು ಪ್ರಕಟಿಸಿದ್ದಾರೆ. ಆ ಭಾಷೆಯನ್ನು ಹೇಗೆ ಬೆಳೆಯಿಸಬೇಕು ಎನ್ನುವ ಬಗ್ಗೆ ಮಂಗಳೂರಿನ 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ ಲೇಖನಗಳನ್ನು ಬರೆದಿದ್ದಾರೆ. (೧೯೧೭)

## ಆಂಗ್ಲ ಕವಿತಾವಳಿ

ಹಟ್ಟಿಯಂಗಡಿ ನಾರಾಯಣರಾಯರು ಶೇಕ್ಸಪಿಯರ್‌ನಿಂದ ಹಿಡಿದು ಲಾಂಗ್‌ಫೆಲೊ ವರೆಗಿನ ಕವಿಗಳ ಪದ್ಯಗಳನ್ನು ಅನುವಾದಿಸಿ ೧೯೧೭ರಿಂದ ಪತ್ರಿಕೆಗಳಲ್ಲಿ ಪ್ರಕಟಿಸತೊಡಗಿದರು. ಆ ಎಲ್ಲ ಅನುವಾದಗಳನ್ನು ಸಂಕಲಿಸಿ (ಒಟ್ಟಿಗೆ ೧೫) 'ಆಂಗ್ಲಕವಿತಾವಳಿ' ಹೆಸರಿನಲ್ಲಿ ಪ್ರಕಟಿಸಿದರು.

"ಆಂಗ್ಲ ಕವಿತಾವಳಿ'ಯನ್ನು ಎನ್. ವಿ. ಪಂಡಿತಾರಾಧ್ಯರು ಇಂಗ್ಲಿಶ್ ಮೂಲದೊಡನೆ ೧೯೮೫ರಲ್ಲಿ ಪ್ರಕಟಿಸಿದ್ದಾರೆ.

ಆಂಗ್ಲ ಕವಿತೆಗಳನ್ನು ಕನ್ನಡಕ್ಕೆ ತರಬೇಕೆಂದು ಈ ಶತಮಾನದ ಆರಂಭಕಾಲದಲ್ಲಿ ಪ್ರಯತ್ನಿಸಿದ ಮೂವರಲ್ಲಿ ಹ. ನಾ. ಒಬ್ಬರು (ಇನ್ನಿಬ್ಬರು ಎಸ್. ಜಿ. ನರಸಿಂಹಾಚಾರ್, ಬಿ. ಎಂ. ಶ್ರೀಕಂಠಯ್ಯ) ಆ ಕಾರಣದಿಂದ ಈ ಕೃತಿಯನ್ನೂ, ಹ. ನಾ. ಅವರನ್ನೂ ಹೊಸಗನ್ನಡ ಸಾಹಿತ್ಯದ ಚರಿತ್ರಕಾರರು ತಪ್ಪದೇ ಉಲ್ಲೇಖಿಸುತ್ತಾರೆ..

ಹೀಗೆ ಉಲ್ಲೇಖಿಸಲಾದ ಇನ್ನೊಂದು ಅಂಶವೆಂದರೆ ಹ. ನಾ. ಅವರು ಹೊಸಗನ್ನಡ ಕವಿತೆ ಹೇಗೆ ರೂಪುಗೊಳ್ಳಬೇಕೆಂದು ಅವರು ವಿವೇಚಿಸಿದ 'ಕನ್ನಡ ಕವಿತೆಯ ಭವಿತವ್ಯ' 'ಕವಿತಾವರ್ಧನ' (ಕ. ಸಾ. ಪ. ಜನವರಿ ೧೯೯೯) ಮತ್ತು 'ಹೊಸಗನ್ನಡ ಕಾವ್ಯಗಳು' (ಸ್ವದೇಶಾಭಿಮಾನಿ ೧೧-೭-೧೯೧೯) ಎಂಬ ಲೇಖನಗಳು. ವಿಶೇಷತಃ 'ಕನ್ನಡ ಕವಿತೆಯ ಭವಿತವ್ಯದ ಬಗೆಗೆ ಇರುವುದನ್ನು, ೧೯೧೮ರಲ್ಲಿ ನೆರೆದ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಓದಲೆಂದು ಸಿದ್ಧಪಡಿಸಿದ್ದರು. ಅದರಲ್ಲಿ ಮಂಡಿತವಾದ ವಿಚಾರಗಳನ್ನು ಕ.ಸಾ.ಪ.ದ ಜುಲೈ ೧೯೧೮ರ ಸಂಚಿಕೆಯಲ್ಲಿ ಈ ರೀತಿ ಕೊಡಲಾದದ್ದನ್ನು ಇಲ್ಲಿ ಪುನರುಚ್ಚರಿಸತಕ್ಕುದು:

- ಇನ್ನು ಮುಂದೆ ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನ.
- ದೀರ್ಘ ಪುರಾಣಗಳ ಬದಲಾಗಿ ಲಘುಕೃತಿಗಳಿಗೆ ಗಮನ.
- ಛಂದಸ್ಸಿನಲ್ಲಿ ಹೊಸ ಮಾದರಿಗಳ ಅನುಷ್ಠಾನ.
- ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್‌ಶಕ್ತಿ ಹಾಗೂ ಮಾನಸಿಕ ಭಾವಗಳಿಗೆ ಮೂರ್ತಿತ್ವ.

ಹ.ನಾ. ಅವರು ಒಂದು ರೀತಿಯಲ್ಲಿ ಹೊಸಗನ್ನಡ ಕವಿತೆಯ ದ್ರಷ್ಟಾರವಾಗಿ ಹೇಳಿದ ಈ ಮಾತುಗಳು ಇಂದಿಗೂ ಮನನೀಯವಾಗಿವೆ.



---

ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ಪ್ರಕಟಿಸಿದ ಇವರ 'ವಾಚಿಕೆ'ಯಲ್ಲಿ ಇವೆಲ್ಲ ಕೃತಿಗಳನ್ನು ಕೊಟ್ಟಿದ್ದೇನೆ.

# ೫ ಪೇಜಾವರ ಸದಾಶಿವರಾಯರು

ಸುಮಾರು ೬೦ ವರ್ಷಗಳಷ್ಟು ಹಿಂದೆಯೇ ಮೊದಲ ನವ್ಯಕವಿತೆಯನ್ನು ರಚಿಸಿದವರು; ಲವಲವಿಕೆಯಿಂದ ಕೂಡಿರುವ ಸಣ್ಣ ಕತೆಗಳನ್ನು ಬರೆದವರು; ದುಃಖಾಂತ ನಾಟಕ ರಚಯಿತರು; ದೂರದ ಇಟಲಿಗೆ ಹೋಗಿ, ತರುಣ ವಯದಲ್ಲಿಯೇ ಪ್ರಾಣ ತೆತ್ತವರು. ಹೊಸಗನ್ನಡ ಸಾಹಿತ್ಯ ಲೋಕದಲ್ಲಿ ಒಂಟಿ ನಕ್ಷತ್ರದಂತೆ ವಿರಾಜಮಾನರಾದವರು; ಅವರೇ ಪೇಜಾವರ ಸದಾಶಿವರಾಯರು.

ಪೇಜಾವರ ಶಾಮರಾಯರದು ಮೂಲತಃ ಕೃಷಿಕ ಮನೆತನ. ನೆಲಸಿದ್ದು ಕಟೀಲಿನಲ್ಲಿ. ಅವರ ಹತ್ತು ಜನ ಮಕ್ಕಳಲ್ಲಿ ಸದಾಶಿವರೇ ಹಿರಿಯ ಗಂಡು ಮಗ. (ಜನನ ೧೦ ಮಾರ್ಚ್ ೧೯೧೩) ಎರಡನೆಯವರು ವಾಸುದೇವ. ಅವರಿಬ್ಬರಲ್ಲಿ ಅನ್ಯೋನ್ಯವಾದ ಒಡನಾಟ. ಇಬ್ಬರೂ ಕೂಡಿ ಕಟೀಲಿನ ಚಿಕ್ಕ ಹೊಳೆಯನ್ನು ದಾಟಿ ಎಕ್ಕಾರಿನ ಮಿಡಲ್ ಸ್ಕೂಲಿಗೆ ಹೋಗಬೇಕು. ಅವರ ತಾಯಿಯು "ನಾಲ್ಕುವರೆ ಗಂಟೆಗೇ ಶಾಲೆ ಮುಗಿಯುತ್ತದೆ. ಮಕ್ಕಳು ಇನ್ನೂ ಹಿಂತಿರುಗಿಲ್ಲವಲ್ಲ. ನಡುವೆ ಹೊಳೆಯನ್ನೂ ಬೇರೆ ದಾಟಬೇಕು" ಎಂದೆಲ್ಲ ಚಿಂತಿಸುತ್ತ ಇದ್ದಾಗ, ಇವರಿಬ್ಬರೂ ದಾರಿಯಲ್ಲಿ ಆ ಈ ಮರಗಳನ್ನು ಹತ್ತಿ ಜಿಗಿದಾಡಿ ಮನೆಗೆ ಬರಬೇಕು.

ಕೆನರಾ ಜಿಲ್ಲೆಗಳಲ್ಲಿ ಜನ್ಮ ತಾಳಿದವರಿಗೆಲ್ಲ ಸಹಜವಾದ ಯಕ್ಷಗಾನದ ಪ್ರೀತಿ ಬಾಲಕ ಸದಾಶಿವನಲ್ಲಿಯೂ ಓತಪ್ರೋತವಾಗಿದ್ದಿತು. ನಿದ್ದೆಯ ಪರಿವೆಯಿಲ್ಲದೆ ಹಾಜರಾಗಿ ನೋಡುತ್ತಲಿದ್ದ. ಒಂದು ರಾತ್ರಿ ಕಟೀಲು ಮತ್ತು ನೆರೆಯ ಬಪ್ಪನಾಡು - ಎರಡೂ ಕಡೆಗಳಲ್ಲಿ ಯಕ್ಷಗಾನ ಆಟಗಳಿದ್ದಾಗ, ಅರ್ಧರಾತ್ರಿ ಇಲ್ಲಿ, ಅರ್ಧರಾತ್ರಿ ಅಲ್ಲಿಗೆ ಹೋಗಿ ಆಟಗಳನ್ನು ನೋಡಿ ಬಂದುದಂತೆ!

ಸದಾಶಿವರ ಹೈಸ್ಕೂಲ್ ಶಿಕ್ಷಣ ಮೂಲ್ಕಿಯಲ್ಲಿ, ಕಾಲೇಜು ಶಿಕ್ಷಣ ಮಂಗಳೂರಿನ ಅಲ್ಲೋಸಿಯಸ್ ಕಾಲೇಜಿನಲ್ಲಿ. ಎರಡೂ ಕಡೆಗೆ ಸಂಸ್ಕೃತವನ್ನು ಕಲಿಯುವತ್ತ ವಿಶೇಷ ಒಲವನ್ನು ತೋರಿದ್ದರು. (ಪಂ. ಎನ್. ಅನಂತ ಉಪಾಧ್ಯಾಯರು ಅವರ ಗುರುಗಳು). ಇತ್ತ ಕನ್ನಡ ಸಾಹಿತ್ಯದಲ್ಲಿ ಅನೂನವಾದ ಆಸಕ್ತಿ. ಅದಕ್ಕೆ ನೆರವಾದವರು ಸೇಡಿಯಾಪು ಕೃಷ್ಣಭಟ್ಟರು ಹಾಗೂ ಮುಳಿಯ ತಿಮ್ಮಪ್ಪಯ್ಯನವರು. ಇಷ್ಟೇ ಒಲವು ಹಳಗನ್ನಡಕ್ಕಿಂತ ಆಧುನಿಕ

ಲೇಖಕರ ಕೃತಿಗಳಲ್ಲಿದ್ದಿತು. ತನಗೆ ಮೆಚ್ಚುಗೆಯಾದ ಕವನಗಳನ್ನು ಮತ್ತು ಗದ್ಯ ಭಾಗಗಳನ್ನು ಬರೆದಿಡುತ್ತಿದ್ದರು. ಅವರಲ್ಲಿ ಕುವೆಂಪು, ಡಿ.ವಿ.ಜಿ., ಬೇಂದ್ರೆ, ತಿರುಮಲಾಂಬಾ ಮುಂತಾದ ಹಿರಿಯ ಲೇಖಕರಿಂದ ಉದ್ಧೃತ ಭಾಗಗಳಲ್ಲದೆ, ಆ ಕಾಲಕ್ಕೆ ಅಷ್ಟೊಂದು ಪ್ರಸಿದ್ಧಿ ಪಡೆದಿರದ ಈಶ್ವರ ಸಣಕಲ್ಲರ ಕವನವೂ ಸೇರಿದೆ. ಬರೆದಿಟ್ಟುಕೊಳ್ಳುವ ಉದ್ದೇಶ ಕನ್ನಡದ ನುಡಿಗಟ್ಟನ್ನು ರೂಢಿಸಿಕೊಳ್ಳುವುದಾಗಿದ್ದಿತು. ಈ ಬಗೆಯ ಸಾಹಿತ್ಯಾಭ್ಯಾಸ ಯಾವ ಕಾಲಕ್ಕೂ ಸ್ಪೃಹಣೀಯವೇ. ಸಾಹಿತ್ಯ ವಿಚಾರದಲ್ಲಿ ಸದಾಶಿವರು ಎಷ್ಟೊಂದು ಗಂಭೀರವಾಗಿ ತೊಡಗಿಕೊಂಡಿದ್ದರೆಂಬುದಕ್ಕೆ ಇದು ನಿದರ್ಶನ.

ಕಾಲೇಜಿನಲ್ಲಿದ್ದಾಗ ಸದಾಶಿವರು ಒಂದಲ್ಲೊಂದು ಚಟುವಟಿಕೆಯಲ್ಲಿ ತೊಡಗಿರುತ್ತಿದ್ದರು. ಕಾಲೇಜಿನ ಕನ್ನಡ ಸಂಘದ ಕಾರ್ಯದರ್ಶಿತ್ವ ಅವುಗಳಲ್ಲೊಂದು. ಆಗ ಬಿ. ಎಂ. ಶ್ರೀ ಅವರನ್ನು ಒಂದು ಸಲ ಭಾಷಣಕ್ಕೆ ಆಮಂತ್ರಿಸಿದುದು ಅವರಿಗೊಂದು ಹೆಮ್ಮೆಯ ವಿಷಯವಾಗಿದ್ದಿತು. ಮಂಗಳೂರಲ್ಲಿಯ ಆರ್ಯ ಸಮಾಜದ ಕಾರ್ಯಕ್ರಮಗಳಲ್ಲಿಯೂ ಪಾಲ್ಗೊಳ್ಳುತ್ತಿದ್ದರು. ಅದರ ಕಾರ್ಯಕರ್ತ ಲಕ್ಷ್ಮಣದೇವ ವಿದ್ಯಾರ್ಥಿ - ಇವರೊಡನೆ ನಿಕಟ ಸಂಬಂಧವಿರಿಸಿಕೊಂಡಿದ್ದರು. ಜೊತೆಗೆ ಹತ್ತಾರು ಜನ ಸ್ನೇಹಿತರ ಒಡನಾಟ ಯಾವಾಗಲೂ ಇದ್ದದ್ದೇ. ಗೆಳೆಯರನ್ನು ಸಂಪಾದಿಸುವ ಮನೋವೃತ್ತಿ ಬಾಲ್ಯದಿಂದಲೇ ಇತ್ತು. ಆ ಗೆಳೆಯರಲ್ಲಿ ಹಲಸಗೋಡು ಸೂರಪ್ಪಯ್ಯ, ಉಮಾನಾಥ ಭುಜಂಗರಾವ್, ಸೂಚಿಬಾಲು ಶಂಕರ ಭಟ್ಟ, ಫಾದರ್ ಗೊನ್ಸಾಲ್ವಿಸ ಹೀಗೆ ಹಲವಾರು ಜನರ ಪ್ರಸ್ತಾಪವಿದೆ. ಅವರಲ್ಲಿ ಸಾಹಿತಿಗಳೂ ಕೆಲವರಿದ್ದರು. ಆ ದಿನಗಳಲ್ಲಿಯೆ ತಾನು ಕವಿತೆ ಮತ್ತು ಕತೆಗಳನ್ನು ರಚಿಸುತ್ತಿದ್ದುದಲ್ಲದೆ "ನೀನೂ ಯಾಕೆ ಬರೀಬಾರ್ದು? ಬರೆಯಲ್ಲ!" ಎಂದು ಇತರರನ್ನು ಹುರಿದುಂಬಿಸುತ್ತಿದ್ದರು. ಇತ್ತ ಅವರ ಪರಿಚಯದ ವಲಯದಲ್ಲಿ ಕಾಲೇಜಿನ ಪ್ರಾಧ್ಯಾಪಕರು ಕೆಲವರು ಅಷ್ಟೇ ನಿಕಟವರ್ತಿಗಳಾಗಿದ್ದರು. ಇಟಲಿಯ ಮಿಲಾನೊದಿಂದ ಬಂದಿದ್ದ ಡಾ. ಫೆಟ್ಸಿ (Fezzi) ಅವರಲ್ಲಿ ಒಬ್ಬರಾಗಿದ್ದರು. ಕಾರುಗಳ ತಯಾರಿಕೆಗೆ ಹೆಸರಾಗಿದ್ದ ಆ ಊರಿನಲ್ಲಿ ಆ ಮುಂದೆ ಆಟೊಮೊಬೈಲ್ ಎಂಜನಿಯರಿಂಗ್ ವಿಷಯವನ್ನು ಕಲಿಯಬೇಕೆಂದು ಪ್ರೋತ್ಸಾಹಿಸಿದವರು ಪ್ರಾಯಶಃ ಅವರೇ ಇರಬೇಕು.

ಮಂಗಳೂರಿನ 'ಮಿತ್ರಮಂಡಳಿ'ಯು ಸದಾಶಿವರ ಇನ್ನೊಂದು ಮನ ಮೆಚ್ಚಿನ ಕಾರ್ಯಕ್ಷೇತ್ರವಾಗಿದ್ದಿತು. ಧಾರವಾಡದ ಗೆಳೆಯರ ಗುಂಪಿನ ಮಾದರಿಯಲ್ಲಿ ೧೯೨೭ರ ಸುಮಾರಿಗೆ ಆರಂಭವಾಗಿದ್ದ ಈ ಮಂಡಳಿಯಲ್ಲಿ ಜೆ. ವಾಮನ ಭಟ್ಟ, ಕುಡ್ಪಿ ವಾಸುದೇವ ಶೆಣೈ, ಎಸ್. ಪಿ. ಭಟ್ಟ, ಜಿ.ಟಿ. ಆಚಾರ್ - ಮುಂತಾದ ಸದಸ್ಯರಿದ್ದರು. ಅವರೆಲ್ಲ ಅರಳಲಿದ್ದ ಕವಿ - ಲೇಖಕರು. ಸುರುವಿಗೆ ಅವರುಗಳು ರಚಿಸಿದ ಕವನಗಳ ಎರಡು ಪುಟ್ಟ ಸಂಗ್ರಹಗಳನ್ನು ಹೊರತರಲಾಯಿತು. (ಒಂದೊಂದರಲ್ಲಿ ಕೇವಲ ೧೦ - ೧೨ ಕವಿತೆಗಳು. 'ಅಳಿಲು ಸೇವೆ' - ಎನ್ನುವ ಸಂಕಲನ, ಶೀರ್ಷಿಕೆಯನ್ನು ಸಾರ್ಥಕಗೊಳಿಸುವಂತಿದ್ದಿತು. ಮಂಡಳಿಯ ಮುಂದಿನ ದೊಡ್ಡ, ದಿಟ್ಟ ಹೆಜ್ಜೆ - 'ಅಲರು'ವಿನದು. ಆ ಕವನ ಸಂಕಲನವನ್ನು ಸಿದ್ಧಪಡಿಸಲು ಸದಾಶಿವರಿಗೆ ಆಹ್ವಾನ! ಅದಕ್ಕೆ ಬರೆದ ಪೀಠಿಕೆಯ ಕೆಲ ವಿಚಾರಗಳಿವು:

ಕವಿಯು ಪ್ರಕೃತಿ ಎಂಬ ಕಿನ್ನರಿಯನ್ನು ಸ್ಫೂರ್ತಿಯಿಂದಲೂ ನವೀನತೆಯಿಂದಲೂ ವಿವೇಕದಿಂದಲೂ ಬಾಜಿಸುತ್ತಿದ್ದಾನೆ. ಪ್ರಕೃತಿಯು ಕವಿಗೆ ಶಕ್ತಿಮಯವಾಗಿಯೂ, ಕವಿಯು ಪ್ರಕೃತಿಗೆ ಕಾಂತಿಪ್ರದನಾಗಿಯೂ ಇದ್ದು, ಇಬ್ಬರೂ ಅನ್ಯೋನ್ಯವಾಗಿದ್ದಾರೆ..... ಅನಂತತೆಯಲ್ಲಡಗಿದ ತಿರುಳನ್ನು ಹೊರಗೆಳೆದು ಪುನಹ ಸೃಷ್ಟಿಸಿ ಹೊಸತೊಂದು ಮೆರುಗು ಕೊಟ್ಟು, ಕಾಣಲಾರದವರ ಮುಂದೆ ಅದನ್ನು ಕಾಣಿಸಲು ಕವಿಯ ಹೊರತು ಇನ್ನಾರಿಗೂ ಸಾಧ್ಯವಿಲ್ಲ.

ನವೋದಯ ಕಾಲದ ಈ ರೊಮ್ಯಾಂಟಿಕ್ ಪರಂಪರೆಯ ಸಮರ್ಥನೆಗಾಗಿ ಸದಾಶಿವರು ವ್ಯಾಟನ್ ಕವಿಯ ಸುಪ್ರಸಿದ್ಧ ಸಾಲುಗಳನ್ನು ಉದ್ಧರಿಸಿದ್ದಾರೆ. (The poet doth remain). ಆ ಪೀಠಿಕೆಯನ್ನೋದಿದವರಿಗೆ ಈ ಸಂಪಾದಕ ಯಾರೊ ಒಬ್ಬ ಪ್ರೌಢ ಸಾಹಿತಿ ಇರಬೇಕೆಂದು ಅನಿಸುವುದು ಸ್ವಾಭಾವಿಕವೇ. ಆದರೆ ಸದಾಶಿವರಿಗೆ ಆಗ ಕೇವಲ ೧೭ ವರ್ಷ.

ಆಗಿನ ಕಾಲಕ್ಕೆ ಕರ್ನಾಟಕದವರು ವಾರಾಣಸಿಯಂತಹ ದೂರದ ಸ್ಥಳವೊಂದಕ್ಕೆ ವಿದ್ಯಾರ್ಜನೆಗಾಗಿ ಹೋಗುವುದು ಸಾಹಸದ ಮಾತೇ ಆಗಿದ್ದಿತು. ಅದರಲ್ಲಿಯೂ ಸದಾಶಿವರಂತಹ ಸಾಹಿತ್ಯ ಪ್ರೇಮಿಯು ಆಟೊಮೊಬೈಲ್ ಎಂಜಿನಿಯರಿಂಗ್ ವಿಷಯ ತೆಗೆದುಕೊಂಡದ್ದು ಸಾಹಸವೆನ್ನುವುದರ ಜೊತೆಗೆ ಆಶ್ಚರ್ಯದ ಸಂಗತಿಯೆಂದೂ ಅನಿಸೀತು.

೧೯೩೪ ರಿಂದ ೧೯೩೬ವರೆಗೆ ಬನಾರಸ್ ಹಿಂದೂ ಯೂನಿವರ್ಸಿಟಿಯ ರಾಜಪುತಾನಾ ಹಾಸ್ಟೆಲಿನಲ್ಲಿ ವಾಸ. ಅಲ್ಲಿಯ ಗುರುಗಣದಲ್ಲಿ ಕನ್ನಡಿಗರೇ ಆದ ಭೌತಶಾಸ್ತ್ರದ ಪ್ರೊ. ದಾಸಣ್ಣಾಚಾರ್ಯರ ಹೆಸರನ್ನು ಮುಖ್ಯವಾಗಿ ಹೇಳಬೇಕು. ಹಬ್ಬದ ದಿನಗಳಲ್ಲಿ ಸದಾಶಿವರಿಗೆ ಅವರ ಮನೆಯಲ್ಲಿ ತಪ್ಪದೇ ಊಟದ ಆಮಂತ್ರಣ. ಅವರನ್ನು ಕುರಿತು, ಜಯಕರ್ನಾಟಕ ಮಾಸಿಕದಲ್ಲಿ ಪೇಜಾವರರು ಲೇಖನವನ್ನೂ ಬರೆದದ್ದುಂಟು.

ವಾರಾಣಸಿಯಲ್ಲಿ ಒಂದಲ್ಲೊಂದು ಚಟುವಟಿಕೆಗಳು ತಮಗಿವೆಯೆಂಬುದರ ಕಲ್ಪನೆ ಸದಾಶಿವರಿಗೆ ಚೆನ್ನಾಗಿಯೆ ಇತ್ತು. ಅಂತೆಯೇ ತಮ್ಮನಿಗೆ ಬರೆದ ಒಂದು ಪತ್ರದಲ್ಲಿ "You have unlike me very few diversions" ಎಂಬುದಾಗಿ ಬರೆದದ್ದುಂಟು.

ಸ್ನೇಹಿತರು? ಹಿಂದಿನಂತೆ ಇಲ್ಲಿಯೂ ಹತ್ತಾರು ಜನ. "Distance makes strangers, friends. What to say of real friends" ಎಂಬುದಾಗಿ ಒಂದು ಪತ್ರದಲ್ಲಿ ಕಾಣಿಸಿದ್ದಾರೆ.

ಅವರ ಸ್ನೇಹಿತ ವರ್ಗದಲ್ಲಿ ಕೆ. ಜಿ. ಮೆನನ್ ಎಂಬ ಕೇರಳೀಯನಿದ್ದ. ಅವನ ಬಗ್ಗೆ ಇನ್ನೊಂದು ಪತ್ರದಲ್ಲಿ You may be able to have a number of 'fairweather' friends. But it is rare that one gets an 'all weather' friends ಎಂದು ಬರೆದಿದ್ದಾರೆ. ಮತ್ತೊಬ್ಬ ಸ್ನೇಹಿತ ಆಂಧ್ರದವ. ಸದಾಶಿವರ ಚಿತ್ರ ಬಿಡಿಸುವ ಹವ್ಯಾಸವನ್ನು ಕಂಡು ತನ್ನ ಪರಿಚಯದವರೊಬ್ಬರ ತೆಲುಗು ಪುಸ್ತಕಕ್ಕೆ ಇವರಿಂದಲೇ ಮುಖಚಿತ್ರ

ಬರೆಯಿಸಿದ. ಆಗಾಗ 'ಕೃಷ್ಣ ಪತ್ರಿಕಾ', 'ಪ್ರಜಾಮಿತ್ರ' ಎಂಬೀ ತೆಲುಗು ಪತ್ರಿಕೆಗಳಿಗೆ ಚಿತ್ರಗಳನ್ನು ಬಿಡಿಸಿ ಕಳಿಸುತ್ತಿದ್ದರಂತೆ. ಅವು ಎಷ್ಟರ ಮಟ್ಟಿಗೆ ಪ್ರಕಟವಾದುವೊ ತಿಳಿಯದು. ಆ ಮುಂದೆ ಪ್ರಕಟವಾದ 'ಸರಪಣಿ' ಎನ್ನುವ ಸ್ವಂತದ ನಾಟಕ ಸಂಗ್ರಹದ ಮುಖಪುಟದ ಚಿತ್ರ ಅವರದ್ದೇ ಇರಬೇಕು. ಮೇಲೆ ಸೂಚಿಸಿದಂತೆ ಅವರದು 'ಅಮೆಚ್ಯೂರ್' ಚಿತ್ರಕಲೆ.

'ಜ್ಯೇಷ್ಠ ಭ್ರಾತಾ ಪಿತಾಸಮಾನಃ' ನಿಜ ಅದನ್ನು ಸದಾಶಿವರಿಗೆ ಅನ್ವಯಿಸಿದ್ದಾದರೆ. 'ಜೇಷ್ಠ - ಭ್ರಾತಾ ಮಾತಾಪಿತರೌ ಸಮಾನಃ' - ಎಂದು ಮಾರ್ಪಡಿಸಬೇಕಾಗುತ್ತದೆ. ವಾಸುದೇವರ ಆಹಾರ, ಪುಸ್ತಕಾದಿ, ಅನಾರೋಗ್ಯ ಈ ಸಣ್ಣ ಸಣ್ಣ ವಿಷಯಗಳ ಬಗ್ಗೆಯೂ ಅಣ್ಣ ಸದಾಶಿವರು ಕಾಳಜಿ ಮಾಡುತ್ತಿದ್ದರು. ತಮ್ಮ ಶಿಕ್ಷಣ ಮುಗಿಯುತ್ತಾ ಬಂದಾಗ, ವಾಸುದೇವರನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ವಾರಾಣಸಿಗೇ ಕರೆಸಿಕೊಂಡರು. ಇದಲ್ಲದೆ ಕತೆ ಬರೆಯಲು ಅವರನ್ನೂ ಪ್ರೋತ್ಸಾಹಿಸುತ್ತಿದ್ದರು. ಬರೆದಾದ ಮೇಲೆ ತಿದ್ದುವ ಕೆಲಸವನ್ನೂ ವಿಶೇಷ ಆಸ್ಥೆಯಿಂದ ಮಾಡುತ್ತಿದ್ದರು. ವಾಸುದೇವ ಬರೆದ ಒಂದು ಕತೆಯಲ್ಲಿ ಕಿಟ್ಟು ಮತ್ತು ರಾಮು - ಎಂಬುದಾಗಿ ಪಾತ್ರಗಳ ಹೆಸರಿದ್ದುವಂತೆ. 'ಅವು ಮೈಸೂರ ಕಡೆಯ ಹೆಸರುಗಳಂತಿವೆ. ಸ್ಥಳೀಯವಾದ ರಘು, ಶೀನ ಎಂಬ ಹೆಸರುಗಳಿರಲಿ' - ಎಂದೂ ಸೂಚಿಸಿದ್ದರು! ಕತೆ ಸಿದ್ಧವಾದ ಮೇಲೆ ಪತ್ರಿಕೆಗೆ ಕಳಿಸಲು ಸೂಚಿಸುತ್ತ 'Don't write cringing letter to the Editor. Be businesslike and that would add to your prestige - ಎಂಬ ಉಪದೇಶ ಬೇರೆ! ಒಮ್ಮೆ ಈ ತಮ್ಮನಿಗಾಗಿ ಎರಡು ಉಲನ್ ಸ್ವೆಟರ್ ಖರೀದಿ ಮಾಡಿದ್ದರು. ಸಣ್ಣ ಮಕ್ಕಳನ್ನು ರಮಿಸಿ ಕೆಲಸ ಮಾಡಿಸುವ ರೀತಿಯಲ್ಲಿ "ಒಂದು ಸ್ವೆಟರಿನ cut ಬಹಳ stylish ಇದೆ. ನಿನಗೆ ಚೆನ್ನಾಗಿ ಒಪ್ಪುತ್ತದೆ. ಹಾಕಿಕೊ' ಎಂಬುದಾಗಿ ಹೇಳಿದ್ದರು. ಮುಂದುವರಿದು -

Our position doesn't justify unnecessary laxury. But do not at the same time be too frugal. ಎಂದೂ ಬರೆದಿದ್ದರು. ಎಷ್ಟೊಂದು ಕಾಳಜಿ!

ವಾಸುದೇವ ಒಂದು ಪರೀಕ್ಷೆಯಲ್ಲಿ ಅಯಶಸ್ವಿಯಾದಾಗ ಬರೆದ ಮಾತುಗಳು ಸದಾಶಿವರ ಅನುಭವದಿಂದ ಮಾಗಿದ ಜೀವನ ದೃಷ್ಟಿಯನ್ನು ತೋರ್ಪಡಿಸುತ್ತದೆ.

Dont feel discouraged, since one is bound to get kicks out of life one day or the other, I had my share and will have a lot more coming. Life is long and not all of it a 'Playing holiday' ಮನ ಬಿಚ್ಚಿ ಏನೇ ಹೇಳುವುದಿದ್ದರೂ ವಾಸುದೇವ ಒಂದು ವಾಹಕದಂತಿದ್ದ. If there is anything that I hate in this world, it is pettiness ಎಂಬ ಮಾತನ್ನೂ ವಾಸುದೇವರಿಗೇ ಬರೆದದ್ದು.

ವಾಸುದೇವರೂ ಅಣ್ಣನನ್ನು ಅಷ್ಟೇ ಗಾಢವಾಗಿ ನೆಚ್ಚಿಕೊಂಡಿದ್ದರು. ಅವರಿಬ್ಬರ ನಂಟು ಇತರರಿಗೂ ಗೊತ್ತಿತ್ತು. ಅಣ್ಣ ತೀರಿಹೋದ ಸುದ್ದಿಯನ್ನು ವಾಸುದೇವರಿಂದ ಬಚ್ಚಿ ಇಡಲಾಗಿತ್ತು. ತಿಂಗಳೊಪ್ಪತ್ತು ಕಳೆದ ಮೇಲೆಯೇ ಅವರಿಗೆ ಅಣ್ಣನನ್ನು ಕಳೆದುಕೊಂಡೆನೆಂದು ಗೊತ್ತಾದದ್ದು.

ಅಂದ ಹಾಗೆ ವಾರಾಣಸಿಯ ಶಿಕ್ಷಣದ ಉತ್ತರಾರ್ಧ ಕಾಲದಲ್ಲಿ ಸದಾಶಿವರ ಮದುವೆ ನೆರವೇರಿತ್ತು. ಪೇಜಾವರ ಭವಾನಿರಾಯರ ಮಗಳು - ಪ್ರೇಮಲತಾ ಎಂಬವಳೊಡನೆ. ತುಸು ಬೇಗ ಆದದ್ದರ ಇನ್ನೊಂದು ಕಾರಣವೆಂದರೆ ಮದುವೆಯಾಗದೇ ಇದ್ದ ವಿದ್ಯಾರ್ಥಿಗಳಿಗೆ ಇಟಲಿಯಲ್ಲಿ ಆಗ ಶಿಕ್ಷಣಕ್ಕಾಗಿ ಪ್ರವೇಶ ದೊರೆಯುತ್ತಿರಲಿಲ್ಲ!

ಜನವರಿ ೧೯೩೪ರಲ್ಲಿ ಮದುವೆ ನೆರವೇರಿತೆಂದು ಕಾಣುತ್ತದೆ. ಮುಂದೆ ಇಟಲಿಗೆ ಹೊರಡುವ ಪೂರ್ವದಲ್ಲಿ (ಜುಲೈ ೧೯೩೬) 'ಅಣ್ಣನು ಮಗುವನ್ನು (ಹೀರಾ) ಎತ್ತಿಕೊಂಡು ಆಡಿಸುತ್ತಿದ್ದ' ಎಂದು ವಾಸುದೇವರಾಯರು ನನಗೆ ತಿಳಿಸಿದ್ದಾರೆ. ಅಂತೂ ಸದಾಶಿವರು ಸಂಸಾರ ನಡೆಸಿದ್ದು ಎರಡು ವರ್ಷ ಮಾತ್ರ. ಆ ಅಲ್ಪ ಅವಧಿಯಲ್ಲಿ ಪ್ರೇಮಲತಾ ಅತ್ಯಂತ ಪ್ರೇಮಳ ಸ್ವಭಾವದ ಪತಿಯನ್ನು ಪಡೆದವಳಾಗಿ ಒಲವಿನ ಸಂಭ್ರಮವನ್ನೂ ಅನುಭವಿಸಿರಲು ಸಾಕು. ಸದಾಶಿವರು ೧೯೩೫ರ ಮಧ್ಯದಲ್ಲಿ ವಾರಾಣಸಿಯಲ್ಲಿ ವ್ಯಾಸಂಗವನ್ನು ಮುಗಿಸಿಕೊಂಡು ಮರಳಿ ಬಂದ ಮೇಲೆ ಊರಲ್ಲಿಯೆ ಹೆಚ್ಚಾಗಿ ಇರುತ್ತಿದ್ದರು. ನೌಕರಿಯ ವಿಚಾರ ಮಾಡಿರಲಿಲ್ಲ. ಆದರೆ ಸಾಕಷ್ಟು ಸಂಚಾರ ಮಾಡುತ್ತಿದ್ದರು. (ಚೆಂಗಲಪೇಟೆಯಿಂದ ಬರೆದ ಒಂದು ಪತ್ರವಿದೆ) ೧೯೩೬ರ ಫೆಬ್ರುವರಿಯಲ್ಲಿ ಪುತ್ತೂರಿಗೆ ಶಿವರಾಮ ಕಾರಂತರ ಬಾಲವನವನ್ನು ನೋಡಲೆಂದು ಹೋಗಿಬಂದ ಮೇಲೆ ಈ ರೀತಿ ಬರೆದಿದ್ದಾರೆ:

It was on a visit with Mr. Shivaram Karanth to his 'Children's Residential School', that I had been to Puttur. A delightful place, half way up a hill with a fine library and a beautiful view of the ghats all around.

ಇತ್ತ ವಿದೇಶಕ್ಕೆ ಹೊರಡುವ ವಿಚಾರ ರೂಪುಗೊಳ್ಳುತ್ತಿತ್ತು. ತಂದೆ ಶಾಮರಾಯರಿಗೆ ಅದು ಬೇಡವಾದ ವಿಷಯ. ಮಾವ ಡಾ. ಭವಾನಿರಾಯರು ಒತ್ತಾಯಿಸಿದರೆಂದು ಸದಾಶಿವರು ಹೊರಟು ನಿಂತರು. ಹಾಗೆ ನೋಡಿದರೆ ವಾರಾಣಸಿಯಿಂದ ಮರಳಿ ಬಂದೊಡನೆಯೇ ಹೋಗಬೇಕಾಗಿತ್ತು. ಆದರೆ ಯುದ್ಧದ ವಾತಾವರಣದಿಂದಾಗಿ ಪ್ರಯಾಣ ಮುಂದೆ ಹೋಗಿತ್ತು. ಅಂತೂ ಮರುವರ್ಷ (೧೯೩೬ರ ಜುಲೈ ಕೊನೆಯಲ್ಲಿ) ಇಟಲಿಗೆ ಹಡಗಿನ ಮೂಲಕ ಪ್ರಯಾಣ ಬೆಳೆಸಿದರು.

ಮಿಲಾನೊಕ್ಕೆ ಬಂದ ಕೂಡಲೇ ಬರೆದ ಮೊದಲ ಪತ್ರ ತಾಯಿಗೆ. ವಿದೇಶದಲ್ಲಿ ತಾನು ಮಾಂಸಾಹಾರವನ್ನೇ ಮಾಡಬೇಕಾಗುವುದೆಂದು ಅವರಿಗೆ ಚೇಷ್ಟೆಯಲ್ಲಿ ಹೇಳಿದ್ದರೆಂದು ಕಾಣುತ್ತದೆ. ಮಿಲಾನೊದಲ್ಲಿ ಕುಳಿತು ಬರೆದ ಆ ಪತ್ರದಲ್ಲಿ ಪರಿಸ್ಥಿತಿ ಹಾಗೇನೂ ಇಲ್ಲವೆಂದು ಆಶ್ವಾಸನೆ ಇತ್ತಿದ್ದಾರೆ. ಮುಂದುವರಿದು. "ಇಲ್ಲಿನ ಹವೆ ಊಟಾದಿಗಳು ಇಷ್ಟು ಚೆನ್ನಾಗಿವೆಯಲ್ಲ ೨-೩ ವರ್ಷಗಳ ನಂತರ ನಾನು ಮರಳಿ ಬಂದಾಗ ನನ್ನ ದೇಹದಾರ್ಢ್ಯವನ್ನು ನೋಡಿ ಆಶ್ಚರ್ಯ ಪಡುವಿ" ಎಂದು ಭರವಸೆ ನೀಡಿದ್ದಾರೆ.

ಮನೆಯವರ ಮತ್ತು ಊರಿನ ಪರಿಸರದ ನೆನಪು! ವಾರಾಣಸಿಯಲ್ಲಿದ್ದಂತೆ ಇಲ್ಲಿಯೂ ಅವರನ್ನು ಕಾಡುತ್ತಿತ್ತು! ತುಸು ಹೆಚ್ಚೇ ಎನ್ನಬಹುದು. ಅಭ್ಯಾಸದಲ್ಲಿ ನಿರತರಾದಾಗ ಅಷ್ಟಾಗಿ ಅನಿಸುತ್ತಿದ್ದಿಲ್ಲವಂತೆ. ಒಬ್ಬರೇ ಇದ್ದಾಗ ಅದರ ತಿವಿತ ಸಹಿಸಲಸಾಧ್ಯ ಎನ್ನುತ್ತ ಆ ನೆನಹುಗಳನ್ನು ಸಮುದ್ರದ ಇಳಿತ ಭರತಗಳಿಗೆ ಹೋಲಿಸಿದ್ದಾರೆ. ತಂದೆಗೆ ಆ ಕಾಲಕ್ಕೆ ಬರೆದ ಒಂದು ಪತ್ರದಲ್ಲಿ With your love and blessings God will look after me. Here is no one near or dear to me ಎಂಬ ಮಾತಿದೆ.

ಮಿಲಾನೊಗೆ ಬಂದವರು, ಸಂಗಡ ಅಡಚಣೆಯನ್ನೂ ತಂದಿದ್ದರೆನ್ನಬಹುದು. ಲಾಭಾಂಶವನ್ನಿಟ್ಟುಕೊಳ್ಳದೆ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿದ್ದ ವಸತಿ ಗೃಹವನ್ನು ಆಯ್ದುಕೊಂಡಿದ್ದರು. ೧೦ ಲಿರಾ ವೆಚ್ಚ ಮಾಡುವುದಿದ್ದರೂ ಯೋಚಿಸಬೇಕಾಗುತ್ತಿತ್ತು.

ಆ ಊರಿಗೆ ಹೋದೊಡನೆ ಮೂರು ಭಾರತೀಯರ ಒಡನಾಟ ದೊರಕಿತಂತೆ. ಅವರಲ್ಲಿ ಇಬ್ಬರು ಪಂಜಾಬಿಗಳು, ಮತ್ತೊಬ್ಬರು ಮಿಲಾನೊದಲ್ಲಿ ಟ್ರೇಡ್ ಕಮೀಶನರ್ ಆಗಿದ್ದ ಸೇನ್ ಎಂಬುವವರು. ಯಥಾಪ್ರಕಾರ ಸದಾಶಿವರಾಯರು ಆ ಕುಟುಂಬದವರಿಗೆ ಬಲುಬೇಗ ಆತ್ಮೀಯರಾದರು. ರವಿವಾರದ ರಜಾ ದಿನಗಳಲ್ಲಿ ಸದಾಶಿವರಿಗೆ ಊಟದ ಕರೆ. ಸೇನರೊಂದಿಗೆ ಅವರು ಉತ್ತರದ ಸ್ವಿಜರ್‌ಲ್ಯಾಂಡಿಗೂ ಹೋಗಿಬಂದರು.

ವಿದೇಶೀ ಅಪರಿಚಿತ ವಾತಾವರಣವಿದ್ದರೂ ಅವರ ಅಭ್ಯಾಸೇತರ ಚಟುವಟಿಕೆಗಳು ಅಲ್ಲಿಯೂ ನಡೆದು ಬಂದುವು. ಒಮ್ಮೆ ಮುಸೋಲಿನಿಯ ಭಾಷಣಕ್ಕೆ ಹೋಗಿದ್ದರಂತೆ. ಊರಿಗೆ ಊರೇ ಅವರ ಭಾಷಣ ಕೇಳ ಬಂದಿದ್ದು ಮಂತ್ರ ಮುಗ್ಧರಾಗಿ ಕುಳಿತಿದ್ದರೆಂದು ವರ್ಣಿಸಿದ್ದಾರೆ. ವಿದೇಶಗಳಿಗೆ ಹೋದವರಿಗೆಲ್ಲ ಪ್ರಿಯವಾದ ಒಂದು ಕೆಲಸ, ಅಂಚೆ ಚೀಟಿಗಳ ಸಂಗ್ರಹ. 'ಹೇಗೂ ತುಂಬಾ ಪತ್ರ ಬರೀತೇನೆ. ಅವಕ್ಕೆ ಹಚ್ಚಿದ ಅಂಚೆ ಚೀಟಿಗಳನ್ನು ಕಾದಿರಿಸಹೇಳುವೆ' ಎಂಬ ಅವರ ಆಲೋಚನೆ ಫಲಕಾರಿಯಾದಂತೆ ಕಾಣಲಿಲ್ಲ. ಏಕೆಂದರೆ ಅಂಥ ಸುಂದರ ಸ್ಟಾಂಪುಗಳು ಬೇಕಿದ್ದರೆ 'ಏರ್‌ಮೇಲ್' ನಿಂದ ಪತ್ರಗಳು ಹೋಗಬೇಕು! ಇವರದೋ 'ಸೀ ಮೇಲ್' ಪತ್ರ ವ್ಯವಹಾರ, ದುಬಾರಿ ವೆಚ್ಚದ ಕಾರಣದಿಂದ. ಅದಾಗ್ಯೂ ೧೦೦ರಷ್ಟು ಸ್ಟಾಂಪುಗಳನ್ನು ಕೂಡಿಸಿದ್ದರಂತೆ. ಆಲ್ಬಮ್? ಮಿಲಾನೋದಲ್ಲಿ ಕೊಳ್ಳುವುದೆಂದರೆ....! ಆದ ಕಾರಣ ಊರಿನಿಂದಲೇ ತರಿಸಿಕೊಂಡರು!

ಆದರೆ ಸಚಿತ್ರ ಕಾರ್ಡುಗಳು ಕಡಿಮೆ ದರದಲ್ಲಿ ಸಿಗುತ್ತಿದ್ದುವು. ಅಂಥವನ್ನು ಸ್ನೇಹಿತರಿಗೆ, ಹಿರಿಯರಿಗೆ ಮೇಲಿಂದ ಮೇಲೆ ಕಳಿಸುತ್ತಿದ್ದರು. ಮಾಸ್ತಿಯವರು ಮಿಲಾನೊದಿಂದ ಬಂದ ಅಂಥದೊಂದು ಚಿತ್ರದ ಕಾರ್ಡನ್ನು ಕಾದಿರಿಸಿದ್ದರು. (ನನಗೆ ಅದನ್ನು ತೋರಿಸಿದ್ದಾರೆ). ಶ್ರೀಮತಿ ಲೀಲಾ ಕಾರಂತರು ಮಿಲಾನೊದಿಂದ ಅವರು ಕಳಿಸಿದ ಕಾರ್ಡನ್ನು 'ಇನ್ನೂ ಜೋಪಾನವಾಗಿ ಇಟ್ಟಿದ್ದೇನೆ' ಎಂದು ವಾಸುದೇವರಾಯರಿಗೆ ಒಮ್ಮೆ ಹೇಳಿದ್ದರಂತೆ. ಈ ಮುದ್ರಿತ ಚಿತ್ರಗಳ ಜೊತೆಗೆ ಸ್ವತಹ ತಾವೇ ಚಿತ್ರ ಬಿಡಿಸುವ ಹವ್ಯಾಸವನ್ನೂ ಮಿಲಾನೊದಲ್ಲಿ ಮುಂದುವರಿಸಿದ್ದರು.

ಅವರ ಎಂಜನಿಯರಿಂಗ್ ಅಭ್ಯಾಸದ ವಿಚಾರ ಏನೂ ತಿಳಿದು ಬಂದಿಲ್ಲ. ಅದು ಹೇಗೆ ಇದ್ದರೂ ಮರು ವರ್ಷದಿಂದ ಅವರಿಗೆ ಭಾರತದ ಒಂದು ಸಂಸ್ಥೆಯ ಮೂಲಕ ಪ್ರತಿ ತಿಂಗಳು ೮೦ ರೂ. ಯ ವಿದ್ಯಾರ್ಥಿ ವೇತನ ದೊರೆಯತೊಡಗಿತು. 'ಅದು ನನ್ನ ಇಲ್ಲಿಯ ಊಟದ ವೆಚ್ಚವನ್ನು ಮಾತ್ರ ಕೈಗೂಡಿಸಬಲ್ಲದು' ಎಂಬುದಾಗಿ ತಂದೆಯವರಿಗೆ ತಿಳಿಸಿದ್ದಾರೆ. ಆ ಪತ್ರದಲ್ಲಿಯ This makes me believe firmly that God somehow doesn't like to let us completely down ಎಂಬ ಮಾತನ್ನು ಗಮನಿಸುವುದು.

ವಿಶೇಷ ಸಂಗತಿಯೆಂದರೆ ಆ ೮೦ ರೂಪಾಯಿಯಲ್ಲಿಯೆ ಕಿಂಚಿತ್ ಹಣವನ್ನು ಮೆಡಿಕಲ್‌ಗೆ ಓದುತ್ತಿದ್ದ ಇನ್ನೊಬ್ಬ ತಮ್ಮ ವೆಂಕಟ್ರಾಯನಿಗೆ, ಪ್ರತಿ ತಿಂಗಳು ಕೊಡುತ್ತ ಬಂದದ್ದು. ಅನೇಕರಿಗೆ ಸಾಹಿತ್ಯ ಕಾರ್ಯ ಹವ್ಯಾಸದ ಸ್ವರೂಪದಲ್ಲಿರುತ್ತದೆ. ಪ್ರಸಂಗವಶಾತ್ ಬೇರೊಂದು ವೃತ್ತಿ ಇಲ್ಲವೆ ಪ್ರಲೋಭನಕ್ಕೆ ಒಳಗಾದರೆಂದರೆ ಸಾಹಿತ್ಯ ರಚನೆಯಾಗಲಿ, ಅದರಲ್ಲಿ ಆಸಕ್ತಿಯಾಗಲಿ ಹಿಂದೆ ಬೀಳುತ್ತದೆ. ಪೇಜಾವರ ಸದಾಶಿವರಿಗೆ ಸಾಹಿತ್ಯ ಎನ್ನುವುದು ಬದುಕಿನ ಒಂದು ಅಂಗವೇ ಆಗಿದ್ದಿತು.

ಮಿಲಾನೊದಲ್ಲಿದ್ದಾಗ ಅವರು ಕೆಲವಾದರೂ ಕನ್ನಡ ಪತ್ರಿಕೆಗಳು ನಿಯಮಿತವಾಗಿ ಬರುವಂತೆ ವ್ಯವಸ್ಥೆ ಮಾಡಿಕೊಂಡಿದ್ದರು. (ಪುಸ್ತಕಗಳೂ ಆಗಾಗ ಅವರ ಕೈ ಸೇರುತ್ತಿದ್ದವು) ತ್ರಿವೇಣಿ, ಪ್ರಭಾತ, ಮತ್ತು ಜಯಕರ್ನಾಟಕ ಇವು ಮೂರರ ಉಲ್ಲೇಖ ಆಗಿನ ಪತ್ರಗಳಲ್ಲಿ ಬಂದಿದೆ. ಅವು ಮೂರರೊಡನೆ ಲೇಖಕೀಯ ಸಂಬಂಧವನ್ನಿರಿಸಿಕೊಂಡಿದ್ದರು. 'ತ್ರಿವೇಣಿ'ಯಲ್ಲಂತೂ ಕವನಗಳಲ್ಲದೆ ಅವರ ಗದ್ಯ ಲೇಖನ, ನಾಟಕಗಳು ಪ್ರಕಟವಾಗಿವೆ. ಅದರ ಕಾರಣ, ಅದರ ಪ್ರಕಾಶಕರಾದ ಬಾಬೂರಾವ್ ಪ್ರಭುಗಳ ಸ್ನೇಹ. ಮಿಲಾನೊದಿಂದಲೂ ಲೇಖನಾದಿ ಕಳಿಸಿದ್ದಾರೆ. ತಮ್ಮ ಪತ್ರಗಳಿಗೆ ಬೇಗ ಉತ್ತರ ಬರಬೇಕೆಂದು ಸದಾಶಿವರು ಅಪೇಕ್ಷಿಸುತ್ತಿದ್ದುದು ಸಹಜವೇ. ಬಾಬೂರಾಯರಿಂದ ಬಹುಕಾಲ ಉತ್ತರ ಬಾರದಿದ್ದಾಗ 'ನಿನ್ನಿಂದ ಪತ್ರವೇ ಇಲ್ಲವಲ್ಲ. ನಿನ್ನ ಪ್ರೆಸ್ಸಿನ ಮೇಲೆ ಬಾಂಬ್ ಬಿದ್ದಿಲ್ಲ ತಾನೇ'. ಎಂದೊಮ್ಮೆ ಬರೆದರು.

ಗಮನಿಸಬೇಕಾದ ಮಾತೆಂದರೆ ಅವರು ತಮಗೆ ಬಂದಿದ್ದ ಯಾವುದೇ ಪತ್ರಿಕಾ ಸಂಚಿಕೆಯಿರಲಿ, ಪುಸ್ತಕವಿರಲಿ, ಅವುಗಳಲ್ಲಿ ಯಾವುದು ಉತ್ತಮ; ಯಾವುದು ಕಳಪೆ ಎಂಬುದನ್ನು ಯಾವದೇ ಪೂರ್ವಾಗ್ರಹವಿಲ್ಲದೆ, ಸಂಬಂಧಪಟ್ಟವರಿಗೆ ಬರೆದು ತಿಳಿಸುತ್ತಿದ್ದರು. 'ಪೇ.ಸ.'ರನ್ನು ಕವಿ, ನಾಟಕಕಾರ, ಕತೆಗಾರ ಎಂದು ಮಾತ್ರವಲ್ಲದೆ ವಿಮರ್ಶಕ ಎಂದೂ ಹೆಸರಿಸಬರುವಂತಿದೆ.

ಜೊತೆಗೆ ತಾವು ಆ ಪತ್ರಿಕೆಗಳಿಗೆ ಏನಾದರೂ ಬರೆಯಬೇಕೆಂಬ ತುಡಿತ ಇದ್ದೇ ಇದ್ದಿತು. 'ಇಟಲಿಯ ಅನುಭವಗಳು' ಎಂಬ ಮಾಲಿಕೆಯನ್ನು 'ಪ್ರಭಾತ' ಇಲ್ಲವೆ 'ಜಯಕರ್ನಾಟಕ'ದಲ್ಲಿ ಪ್ರಕಟಣೆಗೆ ಕೊಡಬೇಕೆಂದಿದ್ದದ್ದು ಕೈಗೂಡಲಿಲ್ಲ. 'ತ್ರಿವೇಣಿ'ಯ ಬಾಬೂರಾಯರಿಗೆ 'I will translate for you a number of short strories, - real masterpieces of

psycho - studies by Pirandello' ಎಂದೊಮ್ಮೆ ಬರೆದರು. ಮತ್ತೊಂದು ಪತ್ರದಲ್ಲಿ 'ಕೆಲವು ಕವಿತೆಗಳನ್ನು ಕಳಿಸುತ್ತಿದ್ದೇನೆ. ಗದ್ಯ ಲೇಖನ ಬರೆಯುವಷ್ಟು ವೇಳೆ ಇಲ್ಲ' ಎಂದು ತಿಳಿಸಿದ್ದಾರೆ. ಇದೇ ಸುಮಾರಿಗೆ ತಮ್ಮ ಇನ್ನೊಬ್ಬ ಆತ್ಮೀಯ ಮಿತ್ರರಾದ ಜೆ. ವಾಮನ ಭಟ್ಟರಿಗೆ 'ನನ್ನ ಶೈಲಿಯನ್ನು ಸ್ವಲ್ಪ ಅರವಿಟ್ಟು ಹೊಸತು ಮಾಡಿಕೊಳ್ಳುವುದಕ್ಕಾಗಿ ಬೇಂದ್ರೆ, ಗುಂಡಪ್ಪ, ಗೋಕಾಕ ಮೊದಲಾದವರ ಕೆಲವು ಪುಸ್ತಕಗಳನ್ನು ಕಳಿಸಿಕೊಡಿರಿ' ಎಂದೂ ವಿನಂತಿಸಿದ್ದಾರೆ. ಪ್ರಸಿದ್ಧ ಕನ್ನಡ ಲೇಖಕರ ಕೃತಿಗಳನ್ನು ತರಿಸಿಕೊಂಡು, ನಮ್ಮ ಸಾಹಿತ್ಯದ ಪರಿಚಯವನ್ನು ಇಟಾಲಿಯನ್ನರಿಗೆ ಮಾಡಿಕೊಡುವ ಅಪೇಕ್ಷೆಯೂ ಅವರದಾಗಿತ್ತು.

ಇದೇ ವಾಮನ ಭಟ್ಟರು ತಮ್ಮ ಸುಪ್ರಸಿದ್ಧ 'ಕೋದಂಡನ ಉಪನ್ಯಾಸಗಳು, ಇದರ ಭಾಗ - ೧' ಈ ಗ್ರಂಥವನ್ನು, ಇಟಲಿಯಲ್ಲಿದ್ದ ಸದಾಶಿವರಿಗೆ ಅರ್ಪಣೆ ಮಾಡಿದ್ದಾರೆ. (ಡಿಸೆಂಬರ್ ೧೯೩೭) ಆ ಸಂದರ್ಭದ ಕೆಲ ಮಾತುಗಳು ಪ್ರಸ್ತುತವಾಗುತ್ತವೆ.

"ಪ್ರತಿಭಾಶಾಲಿಗಳಾದ ನಿಮ್ಮ ವಿಚಾರಗಳ ಉತ್ತಾನತೆಯನ್ನೂ ಧೈರ್ಯ ಸ್ಥೈರ್ಯಗಳ ಉಚ್ಛೃಂಖಲತೆಯನ್ನೂ ನಾನು ಬಲ್ಲೆನು. ನಿಮ್ಮ ಸಮಕ್ಷಮದಲ್ಲಿ ವಿಸ್ತಾರವಾದ ಕಾಲವೂ ವಿಪುಲವಾದ ಪೃಥ್ವಿಯೂ ಚಾಚಿಕೊಂಡಿವೆ. ಅವೆಲ್ಲವುಗಳ ಸಾರವನ್ನು ತಿಳಿದು ನೀವು ಕನ್ನಡ ನುಡಿಗಾಗಿ ಹೆಣಗುವಿರೆಂದು ನಂಬಿರುತ್ತೇವೆ... ಭಗ್ನಾವಶೇಷವಾದ ಇಟಲಿಯು ಪುನರ್ಘಟಿತವಾದಂತೆ ಚಿಂದಿ ಚೂರಾದ ಕನ್ನಡವು ಬೆಳಗಬೇಕಾಗಿದೆ..... ಇಟಲಿಯ ವಾಸದಿಂದ ಕನ್ನಡದ ಕಡೆಗೆ ನಿಮ್ಮ ಆದರ ವಿಶ್ವಾಸಗಳು ದ್ವಿಗುಣಿತವಾಗಲಿ...."

ಪೇಜಾವರ ಸದಾಶಿವರ ಸೃಜನಶೀಲ ಸಾಹಿತ್ಯಾಸಕ್ತಿಯ ಫಲವಾಗಿ ೧೯೩೮ರ ಸುಮಾರಿಗೆ ಇಂಗ್ಲೆಂಡಿನಲ್ಲಿದ್ದ ಗೋಕಾಕರೊಡನೆ ಪತ್ರ ವ್ಯವಹಾರ ಸುರುವಾಯಿತು. ತಮ್ಮ ಸ್ವಭಾವನುಸಾರ ಗೋಕಾಕರ ಕೃತಿಯೊಂದರ ಬಗ್ಗೆ ತಮ್ಮ ಪ್ರಾಮಾಣಿಕವಾದ ಅಭಿಪ್ರಾಯವನ್ನು ಕೊಟ್ಟದ್ದು, ಮುಂದೆ, ವೇಲ್ಸ್‌ದ ಗೆಳೆಯನೊಬ್ಬನನ್ನು ಮುಂದಿಟ್ಟುಕೊಂಡು ಗೋಕಾಕರನ್ನು ಒಮ್ಮೆ ಕಂಡದ್ದು, ತಮ್ಮ 'ವರುಣ', 'ನಾಟ್ಯೋತ್ಸವ' ಕವನಗಳನ್ನೂ ಕಳಿಸಿ ಅಂಥ ಹೊಸ ದೃಷ್ಟಿಯ ಕೃತಿಗಳ ಸಾರ್ಥಕ್ಯದ ಬಗ್ಗೆ ಸಾಶಂಕರಾದದ್ದು, ಅದಕ್ಕೆ ಗೋಕಾಕರು "ಅವಶ್ಯವಾಗಿ ಮುಂದುವರಿಸಿರಿ, ನಾನು ಸಹ ಈ ರೀತಿಯಲ್ಲಿ ಬರೆಯಲಾರೆ" ಎಂದು ಉತ್ತರಿಸಿದ್ದು - ಇವೆಲ್ಲ ವಿಷಯಗಳನ್ನು ಗೋಕಾಕರೇ ವಿವರವಾಗಿ ವರ್ಣಿಸಿದ್ದಾರೆ (ಜೀವನ ೧೯೪೦) ಮುಂದೆ ಕರುಳಿನ ಬೇನೆಯಿಂದ ಗೋಕಾಕರು ಒದ್ದಾಡಿದ್ದಾಗ ಅನುಕಂಪವನ್ನು ತೋರಿದ ತಾನೇ ದೊಡ್ಡ ಕರುಳಿನ ಬೇನೆಗೆ ತುತ್ತಾದರಲ್ಲ!

ಅದು ಏಪ್ರಿಲ್ ತಿಂಗಳ ೧೯೩೯ ನೆಯ ಇಸವಿ. ರೋಗದ ಹೆಸರು ಪೆರಿಟೊನೈಟಿಸ್. ಆಂಟಿಬಯಾಟಿಕ್ಸ್ ಲಭ್ಯವಿರುವ ಈಗಿನ ದಿನಗಳಲ್ಲಿ ಅದೊಂದು ಪ್ರಾಣಾಂತಿಕ ರೋಗವೇನಲ್ಲ. ಆದರೆ ಆ ರೋಗಕ್ಕೆ ಪರಿಣಾಮಕಾರಿಯಾದ ವಿಧಾನ ಯುರೋಪದಲ್ಲಿ ಸಹ ಆಗ ಸಿದ್ಧವಿರಲಿಲ್ಲ. ಸದಾಶಿವರು ಮೇ ಯಲ್ಲಿ ಒಂದು ತಿಂಗಳು ಚಿಕಿತ್ಸೆ ಮಾಡಿಸಿಕೊಂಡಾದ ಮೇಲೆ ತುಸು ಗುಣವೆನಿಸಿತು. ಜೂನ್‌ನಲ್ಲಿ ಸಿರಾಕ್ಯೂಸ್ ತನಕ ಹೋಗಿ ಬಂದರು.

ಆ ಊರಿನಲ್ಲಿ ಪ್ರಾಚೀನ ಗ್ರೀಕ್ ರಂಗಭೂಮಿಯ ಮಾದರಿಯಲ್ಲಿ ಕಟ್ಟಿದ ಅತ್ಯಂತ ವಿಸ್ತಾರವಾದ ನಾಟ್ಯಗೃಹವಿದ್ದು ಪ್ರತಿ ಮೂರು ವರ್ಷಕ್ಕೊಮ್ಮೆ ಕ್ಲಾಸಿಕಲ್ ನಾಟಕಗಳನ್ನು ಪ್ರಯೋಗಿಸುತ್ತಾರೆ. ೧೯೩೯ನೆಯ ವರ್ಷ, ಸೊಫೊಕ್ಲಿಸ್, ಯುರಿಪಿಡಿಸ್ ಮುಂತಾದವರ ನಾಟಕಗಳನ್ನೂ ಅಭಿನಯಿಸಲಿದ್ದುದರಿಂದ, ಪೇ. ಸ. ರು. ಅತ್ಯಂತ ನಿತ್ರಾಣರಾಗಿದ್ದರೂ ಹೋಗಿ ನೋಡಿ ಬಂದರು. ಅದರ ಬಗ್ಗೆ 'ಜಯಕರ್ನಾಟಕ'ಕ್ಕೆ ಸಚಿತ್ರ ಲೇಖನವೊಂದನ್ನು ಬರೆಯಬೇಕೆಂದು ಸಂಕಲ್ಪಿಸಿದ್ದರು.

ಆದರೆ ರೋಗ ಮತ್ತೆ ಮೇಲ್ವಾಯ್ದು ಬಂತು. ಜಿನೋವಾದ ಬಳಿಯ ಒಂದು ವಿಶ್ರಾಮಧಾಮದಲ್ಲಿ (Sanitorium) ಮೂರು ತಿಂಗಳು ಕಳೆಯಬೇಕೆಂದು ಡಾಕ್ಟರರು ವಿಧಿಸಿದರು. ಏನಿಲ್ಲದೆ ಮನ ತೆರೆದು ಪತ್ರ ಬರೆಯುವ ಸ್ವಭಾವ ಅವರದು. ಈಗಂತೂ ಎಲ್ಲರಿಗೂ ತಂದೆ, ತಾಯಿ, ವಾಸುದೇವ, ಗೋಕಾಕರು, ವಾಮನ ಭಟ್ಟ, ಇವರೆಲ್ಲರಿಗೂ ಒಂದಲ್ಲೊಂದು ರೀತಿಯಲ್ಲಿ ತಮ್ಮ ಬೇನೆಯ ಬಗ್ಗೆ, ಮುಂದಿನ ಆಶೋತ್ತರಗಳ ಬಗ್ಗೆ ಉಲ್ಲೇಖ ಮಾಡುತ್ತಲೇ ಇದ್ದರು.

ದಿ. ೪. ೬. ೧೯೩೯ ರಂದು ತಂದೆಗೆ ಪತ್ರ ಬರೆದರು. ಅದನ್ನು ವಿಮಾನ ಮಾರ್ಗವಾಗಿ ಕಳುಹಿಸಬೇಕೆಂಬ ಒತ್ತಡ ಮೂಡಿತು.

"ಸಮಯಕ್ಕೆ ಸರಿಯಾಗಿ ಆಸ್ಪತ್ರೆಗೆ ಹೋದೆನಾದ್ದರಿಂದ ಅಪರೇಶನ್ ಇಲ್ಲದೆ ಹೊರಗೆ ಬಂದೆ..... ಆದರೇನು ನಾನು ಆಸ್ಪತ್ರೆಯಲ್ಲಿದ್ದಾಗ ನೀವಿಬ್ಬರೂ ಅಸ್ವಸ್ಥರಾಗಿದ್ದಿರಿ. ಈಗ ಸ್ವಲ್ಪ ವಾಸಿ ಅಂತ ತಿಳಿಯವವರೆಗೆ ನನಗೆ ಅದೇ ಆಲೋಚನೆ.

'.... ಸುಮಾರು ಒಂದು ತಿಂಗಳು ಮಿಲಾನೋ ಆಸ್ಪತ್ರೆಯಲ್ಲಿದ್ದು ಆ ನಗರದ ಹವೆಯು ರೋಗಿಗಳಿಗೆ ಅಷ್ಟೊಂದು ಹಿತಕರವಲ್ಲದ ಕಾರಣ ಜಿನೋವದ ಹತ್ತಿರವಿರುವ ಸಮುದ್ರ ತೀರದ ಈ ಸಣ್ಣ ಪಟ್ಟಣಕ್ಕೆ ಬಂದಿದ್ದೇನೆ. ಇಲ್ಲಿ ಉದರ ರೋಗಗಳಲ್ಲಿ ಪ್ರವೀಣರಾದ ಡಾಕ್ಟರೊಬ್ಬರಿರುವ ಆಸ್ಪತ್ರೆ ಸನಿಟೋರಿಯಮ್ ಒಂದಿದೆ. ಈ ಸ್ಥಳದಲ್ಲಿ ಎರಡು ಎರಡೂವರೆ ತಿಂಗಳ ತನಕವಾದರೂ ಇರಬೇಕು. ಆಮೇಲೆ ಒಂದು ತಿಂಗಳ ಮಟ್ಟಿಗೆಯಾದರೂ ಮಿಲಾನೋನಲ್ಲಿದ್ದು ನನ್ನ ಪರೀಕ್ಷೆಗಳನ್ನೂ ಅಕ್ಟೋಬರಿನಲ್ಲಿ ಮುಗಿಸಿಕೊಂಡು ನವೆಂಬರಿನಲ್ಲಿ ಊರ ಕಡೆ ಬರಬೇಕೆಂದಿದ್ದೇನೆ. ಇನ್ನು ದೇವರ ಕೈಯಲ್ಲಿದೆ."

ಇಷ್ಟರ ತನಕ ಹಾಸಿಗೆಯಲ್ಲೇ ಇದ್ದೇನೆ. ಇನ್ನೂ ಸ್ವಲ್ಪ ಜ್ವರವಿದೆಯಾದ ಕಾರಣ ಹಾಸು ಬಿಡುವುದಕ್ಕೆ ಡಾಕ್ಟರರ ಅಪ್ಪಣೆಯಿಲ್ಲ. ಆದರೆ ಒಂದೆರಡು ವಾರಗಳಲ್ಲಿ ಹೊರಗೆ ಹೊರಡುವ ಹಾಗಾದೀತೆಂಬ ಭರವಸೆಯಿದೆ. ಆಮೇಲೆ ಸಮುದ್ರ ತೀರಕ್ಕೆ ಹೋಗಿ, ಅಲ್ಲಿ ಸೂರ್ಯರಶ್ಮಿಯಲ್ಲಿ ಮರಳ ಮೇಲೆ ಮಲಗಿಕೊಂಡು ಸ್ನಾನ ಮಾಡಬೇಕು. ನನ್ನ ರೋಗಕ್ಕೆ ಯಾವ ವಿಶೇಷವಾದ ಮದ್ದೂ ಇಲ್ಲವಂತೆ. ಹೊಟ್ಟೆ ತುಂಬಾ ಊಟ. ಯಾವ ಪಥ್ಯವೂ ಇಲ್ಲವಂತೆ. ಬಿಸಿಲಿನ ಸ್ನಾನ, ಸ್ವಚ್ಛವಾದ ಗಾಳಿ. ಈಗೇನೊ ಇಂಜೆಕ್ಷನ್‌ಗಳೂ ನುಂಗುವುದಕ್ಕೆ ಮಾತ್ರೆಗಳೂ ತಿನ್ನುವುದಕ್ಕೆ ತೈಲವೂ ಇವೆ. ಬಹುಶಃ ಕಾಲಾಂತರದಲ್ಲಿ ಇವುಗಳಲ್ಲಿ ಅನೇಕ, ಕೊನೆಗೆ ಕೆಲವಾದರೂ ನನ್ನ ಮದ್ದಿನ ಪೆಟ್ಟಿಗೆಯಿಂದ ಹೊರಟು ಹೋದಾವು.

(ಇದಾದ ಮೇಲೆ ಸದಾಶಿವರು 'ನನ್ನ ಕವಿತೆಗಳು' ಎಂಬ ಮಿತ್ರ ಮಂಡಳಿಯ ಪ್ರಕಟಣೆ ವಾಮನ ಭಟ್ಟರು ಸಂಪಾದಿಸಿದ್ದು, ಇದರ ಕುರಿತು ೧೦-೧೨ ಸಾಲು ಬರೆದಿದ್ದಾರೆ)

ಈ ಪತ್ರವನ್ನು ಈಗ ಸ್ವಲ್ಪ, ಮತ್ತೆ ಸ್ವಲ್ಪ ಎಂಬುದಾಗಿ ಬರೆಯುವುದಕ್ಕೆ ಮೂರು ದಿನ ಹಿಡಿಯಿತು. ಒಮ್ಮೆಯೇ ಬರೆಯುವಷ್ಟು ಇನ್ನೂ ಶಕ್ತಿಯಿಲ್ಲ.... "

ಈ ಕೊನೆಯ ವಾಕ್ಯ ಯಾರ ಎದೆಯನ್ನೂ ನಡುಗಿಸುವಂತಹದು. ಆಮೇಲೆ ಅಖಂಡ ಮೂರು ತಿಂಗಳ ಕಾಲ ಆ ಪೆರಿಟಿನೈಟಿಸ್ ಅವರನ್ನು ಒಂದೇ ಸಮನೆ ಶೋಷಣೆ ಮಾಡುತ್ತ ನಡೆಯಿತು. ಹತ್ತಿರ ತನ್ನವರೆನ್ನುವವರು ಬಳಿಯಲ್ಲಿ ಇಲ್ಲ. ಸಂಪರ್ಕಿಸಬೇಕೆಂದರೂ ಯುದ್ಧದ ಉರಿಗಾಳಿಯಿಂದ ಕಿಂಚಿತ್ತೂ ಸಾಧ್ಯವಿಲ್ಲ. ಇಷ್ಟಾದರೂ ತಮ್ಮ ಸಾವು ಸನ್ನಿಹಿತವಾಗಿದೆಯೆಂದು ಅವರು ತಿಳಿದಿರಲಿಲ್ಲ. ಅವರ ಥೀಸಿಸ್ ಬರಹದ ಕೆಲಸ ಮುಕ್ಕಾಲು ವಾಸಿ ಮುಗಿದಿತ್ತು. ರೋಗ ಹೀಗೆ ಮುಂದುವರಿದರೆ ಈ ವರ್ಷವಲ್ಲ, ಮುಂದಿನ ವರ್ಷಕ್ಕೆ ಅದನ್ನು ಸಾದರಪಡಿಸಬೇಕಾದೀತು, ಎಂದೇ ಭಾವಿಸಿದ್ದರು.

ಆದರೆ ಸೆಪ್ಟೆಂಬರ್ ಕೊನೆಯಲ್ಲಿ ಮಾತ್ರ ಪೇಜಾವರರಿಗೆ ತಮ್ಮ ಸಾವು ಸಮೀಪಿಸಿದ್ದುದರ ಅರಿವಾಗಿರಲು ಸಾಕು. ಆ ವೇಳೆಗೆ ಅವರು ಮೂರು ಬಗೆಯಲ್ಲಿ ಒದ್ದಾಡುವಂಥ ಸ್ಥಿತಿ ಇದ್ದಿತು. ಒಂದು ದೈಹಿಕವಾದ ನೋವು - ನಿತ್ರಾಣ, ಇನ್ನೊಂದು ತಲೆಯಲ್ಲಿ ತುಂಬಿರುವ ಸಾಹಿತ್ಯಿಕ ಕಾರ್ಯ, ಈ ಯಾವುದನ್ನೂ ಮಾಡಲಾರದಂಥ ಅಸಹಾಯ ಸ್ಥಿತಿ. ಮತ್ತೊಂದು ತನ್ನವರೆನ್ನುವ ತಂದೆ - ತಾಯಿ, ಬಂಧುಗಳು, ಪ್ರೀತಿಯ ಹೆಂಡತಿ - ಮಗು, ಸ್ನೇಹಿತರು - ಇವರಾರೂ ಹಾಸುಗೆಯ ಬಳಿ ಇಲ್ಲದ್ದು. ಮಾತ್ರವಲ್ಲ. ಸಾವಿರಾರು ಮೈಲಿನ ಆಚೆ ಇದ್ದದ್ದು.

ಅವರಿಗೆ ಹತ್ತಿರ ಇದ್ದಿರಬಹುದಾದವರು ಒಬ್ಬರೇ. ಅವರೇ ಇಟಲಿಯಲ್ಲಿ ಭಾರತದ ರಾಯಭಾರಿಯಾಗಿದ್ದ ಸೇನರು. ಸದಾಶಿವರ ಬೇನೆಯ ಸುದ್ದಿ ತಿಳಿದಾಗ ಆಗಸ್ಟಿನಲ್ಲಿ ಅವರೂ ಅವರ ಪತ್ನಿಯೂ ಸೆನೆಟೋರಿಯಮ್‌ಗೆ ಹೋಗಿ ಬಂದರು. ಇವರನ್ನು ನೋಡಿಕೊಳ್ಳುತ್ತಿದ್ದ ಡಾ. ಸ್ಕಾಟಿ (Scotti) ಎಂಬುವರನ್ನು ಕಂಡು ಬಂದಿದ್ದರು. ಆದರೆ ಮಿಲಾನೊದಲ್ಲಿದ್ದ ಸೇನರನ್ನು ಕೂಡಲೇ ಲಂಡನ್ನಿಗೆ ವರ್ಗಾಯಿಸಲಾಯಿತು. ಲಂಡನ್ನಿನಲ್ಲಿದ್ದಾಗ ಅಲ್ಲಿನ ಹೈಕಮಿಶನರರ ಕಚೇರಿಯ ಮೂಲಕ ಸದಾಶಿವರ ಯೋಗಕ್ಷೇಮ ತಿಳಿದುಕೊಳ್ಳಲು ಯತ್ನಿಸಿದರಂತೆ. ಯುದ್ಧದ ದಿನಗಳು. ಮೇಲಾಗಿ ಇವರಿದ್ದ ಆಸ್ಪತ್ರೆ ಒಳನಾಡಿನಲ್ಲಿ ಮೂಲೆಯಲ್ಲಿದ್ದುದು. ಹೀಗಾಗಿ ಸೇನರಿಗೆ ಏನು ಮಾಡಲಿಕ್ಕೂ ಆಗಲಿಲ್ಲ. ಅವರ ಲಂಡನ್ ನಿರ್ಗಮನ ತಿಳಿಯದೆ ಸದಾಶಿವರು ತಮ್ಮ ಉಲ್ಬಣಾವಸ್ಥೆಯಲ್ಲಿ ಒಂದು ಪತ್ರ ಬರೆದಿದ್ದರು. ಆದರೆ ಆ ಪತ್ರ ಸೇನರಿಗೆ ತಲುಪಲೇ ಇಲ್ಲ. ಸದಾಶಿವರ ಅಂತ್ಯಾವಸ್ಥೆಯ ಬಗ್ಗೆ ಅವರು No one has it more than myself ಎಂದು ಪರಿತಪಿಸಿದ್ದಾರೆ.

ಅಕ್ಟೋಬರ್ ೧೮, ೧೯೪೫. ಆ ದಿನ ಕೇವಲ ೨೭ರ ಪ್ರಾಯದ ಪೇಜಾವರ ಸದಾಶಿವರು ಕೊನೆಯುಸಿರೆನ್ನೆಳೆದರು. ಆ ಕ್ಷಣದಲ್ಲಿ ಡಾಕ್ಟರಾದರೂ ಇದ್ದರೊ ಇಲ್ಲವೊ (ನಿತ್ಯದ ರೋಗಿ,

ತಾನೇ) ಒಂಟಿ ಜೀವ; ಅತ್ಯಂತ ಅಸಹನೀಯ ಗಳಿಗೆಯಲ್ಲಿ ವಿಲಿವಿಲಿ ಒದ್ದಾಡುತ್ತ ಪ್ರಾಣಕ್ಕೆ ಎರವಾದರು.

ಆ ವರ್ಷಾಂತ್ಯವೇ, ತಾನು ಮರಳಿ ಬಂದಾಗ ತನ್ನ ದೇಹದಾರ್ಢ್ಯವನ್ನು ನೋಡಿ ಆಶ್ಚರ್ಯಪಡುವಿ ಎಂದು ತಾಯಿಗೆ ಭರವಸೆಯಿತ್ತಿದ್ದರು. 'ಭರ್ಜರಿ ಸೂಟ್ ಧರಿಸಿ, ಫಾರಿನ್ ರಿಟರ್ನ್ಡ್ ನಾಮಾಂಕಿತನಾಗಿ ಎದುರು ಬಂದು ನಿಂತೆನೆಂದರೆ ಸ್ವಾಗತಕ್ಕೆ ಸಿದ್ಧನಾಗು' ಎಂದು ಬಾಬೂರಾವ್ ಪ್ರಭುಗಳಿಗೆ ಎಚ್ಚರ ನೀಡಿದ್ದರು. ಕುಟುಂಬ ವಿಚಾರದಲ್ಲಿ, ತಂದೆಯ ಆರ್ಥಿಕ ಭಾರ, ತಮ್ಮಂದಿರ ಶಿಕ್ಷಣ, ಹೆಂಡತಿ - ಮಗುವಿನ ಪಾಲನೆ ಈ ಎಲ್ಲ ಜವಾಬ್ದಾರಿಯನ್ನು ಹೊರಲು ಸನ್ನದ್ಧರಾಗಿದ್ದರು.

'ಇಟಲಿಯ ಅನುಭವಗಳು' - ಮತ್ತಿತರ ಲೇಖನಗಳನ್ನು ಬರೆದು ಕಳಿಸಲಿದ್ದೇನೆ - ಎಂದು ಪತ್ರಿಕೆಗಳವರಿಗೆ ಆಶ್ವಾಸನವಿತ್ತಿದ್ದರು. ಗೋಕಾಕರಿಂದ ಉತ್ತೇಜನ ಹೊಂದಿ 'ನಾಟ್ಯೋತ್ಸವ'ದ ರೀತಿಯ ಕವನಗಳನ್ನು ಬರೆಯುವುದಾಗಿ ನಿರ್ಧರಿಸಿದ್ದರು. ಈ ಯಾವುದನ್ನೂ ಅವರಿಗೆ ನಡೆಸಲಾಗಲಿಲ್ಲ. ಕನ್ನಡ ಸಾಹಿತ್ಯಕ್ಕೆ ಉಜ್ವಲ ಭವಿಷ್ಯವನ್ನು ಮೂಡಿಸಬಲ್ಲ ಓರ್ವ ಪ್ರತಿಭಾನ್ವಿತನನ್ನು ಸೆಳೆದೊಯ್ದು ದೇವರು ನಮ್ಮನ್ನೆಲ್ಲ ನಿರಾಶೆಗೊಳಿಸಿದ. God won't let us down ಎಂದು ದೃಢವಾಗಿ ನಂಬಿದ್ದ ಪೇಜಾವರ ಸದಾಶಿವರಾಯರ ಆ ನಂಬುಗೆಯನ್ನೆ ಸಟೆಯಾಗಿಸಿದ.

ಸದಾಶಿವರ ಪಾರ್ಥಿವ ಶರೀರವನ್ನು ಪಾಶ್ಚಾತ್ಯ ಪದ್ಧತಿಯಂತೆ ಸಮಾಧಿ ಮಾಡಿದರು.

ಸದಾಶಿವರು ಅಲ್ಲಿ ಬಿಟ್ಟು ಹೋಗಿದ್ದ ಅವಶೇಷಗಳೆಂದರೆ ಕೆಲವು ಇಂಗ್ಲಿಶ್ ಹಾಗೂ ಇಟಾಲಿಯನ್ ಪುಸ್ತಕಗಳು, ಒಂದು ಕೋಡಕ್ ಕ್ಯಾಮೆರಾ, ಕೆಲವು ಚಿತ್ರಗಳು ಮತ್ತು ಅಂಚೆ ಚೀಟಿಯ ಆಲ್ಬಮ್ ಮಾತ್ರ. ಕ್ಯಾಮೆರಾವನ್ನು ಡಾ. ಸ್ಕಾಟಿ ಅವರಿಗೆ ಕೊಡಬೇಕೆಂದು ಪೇ.ಸ.ರೇ ಹೇಳಿದರಂತೆ. ಚಿತ್ರಗಳನ್ನು ಪೇ.ಸ.ರ ಒಬ್ಬ ಪರಿಚಯದವರು ತೆಗೆದುಕೊಂಡು ಹೋದರಂತೆ. ಆ ಪುಸ್ತಕಗಳನ್ನು ಒಳಗೊಂಡಿದ್ದ ಒಂದು ಟ್ರಂಕು ಊರನ್ನು ತಲುಪಿತು. ಅವುಗಳನ್ನು ಅವರ ಪತ್ನಿ ಅಲ್ಯೋಸಿಯಸ್ ಕಾಲೇಜಿನ ಗ್ರಂಥಾಲಯಕ್ಕೆ ದಾನವಾಗಿ ಕೊಟ್ಟರೆಂದು ತಿಳಿಯುತ್ತದೆ. ಇತ್ತ ಆಕೆ ಹೈಸ್ಕೂಲ್ ಶಿಕ್ಷಣವನ್ನು ಮುಂದುವರಿಸಿದ್ದರು. ಆದರೆ ದಿ. ೮. ೭. ೧೯೩೪ರಂದು ವಿಷಮ ಜ್ವರದಿಂದ ತೀರಿಕೊಂಡರು. ಅವರ ವಂಶದ ಕುಡಿಯಾದ ಹೀರಾ ಚಿಕ್ಕಪ್ಪಂದಿರ ಆಶ್ರಯದಲ್ಲಿ ಬೆಳೆದು, ಶ್ರೀ ಶಾಮಸುಂದರ ಎಂಬವರನ್ನು ಮದುವೆಯಾದರು.

ಕನ್ನಡಿಗರು ಮಾತ್ರ ಈ ಪ್ರತಿಭಾಪುತ್ರನನ್ನು ಮರೆಯಲಿಲ್ಲ. ಗೋಕಾಕರು ಮರಳಿ ಬಂದು ಸಾಂಗಲಿಯ ಕಾಲೇಜಿನಲ್ಲಿ ಪ್ರಾಚಾರ್ಯರಾಗಿ ನಿಂತಾಗ, ಸದಾಶಿವರಾಯರ ಒಂದು ಪ್ರಸಿದ್ಧ ಕವನದ ಹೆಸರಿನಲ್ಲೇ 'ವರುಣ ಕುಂಜ' ಎಂಬುದನ್ನು ಪ್ರಾರಂಭಿಸಿ, ಪ್ರತಿವಾರ ಸಾಹಿತ್ಯಿಕ ಸಂವಾದವನ್ನು ನಡೆಯಿಸುತ್ತಿದ್ದರು. ಮುಗಳಿಯವರು ಅದನ್ನು ಮುಂದುವರಿಸಿದರಲ್ಲದೆ ಪೇ. ಸ. ರ. ಕವನಗಳ ಸಂಕಲನ 'ವರುಣ'ವನ್ನು ಹೊರ ತಂದರು. 'ಬಿರುಸು', 'ಬಾಡೂರಿನ ಸೊಬಗು?',

'ನನ್ನ ಲೇಖನ' ಇವೇ ಮೊದಲಾದ ಕತೆ, ಲಲಿತ ಬರಹಗಳನ್ನು (ಈ ಮುಂಚೆ ವಿವಿಧ ಪತ್ರ್ಯಪುಸ್ತಕಗಳಲ್ಲಿ ಕಾಣಿಸಿಕೊಂಡವುಗಳನ್ನು) ಡಾ. ನಾ. ದಾಮೋದರ ಶೆಟ್ಟಿಯವರು ಸಂಕಲಿಸಿ ಅವರ ವಾಚಿಕೆಯಾಗಿ ಪ್ರಕಟಿಸಿದ್ದಾರೆ. ಮುಂಬಯಿಯ ಕರ್ನಾಟಕ ಸಂಘದವರು ಅವರ ಹೆಸರಿನಲ್ಲಿ ಪ್ರತಿ ವರ್ಷ ಉದಯೋನ್ಮುಖರ ಕವನ ಸಂಗ್ರಹಕ್ಕೆ ಪ್ರಶಸ್ತಿಯನ್ನು ನೀಡುತ್ತ ಬಂದಿದ್ದಾರೆ.



# ೬ ಪೇಜಾವರ ಸದಾಶಿವರಾಯರ ಕೆಲವು ಪತ್ರಗಳು

ಪೇಜಾವರರ ಪತ್ರ ಸಾಹಿತ್ಯ ವಾರಾಣಸಿಯ ವಾಸ್ತವ್ಯದ ಕಾಲದಿಂದಲೇ ಆರಂಭವಾಯಿತು. ಊರು ಬಿಟ್ಟು ಹೊರಗೆ ಇದ್ದುದಲ್ಲವೆ? ತಮ್ಮ, ತಂದೆಗೆ ಬರೆದ ಪತ್ರಗಳು ಇಂಗ್ಲಿಷ್‌ನಲ್ಲಿ ಇವೆ. ತಾಯಿಗೆ ಮತ್ತು ಸಾಹಿತ್ಯಿಕ ಮಿತ್ರರಿಗೆ ಬರೆದವುಗಳು ಹೆಚ್ಚಾಗಿ ಕನ್ನಡದಲ್ಲಿ! ಒಂದೂ ಕಾಟು ಹೊಡೆಯದ, ಏಕ ಪ್ರಕಾರದ ಮುದ್ದಾದ ಬರವಣಿಗೆ. ಮನೆಜನ, ಬಂಧು ಬಳಗ, ಸಾಹಿತ್ಯಕರು, ಪತ್ರಿಕೆಗಳವರು - ಎಲ್ಲರಿಗೂ ಏಕಪ್ರಕಾರವಾಗಿ ಪತ್ರ ಬರೆಯುತ್ತಿದ್ದರು. ಪತ್ರ ಮುಖೇನ ಅವರು ಮಾಸ್ತಿ, ಅ.ನ.ಕೃ., ಕಲ್ಯಾಣಮ್ಮ ಮೊದಲಾದ ಲೇಖಕರೊಡನೆ ನಿಕಟ ಸಂಪರ್ಕವಿರಿಸಿಕೊಂಡಿದ್ದರು. ದೂರದ ತಾರಾನಾಥರೊಂದಿಗೂ ಸಹ. ಅವರು ಪತ್ರದ ಕೊನೆಯಲ್ಲಿ ಬರೆಯುತ್ತಿದ್ದ 'Yours eternally' ಎಂಬುದನ್ನು ವಾಸುದೇವರು ಮೋಜಿನ ವಿಷಯವಾಗಿ ಇತರರೆದುರು ಹೇಳುತ್ತಿದ್ದರು.

ತಂದೆಯವರಿಗೆ ಬರೆದ ಪತ್ರಗಳಲ್ಲಿ ಆದರಭಾವ ಮತ್ತು ವಿಧೇಯತೆ ಒಡೆದು ತೋರುತ್ತಿದ್ದಿತು. ಅವರ ಆರೋಗ್ಯದ ಬಗ್ಗೆ ಮೇಲಿಂದ ಮೇಲೆ ವಿಚಾರಿಸುತ್ತಿದ್ದರು. ಅವರದು ಎಷ್ಟೆಂದರೂ ದೊಡ್ಡ ಕುಟುಂಬ. ಹಿರಿಯ ಮಗನಾದ ತಾನು ಬೇಗ ಹಣ ಗಳಿಸುವಂತಾಗಬೇಕು, ಸಂಸಾರ ಭಾರದಿಂದ ಅವರನ್ನು ಮುಕ್ತ ಮಾಡಬೇಕು - ಎನ್ನುವ ಮನದಳಲನ್ನು ಆಗಾಗ ವ್ಯಕ್ತ ಮಾಡುತ್ತಿದ್ದರು.

ತಾಯಿ? ಅವಳ ಬಗೆಗಿನ ವಾತ್ಸಲ್ಯಭಾವ ಆತ್ಯಂತಿಕವಾದದ್ದು, ಅವಳಿಗೆ ಬರೆದ ಒಂದು ಪತ್ರದಲ್ಲಿಯ ಮಾತಿದು:

> 'ಕಷ್ಟ ಕಾಲದಲ್ಲಿ ಹೃದಯವನ್ನು ಬಿಚ್ಚಿ ನೋವುಗಳನ್ನು, ಸಂಕಷ್ಟಗಳನ್ನು ಹೇಳಿಕೊಂಡು ಅಳಬೇಕಾದರೂ ತಾಯಿ ಬೇಕು, ಸುಖದ ಸಮಯದಲ್ಲಿ ಹೃದಯಸಂತೋಷವನ್ನು ಹಾಡಿಕೊಂಡು ನಗಬೇಕಾದರೂ ತಾಯಿ ಎಂಬುವಳು ಬೇಕು.'

ಒಡಹುಟ್ಟಿದ ವಾಸುದೇವರಿಗೆ ಬರೆದ ಪತ್ರಗಳೂ ಆತ್ಮೀಯ ಭಾವದಿಂದ ತುಂಬಿವೆ. ನಮಗೆ ದೊರೆತ, ಸದಾಶಿವರು ಬರೆದ ಪತ್ರಗಳಲ್ಲೆಲ್ಲ ಇವರಿಗೆ ಬರೆದವುಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ.

ಇಲ್ಲಿ ಅವರ ಆಯ್ದ ಕೆಲವು ಪತ್ರಗಳನ್ನು ಕೊಡುತ್ತಿದ್ದೇವೆ.

## ತಾಯಿಗೆ

೧

ಮಿಲಾನೊ

೧-೯-೧೯೩೭

ಅಮ್ಮಾ, ಈ ಮೊದಲು ನಾನು ನಿನಗೆ ಬರೆದ ಕಾಗದವು ಬಂದು ತಲಪಿತಷ್ಟೆ. ಅದನ್ನು ವಿಮಾನದಿಂದ ಹಿಂದುಸ್ಥಾನಕ್ಕೆ ಕಳುಹಿಸಿದ್ದೆ. ಆದರೆ ಕೆಲವು ವಾರದಲ್ಲಿ ಒಂದೆರಡು ವಿಮಾನಗಳು ಮುರಿದು ನೀರಿಗೆ ಬಿದ್ದು ಹೋದುದಾಗಿ ಪತ್ರಿಕೆಯಲ್ಲಿ ವರ್ತಮಾನ. ಆದುದರಿಂದ, ನನ್ನ ಮೊದಲಿನ ಕಾಗದವು ನಿನಗೆ ಮುಟ್ಟದಿದ್ದರೂ ಇರಬಹುದೆಂಬ ಸಂಶಯದಿಂದ ಈ ಕಾಗದವನ್ನು ಬರೆದಿದ್ದೇನೆ.

ಈ ಪಟ್ಟಣಕ್ಕೆ ಬಂದು ಇದೀಗ ಎಂಟು ಹತ್ತು ದಿವಸವಾಗುತ್ತಾ ಬಂತು. ಬಂದ ಮೂರು ನಾಲ್ಕು ದಿವಸಗಳಲ್ಲಿ ನಿಮ್ಮೆಲ್ಲರ ಯೋಚನೆಯಿಂದ ಸ್ವಲ್ಪ ಕೊರಗಿ ಹೋಗಿದ್ದೆ. ಊಟವೇ ಬೇಕಾಗಿರಲಿಲ್ಲ. ಈಗೀಗ ಕೊಂಚ ಅಭ್ಯಾಸವಾಯಿತು. ನಾಲ್ಕು ಮಂದಿ ಗೆಳೆಯರು ಸಿಕ್ಕಿದರೆ, ಪಟ್ಟಣದ ಹಿಡಿತವು ದೊರೆತರೆ, ಭಾಷೆಯ ವ್ಯವಹಾರ ಜ್ಞಾನವು ಬಂದರೆ, ಆ ಮೇಲೆ ಅಷ್ಟೊಂದು ಕಷ್ಟವಾಗುವುದಿಲ್ಲ. ಮನೆಯ ಯೋಚನೆಯೂ ಕೊಂಚ ಕಡಿಮೆಯಾಗುತ್ತದೆ.

ಆಹಾರದ ವಿಚಾರವಾಗಿ ಬಹಳ ಯೋಚನೆ ಮಾಡುತ್ತಿದ್ದೆ. ನಾಲ್ಕು ದಿನದ ಹಿಂದಿದ್ದ ಕಷ್ಟವು ನನಗೆ ಈ ಹೊತ್ತು ತೋರುವುದಿಲ್ಲ. ಮನೆಯಲ್ಲಿ ತಮಾಷೆಗಾಗಿ ಅದು ತಿನ್ನುತ್ತೇನೆ, ಇದು ತಿನ್ನುತ್ತೇನೆ ಎಂದು ನಿನ್ನನ್ನು ಕೆಣಕಲು ಯತ್ನಿಸುತ್ತಿದ್ದೆನಾದರೂ, ಇಲ್ಲಿ ಸಸ್ಯಾಹಾರದ ಹೊರತು, ಮೊಟ್ಟೆಯ ಹೊರತು, ಬೇರೇನೂ ಮುಟ್ಟುವುದಿಲ್ಲ. ಚಳಿಗಾಲದಲ್ಲಿ, ಒಂದಲ್ಲ ಒಂದು ಬಗೆಯ ಮಾಂಸಾಹಾರವು ಅಗತ್ಯವಂತೆ. ನಾನಂತೂ, ಹೆಚ್ಚೆಂದರೆ ಮೊಟ್ಟೆಯ ಹೊರತು ಬೇರೇನೂ ತೆಗೆದುಕೊಳ್ಳುವುದಿಲ್ಲವೆಂದು ನಿರ್ಧಾರ ಮಾಡಿದ್ದೇನೆ.

ಇಲ್ಲಿಯೂ ಮೂರು ಮಂದಿ ಹಿಂದುಸ್ಥಾನದವರಿದ್ದಾರೆಂದು ಬರೆದಿದ್ದೆ. ಅವರಲ್ಲಿ ಒಬ್ಬರು ಬಂಗಾಳದವರು. ಇಬ್ಬರು ಪಂಜಾಬಿನವರು. ಮೊನ್ನೆ ಆದಿತ್ಯವಾರ ಬಂಗಾಳದವರಾದ ಶ್ರೀ ಸೇನ್ ಅವರು ನನ್ನನ್ನು ಅವರ ಮನೆಗೆ ಊಟಕ್ಕೆ ಕರೆದಿದ್ದರು. ಇಲ್ಲಿ ಅವರು ಒಬ್ಬರೇ ಇದ್ದಾರೆ. ಹೆಂಡತಿ ಮಕ್ಕಳನ್ನು ಕಲಕತ್ತೆಗೆ ಯುದ್ಧದ ಸಮಯದಲ್ಲಿ ಕಳುಹಿಸಿದ್ದಾರೆ. ಆದಿತ್ಯವಾರ ಅವರೇ ಅಡುಗೆ ಮಾಡುತ್ತಾರೆ. ಇಲ್ಲಿ ಕಾಯಿಪಲ್ಯಗಳಿಗೂ ದವಸ ಧಾನ್ಯಗಳಿಗೂ ಕೊರತೆಯಿಲ್ಲ. ಬೇಕಷ್ಟು ಸಿಗುತ್ತದೆ. ಮೊನ್ನಿನ ಅವರ ಅಡುಗೆಯು ಬಹಳ ಚೆನ್ನಾಗಿತ್ತು. ಆ ದಿನ ಮಧ್ಯಾಹ್ನವೂ ರಾತ್ರಿಯೂ ಅಲ್ಲಿಯೇ ಊಟ ಮಾಡಿದ್ದೆ.

ಪ್ರತಿ ಆದಿತ್ಯವಾರವೂ ಅವರಲ್ಲಿಗೆ ಬಂದು ಊಟ ಮಾಡಿ ಹೋಗಬೇಕೆಂದು ಆಹ್ವಾನವಿದೆ. ಅವರ ಮನೆಯಲ್ಲೇ ಉಳಿದುಕೊಳ್ಳುವಂತೆಯೂ ಹೇಳಿದ್ದಾರೆ. ಆದರೆ ಅವರು ಇಲ್ಲಿ ಇನ್ನೆಷ್ಟು ಸಮಯವಿರುವರೆಂಬ ನಿಶ್ಚಯವಿಲ್ಲದಿದ್ದುದರಿಂದ, ಈ ಸ್ಥಳವನ್ನು, ಈಗಿರುವ ಹಾಸ್ಟೆಲನ್ನು ಬಿಟ್ಟು ಹೋಗಲು ಹಿಂದು ಮುಂದು ನೋಡುತ್ತೇನೆ. ಆದರೂ ಇನ್ನೊಮ್ಮೆ ಬರೆಯುವಾಗ, ನಾನು ಅವರಲ್ಲಿಗೆ ಹೋಗುತ್ತೇನೆಯೋ ಇಲ್ಲವೊ ತಿಳಿಸುತ್ತೇನೆ. ಅವರಲ್ಲಿ ಉಳಿದುಕೊಂಡರೆ ತಿಂಗಳಿಗೆ ೩೦ - ೩೫ ರೂಪಾಯಿಯಷ್ಟು ನನಗೆ ಉಳಿತಾಯವುಂಟು.

ನೀನು ಮಂಗಳೂರಿಗೆ ಯಾವಾಗ ಹೋಗುತ್ತೀ? ಅಕ್ಕಯ್ಯನ ಹತ್ತಿರ ನಾನು ಒಟ್ಟಾರೆ ೧೦ ರೂಪಾಯಿ ಕೊಟ್ಟಿದ್ದೇನೆ. ನಿನ್ನ ಹೊಸ ಮೊಮ್ಮಗಳನ್ನು ನೋಡಿ ಏನು ಅಭಿಪ್ರಾಯಪಡುವೆಯೋ ತಿಳಿಸು.

ರಂಜನಿಗೂ[ಸೋದರಿ] ಉಜಿರೆಯ ಭಾವನಿಗೂ ಕಾಗದ ಬರೆದಿದ್ದೇನೆ. ರಂಜನಿ ಯಾವಾಗ ಮನೆಗೆ ಬರುತ್ತಾಳೆ, ಬರೆ.

ಮನೆಯಲ್ಲಿ ಎಲ್ಲರೂ ಕ್ಷೇಮವಷ್ಟೆ? ಮಗು, ವಸಂತಿ, ರಮಾನಂದ, ಸರೋಜಿನಿ ಮತ್ತು ಹರಿ, ಇವರಿಗೆ ನನ್ನ ಆಶೀರ್ವಾದಗಳು, ಮಕ್ಕಳಿಗೆ ಆಗಿಂದಾಗ್ಗೆ ನನ್ನ ಜ್ಞಾಪಕ ಮಾಡು.

ಬೇರೇನು ಬರೆಯಲಿ? ಸುಮ್ಮನೆ ವ್ಯಥೆ ಮಾಡಬೇಡ. ನನಗೆ ಇಲ್ಲಿ ಆಹಾರದ ವಿಚಾರದಲ್ಲಿ ಏನೂ ಕಷ್ಟವಾಗುವುದಿಲ್ಲ. ಎರಡು ವರ್ಷದ ನಂತರ, ನನ್ನ ದೇಹ ದಾರ್ಢ್ಯವನ್ನು ನೋಡಿ, ನೀನೇ ಆಶ್ಚರ್ಯಪಡಲಿಕ್ಕುಂಟು.

ಆಸ್ರಣ್ಣರ ಮನೆಯವರನ್ನೂ, ಬಡಕತೆಯವರನ್ನೂ ನಾನು ಕೇಳಿದ್ದೇನೆಂತ ಹೇಳು. ನಿನ್ನ ಮತ್ತು ಅಪ್ಪಯ್ಯನ ಆಶೀರ್ವಾದವನ್ನು ಬೇಡುತ್ತೇನೆ.

ಇಂತಿ ನಿನ್ನ,

**ಸದಾಶಿವ**

## ಜೆ. ವಾಮನ ಭಟ್ಟರಿಗೆ

೨

ಮಿಲಾನೊ

೮-೧೧-೩೮

ಹಾಗಾದರೆ ನಿಮ್ಮ ಉಪನ್ಯಾಸಗಳಿಗೆ ಮಿಕ್ಸ್‌ಡ್ ರಿಸೆಪ್ಶನ್. ಹಳಬರು ಏನು ಬೇಕಾದರೂ ಹೇಳಿಕೊಳ್ಳಲಿ, ಮುಂದಿನ ಜನಾಂಗವು ನಮ್ಮ ಅಭಿಪ್ರಾಯವನ್ನೇ ಸಮರ್ಥಿಸುತ್ತಿದೆ ಎಂಬುದು ಒಂದು ದೊಡ್ಡ ಸಮಾಧಾನ. ನಿಮ್ಮ ಪುಸ್ತಕವನ್ನು ಇಷ್ಟರಲ್ಲೇ ನಾಲ್ಕು ಸಾರೆ ಓದಿದ್ದೇನೆ. ಪ್ರತಿಯೊಬ್ಬ ನಗಬೇಕಾಗಿದ್ದಲ್ಲಿ ನಗು ಬಂದೇ ಬರುತ್ತದೆ.

ಕನ್ನಡ ಪುಸ್ತಕಗಳಲ್ಲಿ ನನ್ನನ್ನು ನಗಿಸುವವರು ಬಹಳ ಕಡಿಮೆ. ನಮ್ಮ ಸಾಹಿತ್ಯದಲ್ಲಿ ಮಾತ್ರವೇಕೆ, ಜೀವನದಲ್ಲಿಯೂ ಕೂಡ ಇಷ್ಟರತನಕ ವಿನೋದಕ್ಕೆ ಸ್ಥಾನವಿರಲಿಲ್ಲ. ವಿನೋದವೆನ್ನುವಾಗ ನಮ್ಮ ವಿದೂಷಕರ slap stick comedy ಮಾತೆನ್ನುತ್ತಿಲ್ಲ. E.V. Lucas, Bellor ುವರ ಸರಳ ಹಾಸ್ಯವನ್ನು ಉದಾಹರಣೆಯಾಗಿ ಹೇಳುತ್ತಿದ್ದೇನೆ. ನಖಲೆ [?] ಮಾಡಲ್ಪಟ್ಟ ಪಂಡಿತರಿಗೆ ಅವು ರುಚಿಸಲಿಕ್ಕಿಲ್ಲ. ಮೊದಲೆಂದಂತೆ ಹಾಸ್ಯವನ್ನು ಸ್ವೀಕರಿಸುವುದಕ್ಕೂ ಒಂದು ಸಂಸ್ಕೃತಿ ಬೇಕು. ಆ ಸಂಸ್ಕೃತಿ ನಮ್ಮ ಜನಕ್ಕೆ ಸ್ವಲ್ಪ ಕಡಮೆ.

ಬರೆಯಬೇಕೆಂದು ಮನಸ್ಸು ಆತುರಪಡುತ್ತಿದೆ. ತಕ್ಕ ವಸ್ತುಸಂಗ್ರಹವೂ ಸಾಧಾರಣ ಮಟ್ಟಿಗಿದೆ. ಆದರೆ ನನ್ನ ಶಕ್ತಿಯಲ್ಲೆ ನನಗೆ ನಂಬಿಕೆಯಿಲ್ಲ; ಆ ಸ್ಥಿತಿಯಲ್ಲಿದ್ದೇನೆ. ನನ್ನ ಶೈಲಿಗೆ ಸ್ವಲ್ಪ ಅರವಿಟ್ಟು ಹೊಸತು ಮಾಡಿಕೊಳ್ಳುವುದಕ್ಕಾಗಿ ನೀವು ನಾಲ್ಕು ಕನ್ನಡ ಪುಸ್ತಕಗಳನ್ನು ಕಳುಹಿಸಿಕೊಡಬೇಕಾಗಿ ಕೇಳಿಕೊಳ್ಳುತ್ತೇನೆ. ಎಳೆಂಟು ತಿಂಗಳಲ್ಲಿ ಹಿಂದೆ ಬರಬೇಕೆಂದಿದ್ದೇನೆ; ಬಂದಾಗ ಬೆಲೆಯನ್ನು ಸಲ್ಲಿಸುತ್ತೇನೆ. ಈ ಕೆಳಗಿನ ಪುಸ್ತಕಗಳನ್ನು ಓದಿದರಾಗಬಹುದೆಂದಿದ್ದೇನೆ. ೧. ಗುಂಡಪ್ಪನವರ ಜೀವನ ಮತ್ತು ಸಾಹಿತ್ಯ (ಹೆಸರು ಸರಿಯಾಗಿ ನೆನಪಿಲ್ಲ). ೨. ಬೇಂದ್ರೆಯವರ ಸಾಹಿತ್ಯದ ಮೇಲೊಂದು ಉಪನ್ಯಾಸ (ಅದರ ಹೆಸರೂ ನೆನಪಿಲ್ಲ). ೩.ಗೋಕಾಕರ ಕವಿಕಾವ್ಯಮಹೋನ್ನತಿ. ಮೈಸೂರು ವಿಶ್ವವಿದ್ಯಾನಿಲಯದವರ ಇಂಗ್ಲೀಷ್ ಶಬ್ದಕೋಶವು ಹೊರಟಿದ್ದರೆ......

........ ಇದರೊಂದಿಗೆ ಕಳುಹಿಸಿದ 'ನಾಟ್ಯೋತ್ಸವ'ವನ್ನೂ ನೋಡಿರಿ. ನಾಟ್ಯೋತ್ಸವವು ನನ್ನ ಇಲ್ಲಿಯ ಉದ್ಯಮಗಳಲ್ಲೊಂದು. ಸ್ವಲ್ಪ ಹೊಸ ದೃಷ್ಟಿ. ಈ ತರಹ ಕವಿತೆಗಳ ವಿಚಾರ ನೀವೇನನ್ನುತ್ತೀರಿ? ನನಗೆ ಬರೆಯ ಹೋಗುವ ದಾರಿಯು ಸರಿಯಾಗಿದ್ದರೆ ಮುಂದೆ ಹೋಗುವುದಕ್ಕೆ ಉತ್ಸಾಹ ಬರುತ್ತದೆ. ಫಲರಹಿತವಾಗಿದ್ದರೆ ಕೊನೆಗೆ ಜಿಗುಪ್ಸೆಯುಂಟಾಗುತ್ತದೆ. ಅದಕ್ಕಾಗಿ ಸಮಯದಲ್ಲೇ ಮುಂದು ಹಿಂದು ನೋಡಿಕೊಳ್ಳುವುದಕ್ಕೆ ಯತ್ನಿಸುತ್ತಿದ್ದೇನೆ.

ತಮ್ಮವನೇ ಆದ

ಸದಾಶಿವರಾವ್

೩

೨೯-೬-೧೯೩೯

ಪ್ರಿಯ ವಾಮನಭಟ್,

................. ಪೆರಿಟೋನ್ಯಾಟಿಸ್ ಎಂಬ ಉದರರೋಗದಿಂದ ಎರಡು ತಿಂಗಳಿಂದ ನರಳುತ್ತಿದ್ದೇನೆ. ಸುಮಾರು ಒಂದು ತಿಂಗಳು ಮಿಲಾನೊ ಆಸ್ಪತ್ರೆಯಲ್ಲಿದ್ದು, ಆ ನಗರದ ಹವೆಯು ರೋಗಿಗಳಿಗೆ ಅಷ್ಟೊಂದು ಹಿತಕರವಲ್ಲದ ಕಾರಣ ಜೆನೋವದ ಹತ್ತಿರವಿರುವ ಸಮುದ್ರತೀರದ ಸಣ್ಣ ಪಟ್ಟಣಕ್ಕೆ ಬಂದಿದ್ದೇನೆ. ಇಲ್ಲಿ ಉದರರೋಗಗಳಲ್ಲಿ ಪ್ರವೀಣರಾದ

ಡಾಕ್ಟರೊಬ್ಬರಿರುವ ಆಸ್ಪತ್ರೆ - ಸೆನಿಟೋರಿಯಮ್ ಒಂದಿದೆ. ಈ ಸ್ಥಳದಲ್ಲೆ ಎರಡು ಎರಡುವರೆ ತಿಂಗಳ ತನಕವಾದರೂ ಇರಬೇಕು. (ಸೆಪ್ಟೆಂಬರ್ ತಿಂಗಳ ವರೆಗೆ ನನ್ನ ಈ ವಿಳಾಸಕ್ಕೆ ಕಾಗದ ಬರೆಯಬೇಕು) ಆಮೇಲೆ ಒಂದು ತಿಂಗಳ ಮಟ್ಟಿಗೆಯಾದರೂ ಮಿಲಾನೋವಿನಲ್ಲಿದ್ದು, ನನ್ನ ಪರೀಕ್ಷೆಗಳನ್ನು ಒಕ್ಟೋಬರ್‌ನಲ್ಲಿ ಮುಗಿಸಿಕೊಂಡು ನವೆಂಬರ್‌ನಲ್ಲಿ ಊರಿನ ಕಡೆ ಬರಬೇಕೆಂದಿದ್ದೇನೆ. ಇನ್ನು ದೇವರ ಕೈಯಲ್ಲಿದೆ.

'ನಮ್ಮ ಕವಿತೆಗಳು' ಸಂಗ್ರಹದ ವಿಚಾರವು ಅತ್ಯುತ್ತಮವಾಗಿದೆ...... ಇಲ್ಲಿ ಎಲ್ಲರನ್ನು ಒಟ್ಟು ಸೇರಿಸಿರುವುದು ಅನುಕೂಲವೂ ಸಂತೋಷಕರವೂ ಆಗಿದೆ. ಆದರೆ....... ಈ ಕವನ ಸಂಗ್ರಹದಿಂದ ಮೂರು ನಾಲ್ಕು ವ್ಯಕ್ತಿಗಳನ್ನು ಹೊರಗೆ ಬಿಟ್ಟಿದ್ದರೆ ಎಷ್ಟೋ ಲೇಸಾಗುತ್ತಿತ್ತು. ನಾನು ಮಂಗಳೂರಿನಲ್ಲಿದ್ದರೆ ನಿಮ್ಮೊಡನೆ ಮತ್ತು ಎಂ. ಎನ್. ಕಾಮತರೊಡನೆ ಖಡ್ಡಾಖಡ್ಡಿಯಾಗುವ ಹಾಗಿದ್ದರೂ ಕವನಗಳು ನಮ್ಮ ಸಂಗ್ರಹದಲ್ಲಿ ಬರದ ಹಾಗೆ ನೋಡಿಕೊಳ್ಳುತ್ತಿದ್ದೆ. ಈ ವಿಷಯದಲ್ಲಿ ನಿಷ್ಠುರಕ್ಕೆ ಹೆದರಬಾರದು. 'ಇದ್ದಿರಲಿ; ಒಂದು ಹೆಚ್ಚು ಒಂದು ಕಡಿಮೆ; ನಂಬರ್ ಜಾಸ್ತಿಯಾಗುತ್ತೆ'. ಅನ್ನುವ ಅಸಡ್ಡೆ ಇರಬಾರದು. ಆ ಕವಿತೆಗಳಲ್ಲಿ ಯಾವ ದೊಡ್ಡ ಪದಾರ್ಥವಿದೆಯೆಂದು ಪ್ರಕಟಿಸಿದ್ದೀರಿ? ನಾನು ಊರಿಗೆ ಬಂದಾಗ ಅಂಥಾ ಕವನಗಳನ್ನು ಟನ್‌ಗಟ್ಲೆಗಳಲ್ಲಿ ಶೇಖರಿಸಿಕೊಡುತ್ತೇನೆ - ನಿಮಗೆ ಬೇಕಿದ್ದರೆ. ಮೈಸೂರವರಿಗೆ ರಾಜರತ್ನಂ ಇದ್ದಾರೆ, ನಮಗೆ ಯಾರೂ ಇಲ್ಲವಲ್ಲ ಅಂತ ಕೊರತೆಯನ್ನು ನೀಗಿಸಲು ಇವರನ್ನೂ ಅದೇ ಕವಿ(?)ಗಳ ಇತರ ಪಂಜ್ತಿಗಳನ್ನು ಪ್ರಕಟಿಸಿದ್ದರೋ? ಆ ಪದ್ಯಗಳು ಒಂದು ರೀತಿಯಲ್ಲಿ ಯಶಸ್ವಿಯಾಗಿದ್ದರೂ ನಮ್ಮ ಪುಸ್ತಕಕ್ಕೆ ಒಪ್ಪಿದ್ದೋ? ಪದ್ಯಗಳು ನಾನು ತೊದಲ್ನುಡಿಯುವ ಕಾಲದಲ್ಲೇ ಬಿಳಿಯ ಗಡ್ಡವನ್ನು ಪಡೆಯುವುದಕ್ಕೆ ಶುರುಮಾಡಿದ್ದವು......

ಇದನ್ನು ಈಗ ಸ್ವಲ್ಪ, ಮತ್ತೆ ಸ್ವಲ್ಪ ಎಂಬುದಾಗಿ ಬರೆಯುವುದಕ್ಕೆ ಮೂರು ದಿನ ಹಿಡಿಯಿತು. ಒಮ್ಮೆಯೇ ಬರೆಯುವಷ್ಟು ಇನ್ನೂ ಶಕ್ತಿಯಿಲ್ಲ. ನವೆಂಬರಿಗೆ ನಿಮ್ಮೆಲ್ಲರನ್ನು ನೋಡುವ ಹಾಗಾದರೆ ಗೆದ್ದೆ, ಅಂದುಕೊಳ್ಳುತ್ತೇನೆ. ಸ್ವಲ್ಪ ಓದುವುದಕ್ಕೆ ಶುರುಮಾಡಬೇಕು, ದೇವರ ದಯೆಯಿಂದ 'ತೀಸಿಸ್' ಬಹುಪಾಲು ಸಿದ್ಧವಾಗಿದೆ. (ಇಲ್ಲವಾದರೆ ಪರೀಕ್ಷೆಗೆ ಕೂಡುವ ಆಲೋಚನೆಯನ್ನೇ ಬಿಟ್ಟು ಈ ವರ್ಷ ವಿಶ್ರಾಂತಿ ಪಡೆಯುತ್ತಿದ್ದೆ.)

ಮರುಪತ್ರದಲ್ಲಿ, ಗೆಲವು ತೋರಿದಾಗ ಇಲ್ಲಿ ಬರೆದ ಕೆಲವು ಕವನಗಳನ್ನು ನಿಮ್ಮ ಅವಗಾಹನೆಗೆ ಕಳುಹಿಸುತ್ತೇನೆ.

ಭವದೀಯ

**ಸದಾಶಿವರಾಯ**

## ಪ್ರೊ. ಗೋಕಾಕರಿಗೆ*

೪

ಮಿಲಾನೊ
೧೭-೪-೩೮

ಗೆಳೆಯ ಗೋಕಾಕರಿಗೆ,

ನೀವು ಪ್ರೀತಿಯಿಟ್ಟು ಬರೆದ ಕಾಗದವು ನನಗೆ ಎಷ್ಟೋ ಸಂತೋಷವನ್ನು ಕೊಟ್ಟಿತು. ಈಸ್ಟರ್ ರಜೆಯಾದ್ದರಿಂದ ಗೆಳೆಯರೆಲ್ಲಾ ಅವರವರ ಮನೆಗಳಿಗೆ ಹೊರಟು ಹೋಗಿದ್ದಾರೆ. ಒಬ್ಬೊಂಟಿಗನಾಗಿದ್ದೇನೆ. ಹೀಗೆಯೇ ಮನೆಯ ನೆನಪು ನನಗೂ ಆಗುವಾಗ ನಿಮ್ಮ ಕಾಗದವು ಬಂದು, ಹಳೆಯ ಗೆಳೆಯನೊಬ್ಬನನ್ನು ಸರಿಯಾದ ಸಮಯದಲ್ಲಿ ದೊರಕಿಸಿಕೊಂಡ ಹಾಗಾಯಿತು. ನಮ್ಮ ಪರೀಕ್ಷೆಯೂ ಜೂನ್ ತಿಂಗಳಲ್ಲಿ ಆರಂಭವಾಗಿ ಜುಲೈ ಅಂತ್ಯದವರೆಗೂ ನಡೆಯುತ್ತದೆ. ಅಗೊಸ್ತಿನಲ್ಲಿ ನಿಮ್ಮ ಬರವನ್ನು ಕಾದಿರುತ್ತೇನೆ.

ಸುಮಾರು ಎರಡು ವರ್ಷಗಳ ನಂತರ ಮತ್ತೆ ಲೇಖನಿಯನ್ನು ಕೈಗೆತ್ತಿ ನಾಲ್ಕು ಕವನಗಳನ್ನು ಗೀಚಿ ಹಾಕಿದ್ದೇನೆ. ನೀವು ಆಕ್ಸಫರ್ಡಿನಿಂದ ಕಳುಹಿಸಿದ ನನ್ನ ಕವಿತೆಗಳ ವಿಮರ್ಶೆಯು ನನ್ನ ಜಡಜೀವನದ ಏಕನಾದವನ್ನು ಮುರಿದು ಹೊಸ ಉತ್ಸಾಹವನ್ನು ಕೊಟ್ಟಿದೆ. ಯಂತ್ರಗಳ ನಡುವಿರಬೇಕಾದ ನನ್ನ ಜೀವನಕ್ಕೆ ಕಾವ್ಯ ಜೀವನದ ನಿಜವಾದ ಪರಿಚಯವು ಎಂದಾದರೂ ಆಗಬಹುದೇ ಎಂಬ ಸಂಶಯದಲ್ಲಿದ್ದೆ. ನಿಮ್ಮನ್ನು ಅರಿತ ಮೇಲೆ, ಆಗಬಹುದೇನೋ ಅಂತ ತೋರಿತು. ನೋಡಿ, ನಿಜವಾದ ವಿಮರ್ಶೆಯು ಇನ್ನೂ ಪಕ್ವವಾಗಿಲ್ಲ ನಮ್ಮ ಕಡೆ. ನನ್ನ ಕವನಗಳನ್ನು ಗೆಳೆಯರಾದ ಕಡೆಂಗೋಡ್ಲು, ನಾರಾಯಣಭಟ್, ಸೇಡಿಯಾಪು ಇವರು ನೋಡಿದ್ದಾರೆ; ಆದರೆ ನಿಜವಾಗಿ ವಿಮರ್ಶೆ ಮಾಡುವುದಕ್ಕೆ ಏನು ತಿಳಿದುಕೊಂಡೇನೋ ಎಂಬ ಅಳುಕು. 'ಇದು ಬಹಳ ಚೆನ್ನಾಗಿದೆ. ಇದಕ್ಕಿಂತ ಇದು ಚೆನ್ನು. ಅದು ಪರವಾ ಇಲ್ಲ.' ಈ ತರದ ವಿಮರ್ಶೆ ನನಗೆ ಯಾವ ಸಮಾಧಾನವನ್ನೂ ಕೊಟ್ಟಿಲ್ಲ. ನನ್ನ ಮನಸ್ಸು ನೋಯಬಾರದೆಂಬ ಕರುಣೆಯಿಂದ ಹೀಗೆ ನುಡಿಯುತ್ತಾರೇನೋ ಅನ್ನಿಸುತ್ತದೆ ಹಲುವು ಬಾರಿ. ಹೀಗಿರುವಾಗ ನೀವು ಬರೆದ ನಾಲ್ಕು ಸ್ಪಷ್ಟವಾದ ಮಾತುಗಳನ್ನು ನನಗೆ ನಾನು ಎಲ್ಲಿದ್ದೇನೆ ಎನ್ನುವುದನ್ನು ತೋರಿಸಿಕೊಟ್ಟ ಹಾಗಾಯಿತು. ಅದಕ್ಕಾಗಿಯಾದರೂ ನಾನು ನಿಮಗೆ ಋಣಿಯಾಗಿರಬೇಕು.

ನೀವು ಇನ್ನೊಮ್ಮೆ ಬರೆಯುವಾಗ ಈ ನಾಲ್ಕು ಕವನದ ವಿಷಯ ನಿಮಗೆ ತೋರಿದ್ದನ್ನು ತಿಳಿಸಿರಿ. ಪರೀಕ್ಷೆಗೆ ಓದುವುದರ ನಡುವಿನಲ್ಲಿಯೂ ಬೇರೊಂದು ಹೊಸ ಕವನವನ್ನು ಮೊದಲು ಮಾಡಿದ್ದೇನೆ - ನಮ್ಮಲ್ಲಿಯ Dance Festivalನ ಕುರಿತು. ಹೀಗೆ ಮೊದಲಾಗಿ,

* ಗೋಕಾಕರಿಗೆ ಬರೆದ ೪, ೫, ೬ ನಂಬರಿನ ಪತ್ರಗಳು ಸದಾಶಿವರಾಯರಿಗೆ ಜಡ್ಡು ಬರುವುದಕ್ಕೆ ಮುಂಚೆ ಬರೆದವುಗಳು.

ಲೋರೆನ್‌ಸೋ ಇಲ್ ಮನ್ನೀಫಿಕೊ
ಹಾಡನರ್ಪಿಸಿಹೆನು ತಕೊ
ತೇಲಿ ಬರುವ ಜಾಸ್ ಗಾನ
ನಮ್ಮ ಕುಣಿತಕಲ್ಲವೇನ
ಅದೋ ದ್ರಾಕ್ಷ ರಸದ ಪಾನ

ಹೀಗೆ ಮುಂದುವರಿದು,

ಜೀವನಕ್ಕೆ ಎರಡು ಮುಖ
ಒಂದು ಸುಖ ಒಂದು ದುಃಖ
ನಾಳಿನರಿವು ಯಾಕೊ ಸಖಾ
ಇಂದಿಗಿಹುದು ತುಂಬ ಸುಖ
ದೀಪವೆಲ್ಲ ಆರುತಿಹುದು
ನೋಡು ಗಾನವೇರುತಿಹುದು
ಕುರುಡು ನೀಲ ಬೆಳಕಿನಲ್ಲಿ
ಕೊಳ್ಳೊ ನಿನ್ನ ಬಾಹುಗಳಲಿ
ಅಗೊ ಅವಳ...
ನಮ್ಮ ಕುಡಿತಕಲ್ಲವೇನ ?

ಈ ತರದ ಬೊಹೇಮಿಯನ್ ತತ್ವವನ್ನು ಸಾರುತ್ತಾ

'ಯಾರೆ ನೀನು?' 'ನಾನು ಸ್ಪಾನ್ಯ'
'ಯಾರೆ ನೀನು?' 'ಒಹೊ ಜರ್ಮನ್ಯ'
'ನೀನು ಯಾರೆ?' 'ನಾನು ಫ್ರಾಂಚ'
'ಮತ್ತೆ ನೀನೊ?' 'ನಾನು ಗ್ರೇಚ'

ಎಂಬ ಪ್ರಶ್ನೋತ್ತರಗಳನ್ನು ಬೇರೆ ಬೇರೆ ರಾಷ್ಟ್ರದ ನಾಟ್ಯಮಂದಿರಕ್ಕೆ ಬಂದಿದ್ದ ಸುಂದರಿಯರಿಂದ ಪಡೆಯುತ್ತಾ ಅರೆ ಮತ್ತನಾಗಿ ಕವಿಯು ಮುಂದೆ ಹೋಗುತ್ತಾನೆ.

ಆದರೆ ಅರ್ಥದಲ್ಲೇ ನಿಲ್ಲಿಸಿದ್ದೇನೆ. ಈ ಕವಿತೆಯನ್ನು ಅರ್ಥ ಮಾಡಿಕೊಳ್ಳುವವರು ನಮ್ಮಲ್ಲೆಷ್ಟು ಮಂದಿ? ಲೋರೆನ್ ಸೋ ಇಲ್ ಮುನೀಫಿಕೊ ಅಂದರೆ, Lorenzo the magnificient, Lord of Florence, great Statesman, Poet, Scientist who like his Florence to be gay; ಜಾಸ್ ಅಂದರೆ Jazz band; ನಾಟ್ಯದಲ್ಲಿ, 'ದೀಪವೆಲ್ಲ ಆರುತಿಹುದು, ನೋಡು ಗಾನವೇರುತಿಹುದು' ಎಂಬಲ್ಲಿ ನಾಟ್ಯ, ಸ್ಪಾನ್ಯ (Spain), ಜರ್ಮನ್ಯ (Germany), ಫ್ರಾಂಚ (France) ಗ್ರೇಚ (Greece) ಎಂತಲೂ, ಮತ್ತೂ ಒಂದೆಡೆ ಬರುವ ವೆನೇತ್ಸಿಯದ ಕಡೆದ ಗಾಜು; ಸಾರ್ದೇನಿಯದ ಸುರೆಯ ಮೋಜು ಎಂಬಲ್ಲಿ

Venetian cut glass (ಬಹಳ ಹೆಸರಾದದ್ದು) Sardenian wine (ಇದೂ ಬಹಳ ಹೆಸರಾದದ್ದು) ಎಂತಲೂ ನೀವು ಓದುಗರಿಗೆ ತಿಳಿಸಬೇಕಾದರೆ ಎಷ್ಟು ಪುಟಗಳ ಟಿಪ್ಪಣಿಯನ್ನು ಕೊಡಬೇಕು? ಇದನ್ನೆಲ್ಲಾ ಆಲೋಚಿಸುವಾಗ, ನಮ್ಮ ಜನತೆಗೆ ಈ ತರದ ಕವನಗಳನ್ನು ಬರೆದು ಅರ್ಪಿಸುವುದಕ್ಕೆ ಶ್ರಮಪಡುವುದು ಸಾರ್ಥಕವೇ? ಅಂತ ಸಂಶಯಬರುತ್ತದೆ. ಇನ್ನೊಂದು ರೀತಿಯಲ್ಲಿ ಯೋಚಿಸಹತ್ತಿದರೆ, ಇನ್ನೊಂದು ಪ್ರಳಯದವರೆಗೂ ನಮ್ಮ ಜನತೆಗೆ ಶತಮಾನಗಳ ಸಂಪ್ರದಾಯ ದಾಸ್ಯದ ಗೂಡನ್ನು ಮುರಿದು ಹೊರಗೆ ಹಾರಿಬರುವಷ್ಟು ಶಕ್ತಿಯು ಎಂದಿಗೂ ಬರಲಾರದೊ, ಎಂಬ ಪ್ರಶ್ನೆ ತಾನಾಗಿ ಹುಟ್ಟುತ್ತದೆ. ಹೊಸಗನ್ನಡ ಸಾಹಿತ್ಯವು ಆರಂಭವಾದ ಮೇಲೆ, ಬಹುಶಃ ನಮ್ಮ ಸಾಹಿತಿಗಳಲ್ಲಿ ಯೂರೋಪಿಗೆ ಬಂದು ಹೋದವರು ಏಳೆಂಟು ಮಂದಿಯೇನೋ. ಅವರಲ್ಲಿ ಕವಿಗಳು ಅನ್ನಿಸಿಕೊಳ್ಳುವವರು ನೀವು, ಮತ್ತು ಆ ಶಬ್ದವನ್ನು ಬಹಳ ವಿಸ್ತರಿಸಿಕೊಂಡರೆ ನಾನು. ನಾವಿಬ್ಬರೂ ಕನ್ನಡ ನಾಡಿಗೆ ಯಾವ ಹೊಸ ಮುಡಿಪನ್ನು ಒಪ್ಪಿಸಬೇಕು? ವಿಲಾಯತಿಯ ಈ ಮೂರು ನಾಲ್ಕು ವರ್ಷದ ಪ್ರವಾಸವು ನಮ್ಮ ಜೀವನವನ್ನು ಹೇಗೆ ಮಾರ್ಪಾಟನ್ನು ತಂದು ಹಾಕಿದೆಯೋ ಹಾಗೆಯೇ ಕಲೆಯಲ್ಲಿಯೂ ತಂದು ಹಾಕುವಷ್ಟು ಶಕ್ತಿಯುಳ್ಳದ್ದಾಗಿಲ್ಲವೇ? ನಮ್ಮ ಕವನಗಳಲ್ಲಿ. ೨೦ನೆಯ ಶತಮಾನದ ವಿಲಾಯತಿಯ ಅನುಭವದ ನಿರೂಪಣೆಯಾಗಬೇಕೋ ಬೇಡವೋ? ಈ ವಿಚಾರವಾಗಿ ನಿಮ್ಮೊಡನೆ ದೀರ್ಘವಾಗಿ ಮಾತನಾಡಬೇಕೆಂದಿದೆ.

ನನ್ನ ಕವನಗಳು ಪುಸ್ತಕರೂಪವಾಗಿ ಪ್ರಕಟವಾಗುವುದರ ಬಗ್ಗೆ ನೀವು ನನಗೆ ಸ್ನೇಹಪೂರ್ವಕವಾಗಿ ಬತೆದ ಮಾತುಗಳನ್ನು ಓದಿ ಬಾಯ್ಕಟ್ಟಿದವನಾಗಿದ್ದೇನೆ. ನೀವು ನನ್ನ ಕವನಗಳಿಗೆ ತೋರಿದ ಸೌಹಾರ್ದವನ್ನೂ ಸಹನೆಯನ್ನೂ ಇತರರೂ ತೋರಿಯಾರೇನೋ ಎಂಬ ಭರವಸೆ ನಿಮಗೆ ಮೆಚ್ಚುಕೆಯಾಗದ 'ಕವಿ' ಮತ್ತು 'ಯಾತ್ರಿಕರು' ಇವನ್ನು ಸಂಗ್ರಹದಿಂದ ತೆಗೆದುಹಾಕಿ ಈ ಹೊಸ ನಾಲ್ಕು ಕವನಗಳನ್ನು ಸೇರಿಸಿದ್ದೇವೆ.

ಪರೀಕ್ಷೆಗೆ ಓದುತ್ತಿರುವ ನಿಮ್ಮನ್ನು ಹೆಚ್ಚು ತೊಂದರೆ ಪಡಿಸುವ ಇಷ್ಟವಿಲ್ಲ. ಸಮಯವಾದಾಗ ನನಗೆ ಉತ್ತರ ಬರೆದರೆ ಸಾಕು. ನನ್ನ ಓದು ಚೆನ್ನಾಗಿಯೆ ಸಾಗುತ್ತಿದೆ. ನಿಮ್ಮದೂ ಹಾಗೆಯೇ ಅಂತ ಭಾವಿಸುತ್ತೇನೆ. ಪರೀಕ್ಷೆಯಲ್ಲಿ ನೀವು ಕೋರಿದ ವಿಜಯವನ್ನು ದೇವರು ದಯಪಾಲಿಸಲಿ ಎಂಬ ಪ್ರಾರ್ಥನೆ.

ಇಂತಿ ನಿಮ್ಮ,
ಸದಾಶಿವರಾವ್

**ಇದಕ್ಕೆ ಗೋಕಾಕರ ಟಿಪ್ಪಣಿ :**

ಅವರ ಈ ಪತ್ರದಲ್ಲಿಯ ಕವನವನ್ನೋದಿ ಸಂತೋಷ ಪಟ್ಟು ನಾನು ಹೀಗೆ ಬರೆದೆ: 'ನಿಮ್ಮ ನಾಟ್ಯಗೀತೆಯನ್ನು ಓದಿ ನಾನು ಹಿಗ್ಗಿದೆ. ಇದರಲ್ಲಿ ಎಂತಹ ಹೊಸತನ! ಇಂಥ ಕವನಗಳನ್ನು ನೀವಲ್ಲದೆ ನಮ್ಮ ಪ್ರಾಂತದಲ್ಲಿ ಮತ್ತಾರೂ ಬರೆಯಲಾರರು. ಯುರೋಪಿಗೆ

ಬಂದ ನಾನು ಸಹ ಬರೆಯಲಾರೆ. ಏಕೆಂದರೆ ಜೀವನವನ್ನು ನಿರೀಕ್ಷಿಸುವ ನನ್ನ ದೃಷ್ಟಿಯೇ ಬೇರೆಯಾಗಿದೆ. ನೀವು ಇಂಥ ನೂರಾರು ಕವಿತೆಗಳನ್ನು ಸಂಕೋಚವಿಲ್ಲದೆ ಬರೆಯಬೇಕು. ನೀವು ಬರೆದಷ್ಟೂ ಕನ್ನಡ ಕಾವ್ಯದ ಸಂಪತ್ತಿಯು ಹೆಚ್ಚುವುದು. ಜನರಿಗೆ ಅವು ಅರ್ಥವಾಗುವವೋ ಇಲ್ಲವೆಂಬ ವಿಚಾರವನ್ನು ನೀವು ಬಿಟ್ಟುಬಿಡಿರಿ. ತನಗೆ ರುಚಿಸಿದ್ದರ ಪೂರ್ವಾಪರವನ್ನೆಲ್ಲ ಜನತೆಯು ಎಷ್ಟು ಕಷ್ಟಪಟ್ಟಾದರೂ ತಿಳಿದುಕೊಳ್ಳುತ್ತದೆ.'

ನಾನು ಜುಲೈ ೭ - ೮ ನೇ ತಾರೀಖಿನ ಸುಮಾರು ಹಾಗೆಯೇ ಎಡಿನ್‌ಬರೋದವರೆಗೆ ಸಾಗಿ ಸ್ಕಾಟಲಂಡಿನ ಅನೇಕ ಭಾಗಗಳನ್ನು ನೋಡಿದೆನು. ನೋಡಿ, ಇನ್ನು ಆಕ್ಸಫರ್ಡಿಗೆ ಹೋಗಬೇಕೆನ್ನುವಷ್ಟರಲ್ಲಿ ಆಕಸ್ಮಾತ್ತಾಗಿ ಅಪೆಂಡಿಕ್ಸ್ ಬೇನೆಯು ಭೀಕರ ಸ್ವರೂಪವನ್ನು ತಾಳಲು, - ಶಸ್ತ್ರ ಕ್ರಿಯೆಯಾಗಿ ಮೂರು ವಾರ ಎಡಿನ್‌ಬರೋದ ಆಸ್ಪತ್ರೆಯಲ್ಲಿ ಮಲಗಿಕೊಂಡೆನು! ಇದರಿಂದ ನನ್ನ ಕಾರ್ಯಕ್ರಮವೆಲ್ಲ ತಪ್ಪಿ ಹೋಯಿತು. ನಾನು ಮಾತೃಭೂಮಿಗಾಗಿ ಹೊರಡುವ ದಿನವು ಮುಂದೆ ಬಿದ್ದಿತು. ಇದನ್ನು ಸದಾಶಿವರಿಗೆ ತಿಳಿಸುವುದು ಹೇಗೆ? ಮೊದಲಿನ ಹತ್ತು ಹನ್ನೆರಡು ದಿನ ಬರೆಯುವಷ್ಟು ತ್ರಾಣವು ಸಹ ನನ್ನಲ್ಲಿರಲಿಲ್ಲ. ದಾಯಿಯರು ನನ್ನನ್ನು ನೋಡಿಕೊಳ್ಳುತ್ತಿದ್ದರೂ ನನ್ನನ್ನು ಸಂತವಿಸಲು ಕೆಲವರು ಸ್ನೇಹಿತರು ಎಡಿನ್‌ಬರೋ ಪಟ್ಟಣಕ್ಕೆ ಬಂದಿದ್ದರು. ಎಮ್. ಎಸ್. ದೊರೆಸ್ವಾಮಿ ಎಂಬವರು ಹೈದ್ರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಆಂಗ್ಲಸಾಹಿತ್ಯದ ಪ್ರೊಫೆಸರರಾಗಿದ್ದಾರೆ. ಅವರೂ ಆಗ ನನ್ನ ಬಳಿಯಲ್ಲಿದ್ದರು. ಸದಾಶಿವರಾಯರಿಗೆ ಬರೆಯಬೇಕಾದ ಪತ್ರವನ್ನು ನಾನು ಬಾಯಿಂದ ಹೇಳಿದೆ. ದೊರೆಸ್ವಾಮಿಯವರು ಅದನ್ನು ಕೈಯಿಂದ ಬರೆದರು. ಅದರಲ್ಲಿ ನಡೆದ ವಿಷಯವೆಲ್ಲವನ್ನೂ ಕಾಣಿಸಿತ್ತು.

ಇದಕ್ಕೆ ಉತ್ತರವಾಗಿ ಸದಾಶಿವರಾಯರಿಂದ ಈ ಕಾಗದವು ಬಂದಿತು :

ಶ್ರೀ

ಮಿಲಾನೊ

೧೯ - ೭ - ೩೮

ಗೆಳೆಯ ಗೋಕಾಕರಿಗೆ,

ನೀವು ಬರೆಸಿದ ಕಾಗದವು ಇಂದು ತಲುಪಿತು. ನಿಮ್ಮ ಆರೋಗ್ಯದ ವಿಚಾರವಾಗಿ ತುಂಬಾ ಚಿಂತಿತನಾಗಿದ್ದೇನೆ. ವಿಧಿಯು ಹ್ಯಾಗೆ ಬೆನ್ನು ಹತ್ತಿ ಬರುತ್ತದೆ ನೋಡಿ! ಆದರೆ ಇದ್ದ ಸ್ಥಿತಿಗೇ ಸಮಾಧಾನಪಟ್ಟುಕೊಳ್ಳಬೇಕು. ಈ ಒಪರೇಷನ್ ಇಂಗ್ಲೆಂಡಿನಲ್ಲಾಗುವುದರ ಬದಲಿಗೆ ಫ್ರಾನ್ಸಿಗೆ ಬಂದಾಗಲೋ ಸ್ವಿತ್ಸರ್‌ಲೇಂಡಿನಲ್ಲಿಯೋ ಆಗಿದ್ದರೆ ಭಾಷೆ ಕೂಡ ತಿಳಿಯದೆ ತೊಂದರೆಗೆ ಕಾರಣವಾಗುತ್ತಿತ್ತು. ಇಟಲಿಯಲ್ಲಾಗಿದ್ದರೆ ನಾನಾದರೂ ಇದ್ದೆ.

ದೇವರ ದಯೆಯಿಂದ ನಿಮ್ಮ ಪರೀಕ್ಷೆಯೆಲ್ಲಾ ಮುಗಿದ ಮೇಲೆ ಈ ತಂಟೆ ಬಂತು. ಇದ್ದುದರಲ್ಲೆ ಸಮಾಧಾನ ಪಟ್ಟುಕೊಳ್ಳಿ. ಸ್ನೇಹಿತರಾರೂ ನಿಮ್ಮ ಬಳಿಯಿಲ್ಲಿಲ್ಲದ್ದರಿಂದ ಸ್ವಲ್ಪ

ಬೇಸರ ತೋರಲುಬಹುದು. ಇನ್ನು ಎರಡು ವಾರವಷ್ಟೇ? ಆ ಮೇಲೆ ಎದ್ದು ಓಡಾಡುವ ಹಾಗಾದಾಗ ಅಷ್ಟೊಂದು ತಿಳಿಯುವುದಿಲ್ಲ.

ನನ್ನ ಪರೀಕ್ಷೆ ೨೫ಕ್ಕೆ ಮುಗಿಯುತ್ತದೆ. ನಿಮ್ಮ ಬರವನ್ನು ಎದುರು ನೋಡುತ್ತಿದ್ದೆ. ಎದುರು ನೋಡುತ್ತಿದ್ದೆ ಎನ್ನುವುದು ಸ್ವಲ್ಪ; ದಿನವನ್ನು ಎಣಿಸುತ್ತಿದ್ದೆ ಎನ್ನುವುದೇ ನಿಜ. ನೀವೀಗ ೧೩ - ೧೪ನೇ ತಾರೀಖಿಗೆ ಬರುವುದೆಂದು ಲೆಕ್ಕಹಾಕುತ್ತಿದ್ದೇನೆ. ೧೫ನೇ ತಾರೀಖಿಗೆ ನಾನು ಬುದಪೆಸ್ಟ್‌ನಲ್ಲಿರಬೇಕಾಗಿತ್ತು. ಅಲ್ಲೊಂದು ಕಾರಖಾನೆಯಲ್ಲಿ Practical training ಮಾಡಿಕೊಳ್ಳುವ ಯೋಚನೆಯಿದೆ. ಈಗ ೨೦ನೆಯ ಅಗೊಸ್ತಿಗೆ ಹೊರಟು ಹೋಗುತ್ತೇನೆ. ಆದರೆ ಪರೀಕ್ಷೆ ಮುಗಿದ ಕೂಡಲೆ ವೆನಿಸ್‌ನಲ್ಲಿ ಒಂದು ವಾರವಿದ್ದು ಬರಬೇಕೆಂದಿದೆ. ನೀವು ನನಗೆ ಇದೇ ವಿಳಾಸಕ್ಕೆ ಬರೆಯುತ್ತಿರಿ. ಮಿಲಾನಿಗೆ ಬರುವಾಗ, ನಿಮ್ಮ ರೈಲಿನ ಸಮಯವನ್ನು ನನಗೆ ತಿಳಿಸಿ. ಉಳಿದುಕೊಳ್ಳುವುದಕ್ಕೆ, ನಮ್ಮ ಹಾಸ್ಟೆಲ್‌ನಲ್ಲಿಯೇ ಉಳಿದುಕೊಳ್ಳಬಹುದು. ನಿಮ್ಮ Student card ಏನಾದರೂ ಇದ್ದರೆ ಇನ್ನೂ ಒಳ್ಳೆಯದು.

ಇಟಲಿಯ ಯಾತ್ರಿಕರಿಗೆ 'ರಜಿಸ್ಟರ್ಡ್ ಲೀರಾ' ಸಿಕ್ಕುತ್ತದೆ, ಎಂಬುದು ನಿಮಗೆ ಗೊತ್ತು ತಾನೇ. Cook (ಕುಕ್)ನಲ್ಲಿ ವಿಚಾರಿಸಿರಿ. ಹೆಚ್ಚು ಕೊಂಡುಕೊಳ್ಳಬೇಡಿರಿ. ನೀವು ನಮ್ಮ ಹೊಸ್ಟೆಲ್‌ನಲ್ಲಿರುವಿರಾದ್ದರಿಂದ ದಿನಕ್ಕೆ ೨೫, ೩೦ ಲೀರೆಯ ಹಾಗೆ ಗುಣಾಕಾರ ಹಾಕಿದರೆ ಸಾಕು. ಆ ಮೇಲೆ ಇಲ್ಲಿ ನೋಡಿಕೊಳ್ಳೋಣ.

ಶೀಘ್ರವಾಗಿ ಮರಳಿ ನಿಮ್ಮ ಆರೋಗ್ಯವನ್ನು ಹೊಂದುವಂತೆ ನನ್ನ ಚಿಂತನೆ. ಪರೀಕ್ಷೆ ಮುಗಿದ ಮೇಲೆ ಮತ್ತೊಮ್ಮೆ ಬರೆಯುತ್ತೇನೆ. ಹೆಚ್ಚಾಗಿ ಮನೆಯ ಆಲೋಚನೆ ಮಾಡಬೇಡಿರಿ. ಎಷ್ಟೆಂದರೂ ಇನ್ನು ಒಂದು ತಿಂಗಳಷ್ಟೇ?

ಇತಿ ನಿಮ್ಮ
ಸದಾಶಿವರಾವ್

ಮರಳಿ : ನಿಮ್ಮ ಕಾಗದವನ್ನು ನಿಮಗಾಗಿ ಬರೆದ ನರ್ಸ್ ಅವಳ ಅಕ್ಷರದಷ್ಟೇ ಚೆಲುವಾಗಿದ್ದಾಳೇನು? ಗೋಕಾಕ್, ಜಾಗ್ರತೆಯಾಗಿರಿ! ಎರಡು ಮಕ್ಕಳ ತಂದೆ, ನೀವು.

[ಮೇಲೆ ಹೇಳಿದಂತೆ ಬರೆದವರು: ದೊರೆಸ್ವಾಮಿ ಎಂಬ ಗೋಕಾಕರ ಸ್ನೇಹಿತರು!]

೬

ಮಿಲಾನೊ
೧೯ - ೭ - ೩೮

ಪ್ರಿಯ ಗೋಕಾಕ,

ನಿಮ್ಮೆರಡೂ ಕಾಗದಗಳು ಬಂದು ಮುಟ್ಟಿದವು. ಈ ಸಲ ನಾನು ನಿಮ್ಮನ್ನು ನಿರಾಶೆಪಡಿಸಬೇಕಾಗಿ ಬಂದುದಕ್ಕೆ ವಿಷಾದಪಡುತ್ತೇನೆ. ೧೮ನೆಯ ತಾರೀಖಿಗೆ ನನಗೆ ಜಿನೋವಾಕ್ಕೆ

ಬರುವುದಕ್ಕಾಗುವುದು ಕಷ್ಟವೆಂದು ತೋರುತ್ತದೆ. ಬಹುಶಃ ನಾಳೆ ಇಲ್ಲಿಂದ ಹೊರಟು ಬುದಪೆಸ್ತಿಗೆ ಹೋಗುತ್ತೇನೆ.

ನಿಮ್ಮ ಆರೋಗ್ಯವು ಅಷ್ಟು ಕೆಟ್ಟಿದೆಯೆಂದು ಕೇಳಿ ತುಂಬಾ ವ್ಯಸನವಾಗುತ್ತದೆ. ಊರು ನೋಡುವುದು ಯಾವಾಗಲೂ ನೋಡಿಕೊಳ್ಳಬಹುದು. ಆರೋಗ್ಯದ ವಿಚಾರವಾಗಿ ಜಾಗ್ರತೆ ತೆಗೆದುಕೊಳ್ಳಿರಿ.

ಹಿಂದುಸ್ತಾನವನ್ನು ತಲುಪಿದ್ದಕ್ಕೆ ಬರೆಯಿರಿ. ಆ ಮೇಲೆಯೂ ಸಮಯವಾದಾಗೆಲ್ಲಾ ನಿಮ್ಮ ಸ್ನೇಹಿತನೊಬ್ಬನು ಇಲ್ಲಿದ್ದಾನೆ ಎಂಬುದನ್ನು ಮರೆಯದೆ ಆಗಾಗ ಬರೆಯುತ್ತಿರಿ. ಈ ಬಾರಿ ಭೇಟಿಯಾಗದಿದ್ದುದು ನನಗೊಂದು ನಿಜವಾದ ನಿರಾಶೆಯೇ ಆದರೂ, ನಿಮ್ಮ ನಿತ್ರಾಣದ ವಿಷಯ ಕೇಳಿದ ಮೇಲೆ ನೀವು ಹಾಗೆಯೇ ನೆಟ್ಟಗೆ ಹೊರಟುಹೋಗುವುದೇ ಒಳ್ಳೆಯದೆಂದು ನನಗೂ ತೋರಿತು. ಇಷ್ಟರೊಳಗೆ ನಿಮಗೆ ಸಂಪೂರ್ಣ ಆರೋಗ್ಯ ಲಾಭವಾದೀತೆಂದು ಭಾವಿಸಿ ನಿಮಗೊಂದು heavy programme ಮಾಡಿಟ್ಟಿದ್ದೆ ಇಲ್ಲಿ!

ದೇವರು ಒಳ್ಳೆಯದು ಮಾಡಿದರೆ ಬರುವ ವರ್ಷ ನನಗೂ ಇಲ್ಲಿ ಮುಗಿಯುತ್ತದೆ. ಹಿಂದುಸ್ತಾನದಲ್ಲಿ ಪುನಃ ನೋಡೋಣವಂತೆ. ನಿಮ್ಮ ಈಗಿನ ಪ್ರಯಾಣವು ಯಾವ ತರದ ತೊಡಕೂ ಇಲ್ಲದೆ ಶುಭವಾಗಿ ಸಾಗಲಿ ಎಂತ ಬಯಸುತ್ತೇನೆ.

ಇತಿ ನಿಮ್ಮ
ಸದಾಶಿವರಾವ್

**ಗೋಕಾಕರ ಟಿಪ್ಪಣಿ**

'ದೇವರು ಒಳ್ಳೆಯದು ಮಾಡಿದರೆ ಬರುವ ವರ್ಷ ನನಗೂ ಇಲ್ಲಿ ಮುಗಿಯುತ್ತದೆ.' ಈ ವಾಕ್ಯವನ್ನು ನೆನೆದಾಗೆಲ್ಲ ನನ್ನದೆಗೆ ಮುಳ್ಳು ಚುಚ್ಚುತ್ತದೆ. ಈಗ - ಆದದ್ದನ್ನು ನೆನೆಸಿ - ನಾವು ಏನೆಂದು ಹೇಳಬೇಕು?

ಕಾರ್ಡಿನ ಹಿಮ್ಮಗ್ಗಲು ಮಿಲಾನದಲ್ಲಿಯ 'ಇಲ್ ಡುವ್ವೋವೊ' ಎಂಬ ಕ್ರಿಸ್ತದೇವಾಲಯದ ಚಿತ್ರವಿದೆ.

ನಾನು ಹಿಂದುಸ್ತಾನಕ್ಕೆ ಬಂದ ಮೇಲೆ ಮೊದಲು ಹತ್ತುಹದಿನೈದು ದಿನ ಕೆಲವು ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸಬೇಕಾಗಿ ಬಂದಿತು. ಮುಂದೆ ಆರೋಗ್ಯದ ಸಲುವಾಗಿ ಒತ್ತಟ್ಟಿಗೆ ನಿಂತಾಗ ಯಾರಿಗೂ ಪತ್ರವನ್ನು ಬರೆಯುವಷ್ಟು ಚಟುವಟಿಕೆಯಿರಲಿಲ್ಲ. ಹೀಗೆ ತಿಂಗಳೆರಡು ತಿಂಗಳು ಕಳೆದವು. ಅಷ್ಟರಲ್ಲಿ ಸದಾಶಿವರಾಯರ ಓಲೆ ಬಂತು.

೬

ಮಿಲಾನೊ

೨೦ - ೧೧- ೩೮

ಪ್ರಿಯ ಗೋಕಾಕ್,

ನಿಮ್ಮ ಸಮಾಚಾರವನ್ನು ಕೇಳದೆ ಬಹಳ ಸಮಯವಾಯಿತು. ಇಷ್ಟರಲ್ಲಿ ನಿಮ್ಮ ಪ್ರಯಾಣದ ದಣುವಾರಿಸಲು ವಿಶ್ರಾಂತಿಯನ್ನು ಮುಗಿಸಿ ಕಾಲೇಜಿಗೆ ಸೇರಿರುವಿರಾಗಿ ನೆನಸುತ್ತೇನೆ. ನಿಮಗೆ ಕಾಗದವನ್ನು ಬಹಳ ಅವಸರದಲ್ಲಿ ಬರೆಯುತ್ತಿದ್ದೇನೆ. ಇತ್ತೀಚೆಗೆ ನನಗೂ ಇಟೆಲಿಯ ಹಲವು ಬರೆಹಗಾರರಿಗೂ, ಪತ್ರಿಕಾಕರ್ತರಿಗೂ ಪರಿಚಯವಾಗಿದೆ. ಅದರ ಫಲವಾಗಿ ಅವರಲ್ಲಿ ನಮ್ಮ ಸಾಹಿತ್ಯದ ವಿಷಯ ಒಂದು ತರದ ಕುತೂಹಲವೂ ಉಂಟಾಗಿದೆ. ಈಗ ಒಂದೆರಡು ತಿಂಗಳವರೆಗೆ ನನಗೆ ಸ್ವಲ್ಪ ಬಿಡುವಿದೆ. ಆ ಕಾಲವನ್ನು ನಮ್ಮ ಸಾಹಿತ್ಯದ ಮೇಲೆ ಕೆಲಸ ಮಾಡುವುದಕ್ಕಾಗಿ ವಿನಿಯೋಗಿಸಲು ಸಿದ್ಧನಿದ್ದೇನೆ. ನಮ್ಮ ಕನ್ನಡ ಬರೆಹಗಾರರ ಉತ್ಕೃಷ್ಟವಾದ ಕತೆಗಳು ಇಷ್ಟರಲ್ಲಿ ಇಂಗ್ಲೀಷಿನಲ್ಲಿ ಪ್ರಕಟವಾಗಿರಬೇಕು. ಅವುಗಳನ್ನು ಇಲ್ಲಿಯ ತರಗತಿಗೆ ಒಪ್ಪುವಂತೆ ಆರಿಸಿ ನನಗೆ ಕಳುಹಿಸುವಿರಾದರೆ, ಅವನ್ನು ಅನುವಾದಿಸಿ ಇಲ್ಲಿಯ ಸಣ್ಣ ಕತೆಗಳ ಪತ್ರಿಕೆಗಳಲ್ಲಿ ಪ್ರಕಟಿಸುವುದಕ್ಕೆ ಪ್ರಯತ್ನಿಸುತ್ತೇನೆ. ದಯಮಾಡಿ ಇಂಗ್ಲೀಷ ಅನುವಾದವನ್ನು ಕಳುಹಿಸಿರಿ. ಇಟೇಲಿಯನ್ ಭಾಷೆಯಲ್ಲಲ್ಲದೆ, ಹಂಗೇರಿಯನ್‌ನಲ್ಲಿಯೂ ಪ್ರಕಟವಾಗುವ ಹಾಗೆ ಯತ್ನಿಸಬೇಕೆಂದಿದ್ದೇನೆ. ನನಗೊಬ್ಬ ಹಂಗೇರಿಯನ್ ಬರೆಹಗಾರನ ಗೆಳೆತನವಿದೆ.

ನಿಮ್ಮಲ್ಲಿ ಇನ್ನೊಂದು ಕೇಳುವದಿದೆ. ನೀವು ಬೇಂದ್ರೆಯವರ ಮೇಲೆ ಇಂಗ್ಲೀಷಿನಲ್ಲೊಂದು ಲೇಖನವನ್ನು ಬರೆದಿದ್ದೀರಾಗಿ ಕೇಳಿದ್ದೇನೆ. ಅದನ್ನು ಬೇಂದ್ರೆಯವರ ಇಂದಿನ ಕಾರ್ಯಕಲಾಪಗಳವರೆಗೆ ಹೊಸದಾಗಿಸಿ - ನೀವು ಬರೆದು ಮೂರು ವರುಷವಾಯಿತಷ್ಟೆ? - ನನಗೆ ಕಳುಹಿಸಿರಿ. ಇಲ್ಲಿ 'ಆಸ್ಯಾತಿಕ' ಎಂಬೊಂದು ಚೆಲುವಾದ ಪತ್ರಿಕೆಯಿದೆ. ಅದರಲ್ಲಿ ಆ ಲೇಖನದ ಅನುವಾದವನ್ನು ಪ್ರಕಟಿಸುವುದಕ್ಕೆ ಯತ್ನಿಸುತ್ತೇನೆ. ಈ ಪತ್ರಿಕೆಯು ಆಸ್ಯದ ಸಂಸ್ಕೃತಿಯನ್ನು ಇಲ್ಲಿಯ ಜನರಿಗೆ ತಿಳಿಸುವುದಕ್ಕಾಗಿ, ಸರಕಾರದ ಬೆಂಬಲದಿಂದ ಹೊರಟಿದೆ.

ನೀವು ಈಗ ಏನೇನು ಬರೆಯುತ್ತೀರಿ, ತಿಳಿಸಿರಿ. ನಾನು 'ಸಾಕ್ಷಿ' ಎನ್ನುವ ಒಂದು ಪ್ರಬಂಧ (essay) ಸಂಗ್ರಹವನ್ನು ಕೂಡಿಹಾಕುವ ಉದ್ದೇಶದಿಂದ ಲೇಖನಗಳನ್ನು ಬರೆಯುತ್ತಿದ್ದೇನೆ; - ಇಲ್ಲಿ ಕಂಡ ಕೆಲವು ನೋಟಗಳನ್ನು ಕುರಿತು; ಮನಸ್ಸಿನಲ್ಲಿ ಮೂಡಿದ ಭಾವನೆಗಳ ವಿಚಾರವಾಗಿ. ನಿಮ್ಮ ಉತ್ತರವನ್ನು ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದೇನೆ. ಬೇರೆ ಕವಿತಾ - ಸಂಗ್ರಹವನ್ನು ಹೊರಡಿಸಿದ್ದೀರೋ? ಡೈರಿಯ ಇತರ ಭಾಗಗಳು ಪ್ರಕಟವಾಗಿದೆಯೋ? ನಮ್ಮ ಸಾಹಿತ್ಯದ ವಿಚಾರ ಆಗಿಂದಾಗ್ಗೆ ಬರೆಯುತ್ತಿರಿ. ಇಲ್ಲಿ ಮರುಭೂಮಿಯ ನಡುವಿನಲ್ಲಿದ್ದ ಹಾಗಿದ್ದೇನೆ.

ಇತಿ ನಿಮ್ಮ

ಸದಾಶಿವರಾವ್.

**ಗೋಕಾಕರ ಟಿಪ್ಪಣಿ :**

ಸ್ನೇಹವು ಈಗ ದೃಢವಾಗಿತ್ತು. ಅವರು ಮರಳಿ ಬಂದ ಮೇಲೆ ಸಾಹಿತ್ಯದ ಬಗ್ಗೆ ಮಾತನಾಡಬಹುದಲ್ಲ? ಎಂದುಕೊಂಡಿದ್ದೆ.

ಆದರೆ ಸದಾಶಿವರಾಯರು ಸುಮ್ಮನಿರಲಿಲ್ಲ. ತಮ್ಮ ಒಂದು ನೀಳೋಲೆಯಲ್ಲಿ ನನ್ನೊಂದು ನಾಟಕವನ್ನು ಸುದೀರ್ಘವಾಗಿ ಚರ್ಚಿಸಿದರು. ಅವರು ಅದರ ಮೇಲೆ ಕಳೆದ ವೇಳೆಯನ್ನು ನೆನೆಸಿದರೆ, - ಇವರಿಗಾಗಿ ನಾನೇನೂ ಮಾಡಲಿಲ್ಲವಲ್ಲ ಎಂದು ಸಂಕಟವಾಗುತ್ತದೆ.

೭

ಮಿಲಾನೊ

ಪ್ರಿಯ ಗೋಕಾಕ್,

ಈ ಕಾಗದವನ್ನು ಒಂದು ಸನಿಟೋರಿಯಮ್‌ನಿಂದ ಬರೆಯುತ್ತಿದ್ದೇನೆ. ನಿಮಗೆ ಹೋದ ವರ್ಷ ಬಂದು ತಗುಲಿದ ರೋಗ ನನ್ನನ್ನು ಈ ವರ್ಷ ಉಗ್ರರೂಪಿಯಾಗಿ ಹಿಡಿದುಕೊಂಡಿದೆ. ಇಡೀ ಮೇ ತಿಂಗಳು ಮಿಲಾನೊ ಆಸ್ಪತ್ರೆಯಲ್ಲಿಯೂ ಜೂನಿನಿಂದ ಈ ಆಸ್ಪತ್ರೆ ಸೆನಿಟೋರಿಯಮ್‌ನಲ್ಲಿಯೂ ಹಾಸಿಗೆಯಲ್ಲಿದ್ದೇನೆ. ಈ ತಿಂಗಳ ೨೭ನೇ ತಾರೀಖಿಗೆ ನನ್ನ 'ಡಿಗ್ರಿ' ಬರಬೇಕಾಗಿತ್ತು. ಅಗೊಸ್ತಿನಲ್ಲಿ ಊರಿಗೆ ಹಿಂತಿರುಗುವ ಯೋಚನೆಯಿತ್ತು. ಅದೆಲ್ಲಾ ಗಾಳಿಯಲ್ಲಿ ಹಾರಿಹೋಯಿತು. ಪೆರಿಟೊನ್ಯಾಟಿಸ್ ಸ್ವಲ್ಪ ದೀರ್ಘವಾದ ರೋಗ. ಇಲ್ಲಿ ಡಾಕ್ಟರರು ೬ - ೭ ತಿಂಗಳಾದರೂ ಇರಬೇಕು ಎನ್ನುತ್ತಾರೆ. ಮನೆಯಿಂದ ಹೊರಟು ಮೂರು ವರ್ಷವಾಗುತ್ತಾ ಬಂತು; ಇನ್ನೂ ಇಲ್ಲಿ ನಿಲ್ಲುವುದು ಇಷ್ಟವಿಲ್ಲ. ನನ್ನ 'ತೀಸಿಸ್' ಬಹುಪಾಲು ಸಿದ್ಧವಾಗಿದೆ. ಸೆಪ್ಟಂಬರ್‌ನ ಎರಡನೆಯ ವಾರದ ತನಕ ಇಲ್ಲಿದ್ದು ಬಳಿಕ ಮಿಲಾನಿಗೆ ಹೋಗಿ ಆ ಕೆಲಸವನ್ನು ಮುಗಿಸುತ್ತೇನೆ. Oct. ನಲ್ಲಿ autumn session ಇದೆ - ಪರೀಕ್ಷೆಗಳಿಗೆ. ಆಗ ನನ್ನ ಪರೀಕ್ಷೆಗಳನ್ನು ಮುಗಿಸಿ ತೀಸಿಸ್ ಒಪ್ಪಿಸಿ, ನವೆಂಬರ್‌ನಲ್ಲಿ ಊರಿಗೆ ಹೊರಡುವ ಯೋಚನೆಯಿದೆ. ಇದೂ ಗಾಳಿಯಲ್ಲಿ ಹಾರಿ ಹೋಗಲಾರದೆಂದು ಎಣಿಕೆ. ಇನ್ನು ದೇವರ ಕೈಯಲ್ಲಿ.

ನಿಮ್ಮ ಆರೋಗ್ಯವು ಹೇಗಿದೆ? ನಿಮ್ಮ ಸಮುದ್ರಗೀತೆಗಳ ಪ್ರಕಟಣೆಯಾಗಿದೆಯೊ? ಸಾಹಿತ್ಯದಲ್ಲಿ ಬೇರೆ ಯಾವ ಉದ್ಯಮದಲ್ಲಿ ತೊಡಗಿದ್ದೀರಿ? ಮಿತ್ರಮಂಡಳಿಯು ದಕ್ಷಿಣ ಕನ್ನಡದ ಕವಿಗಳ, ಕವಿತೆಗಳ ಸಂಗ್ರಹವನ್ನು ಮೊನ್ನೆ ಹೊರಡಿಸಿದೆ. ಅದರ ಪ್ರತಿಯೊಂದನ್ನು ನಿಮಗೆ ಕಳುಹಿಸುವ ಹಾಗೆ ಬರೆದಿದ್ದೇನೆ. ನಿಷ್ಪಕ್ಷಪಾತವಾದ ವಿಮರ್ಶೆಗಾಗಿ ಕಳುಹಿಸಿದ್ದಾರೆಂದು ನಂಬುತ್ತೇನೆ.

ನೀವು ಕಳುಹಿಸಿದ ವಸಂತದ ಒಂದು ಸಂಚಿಕೆಯು ಮಾತ್ರ ನನಗೆ ತಲುಪಿದೆ. ನಾನು ಇತ್ತೀಚೆಗೆ ಬರೆದ ೩-೪ ಕವನಗಳನ್ನು ನಿಮ್ಮ ವಿಮರ್ಶೆಗಾಗಿ ಈ ಕಾಗದದೊಂದಿಗೆ ಇಟ್ಟಿದ್ದೇನೆ. ಅದರಲ್ಲಿ ಇನ್ನೂ ನಾಮಕರಣವಾಗದ ಒಂದು ಕವಿತೆಯಿದೆ. ಕವಿಯು ಒಂದು ಸಂಜೆ ನಗರ

ಸಂಚಾರಕ್ಕೆ ಹೊರಡುತ್ತಾನೆ. ಐದು ನಿಮಿಷದಲ್ಲಿ ಅನಿರೀಕ್ಷಿತವಾಗಿ ಮಳೆಯು ಆರಂಭವಾಗುತ್ತದೆ. ಇದು ಮಳೆಗಾಲದ ಆಗಮನವನ್ನು ಸೂಚಿಸುವ ಮೊದಲ ಮಳೆ. ಕವಿಯು ಸೀರ್ಮಾಳೆಯಲ್ಲಿ, ಕಾರ್ಮಾಳೆಯಲ್ಲಿ ಯಾವುದೊ ಅವ್ಯಕ್ತ ಶಕ್ತಿಯಿಂದ ಆಕರ್ಷಿತನಾಗಿ ನಡೆಯುತ್ತಾನೆ. ಇದಕ್ಕೆ ಒಂದು ಹೆಸರು ಉಚಿತವಾದದ್ದಿದ್ದರೆ ನನಗೆ ತಿಳಿಸಿರಿ. ಈ ಕವನದ ವಿಷಯ ನಿಮ್ಮ ಅಭಿಪ್ರಾಯವನ್ನು ಬಯಸುತ್ತೇನೆ. ಇದರಲ್ಲಿ 'ಚಪ್ಪರಿಸುವ ಚಬುಕಧ್ವನಿಗೆ.........' ಹೀಗೆ ಮೊದಲಾಗುವ ಚರಣದಿಂದ 'ತಪತಪಿಸುವ ಜನದ ದಂಡು' ಎನ್ನುವ ಚರಣದ ತನಕ ಒಂದು ಭಾವನೆಯ ವಿಸ್ತರಣೆಯಿದ್ದರೂ ಅಷ್ಟೊಂದು ಬಿಗುಪು ಇಲ್ಲವಾಗಿ ನನಗನ್ನಿಸುತ್ತದೆ. ಇದು ಒಂದು ಸರಪಣಿಯ ಗೊಣಸಿನ ಹಾಗೆ ಕವನದಲ್ಲಿ ನಿಂತಿದೆ. ಅದನ್ನು ಪದ್ಯದಿಂದ ಬಿಟ್ಟು ಬಿಡುವುದು ಅಥವಾ ಇಟ್ಟಕೊಳ್ಳುವುದು - ಇದರಲ್ಲಿ ಯಾವುದು ಉಚಿತ ಎನಿಸುತ್ತಿದೆ?

ನಿಮ್ಮ ಕಾಗದವನ್ನು ಈ ವಿಳಾಸಕ್ಕೆ ಬರೆಯಿರಿ. ಈ ದಶಂಬರದಲ್ಲಿ ಸಾಹಿತ್ಯ ಪರಿಷತ್ತು ಎಲ್ಲಿ ಎಂದು ನಿಶ್ಚಯವಾಗಿದೆಯೊ? ಹಾಸಿಗೆಯಿಂದ ಈ ಕಾಗದವನ್ನು ಬರೆಯುತ್ತಿದ್ದೇನೆ. ಇನ್ನೂ ಸ್ವಲ್ಪ ಶಕ್ತಿ ಹೆಚ್ಚಿದಾಗ ಸಮುದ್ರ ತೀರದಲ್ಲಿ ಮರಳಿನ ಮೇಲೆ Sun Bathನ ಔಷಧಿ. ಇಲ್ಲಿಂದ ಹೊರಗೆ ಹೊರಡಬಹುದಾದ ದಿನವನ್ನು ಎದುರು ನೋಡುತ್ತಿದ್ದೇನೆ. ಸಮಯವಾದಾಗ ಬರೆಯುತ್ತಿರಿ.

ಭವದೀಯ
ಸದಾಶಿವರಾವ್

**ಗೋಕಾಕರ ಟಿಪ್ಪಣಿ**

ಪತ್ರದ ಮೇಲೆ ತಾರೀಖಿಲ್ಲ. ಜುಲೈ ತಿಂಗಳ ಅಂತ್ಯದಲ್ಲಿ ಇಲ್ಲವೆ ಆಗಸ್ಟ್ ತಿಂಗಳಲ್ಲಿ ಅವರು ಆ ಪತ್ರವನ್ನು ಬರೆದಿರಬೇಕು. ಡಿಗ್ರಿ ಬರುವದು, ನೆಟ್ಟಗಿರುವುದು, ಊರಿಗೆ ಮರಳುವುದು, - ಅದೆಲ್ಲಾ ಗಾಳಿಯಲ್ಲಿ ಹಾರಿಹೋಯಿತು! 'ಮನೆಯಿಂದ ಹೊರಟು ಮೂರು ವರ್ಷವಾಗುತ್ತ ಬಂತು. ಇನ್ನು ಇಲ್ಲಿ ನಿಲ್ಲುವುದು ಸಾಧ್ಯವಿಲ್ಲ! ಸಾವಿರಾರು ಮೈಲುಗಳಾಚೆ ಕೂತು ತಾಯ್ನಾಡನ್ನು ಕಾಣದೆ, ಹೆಂಡಿರು ಮಕ್ಕಳನ್ನು ಕಾಣದೆ 'ಬಕಬಕ'ವೆನ್ನುವ ಜೀವದ ಗೋಳಿನ ಮುಂದೆ ಯಾವ ಯಾತನೆಯೂ ನಿಲ್ಲಲಾರದು. ಆದರೆ ಕೊನೆಯವರೆಗೆ ತಮ್ಮ ಪ್ರೀತಿ ಪಾತ್ರಳಾದ ಕಬ್ಬವೆಣ್ಣನ್ನು ಸದಾಶಿವರಾಯರು ಬಿಡಲಿಲ್ಲ. ಮರಣಶಯ್ಯೆಯಲ್ಲಿ ಬಿದ್ದಾಗ, - ತಮ್ಮ ಕವಿತೆಗಳನ್ನು ಕಳಿಸಿದರು; ಒಂದರ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ನನ್ನದನ್ನು ಅಪೇಕ್ಷಿಸಿದರು. ವಿಧಿಯು ಅವರನ್ನು ಒಯ್ದು ಸಮಾಧಿಯಲ್ಲಿ ಇಟ್ಟಾಗ ಸಹ ಸದಾಶಿವರಾಯರಿಗೆ ಅದೇ ಧ್ಯಾನವಿತ್ತು. ಇದು ಸಾಹಿತಿಯ ತಪಸ್ಸು. ರಸಸಿದ್ಧಿ. ಅದನ್ನು ಸಾಧಿಸಿದೊಡನೆ ಸದಾಶಿವರಾಯರು ತೀರಿ ಹೋದುದು ನಮ್ಮ ನಾಡಿನ ದುರದೃಷ್ಟ.

ಸದಾಶಿವರಾಯರ ಕೊನೆಯ ಪತ್ರವು ನನಗೆ ಬಂದು ಮುಟ್ಟಿದಾಗ ಮಹಾಯುದ್ಧವು ಸುರುವಾಗಿ ಒಂದು ವಾರವಾಗಿ ಹೋಗಿತ್ತು. ವಿದೇಶಗಳಿಗೆ ಕಳಿಸಬೇಕಾದ ಪತ್ರಗಳನ್ನು ಚಿಕ್ಕದಾಗಿ

ಇಂಗ್ಲಿಷಿನಲ್ಲಿ ಬರೆದರೆ ತಮಗೆ ತಪಾಸು ಮಾಡಿ ಕಳಿಸಲು ಸುಲಭವಾಗುವುದೆಂದೂ ಇಲ್ಲದಿದ್ದರೆ ಪತ್ರವು ಹೋಗಿ ಮುಟ್ಟಲು ವಿಳಂಬವಾಗಬಹುದೆಂದೂ ಸರಕಾರದವರು ಪ್ರಸಿದ್ಧಿಸಿದ್ದರು. ಆದಕಾರಣ ಅವರ ಪತ್ರವನ್ನು ಕಂಡೊಡನೆ ಮರುಟಪಾಲಿಗೆ ನಾನು ಇಂಗ್ಲಿಷಿನಲ್ಲಿ ಒಂದು ಪತ್ರವನ್ನು ಬರೆದೆ. ಅದರ ಅನುವಾದವನ್ನು ಇಲ್ಲಿ ಕೊಟ್ಟಿದ್ದೇನೆ.

ಲ

ವಿಲಿಂಗ್ಡನ್ ಕಾಲೇಜು

ಸಾಂಗ್ಲಿ, ೯ - ೯ - ३೯

ಪ್ರಿಯ ರಾವ್,

ನೀವು ಕಾಯಿಲೆಯಾಗಿ ಮಲಗಿರುವಲ್ಲಿ ಆದಷ್ಟು ತೀವ್ರ ನಿಮಗೆ ಈ ಪತ್ರವು ಮುಟ್ಟಬೇಕೆಂದು ಮಹಾಯುದ್ಧದ ಮೂಲಕ ಸುರುವಾದ ತಪಾಸಣೆಯ ಹೊಸ ನಿಯಮಗಳಿಗನುಸರಿಸಿ ಇದನ್ನು ಇಂಗ್ಲಿಷಿನಲ್ಲಿ ಬರೆಯುತ್ತಿದ್ದೇನೆ. ನಿಮ್ಮ ಪತ್ರವನ್ನೋದಿ ನನಗೆ ದಿಗ್ಭ್ರಮೆಯಾಯಿತು. ತಾಯ್ನಾಡಿಗೆ ಇನ್ನು ತೆರಳ ಬೇಕೆನ್ನುವಷ್ಟರಲ್ಲಿ ಆಸ್ಪತ್ರೆಯಲ್ಲಿ ಹಾಸಿಗೆ ಹಿಡಿದು ಬೀಳುವದೆಂದರೆ ಎಂಥ ಸಂಕಟವೆಂಬುದು ನನಗೆ ಗೊತ್ತಿದೆ. ಆದರೆ ಪ್ರಿಯ ಸದಾಶಿವರಾವ್, ಪ್ರಪಂಚದ ಬಗ್ಗೆ ನಿಮ್ಮ ಮನಸ್ಸು ಕಹಿಯಾಗದಿರಲಿ. ನಿಮ್ಮ ಪ್ರಕೃತಿಯನ್ನು ಸುಧಾರಿಸಿಕೊಳ್ಳಿರಿ, ಕೆಲಸವನ್ನು ಮುಗಿಸಿಕೊಳ್ಳಿರಿ - ಆ ಮೇಲೆ ತಾಯ್ನಾಡಿಗೆ ಬಂದುಬಿಡಿರಿ. ಇಟಲಿಯು ತಟಸ್ಥವಾಗುಳಿದಿರುವದರಿಂದ ಭೂಮಧ್ಯ ಸಮುದ್ರದಲ್ಲಿ ಯಾವ ಗಲಾಟೆಯೂ ಆಗಲಾರದು. ನಿಮ್ಮನ್ನು ಸಲಹಲು, ಸಂತವಿಸಲು, ದುರ್ದಮ್ಯ ಏಕಾಂತ ವಾಸವನ್ನು ಸಹಿಸಲು ಬೇಕಾದ ದೈಹಿಕ ಹಾಗು ಮಾನಸಿಕ ಶಕ್ತಿಯನ್ನು ದಯಪಾಲಿಸಲು ದೇವರಲ್ಲಿ ನಾನು ಮೊರೆಯಿಡುತ್ತೇನೆ. ತಾಯ್ನಾಡಿಗೆ ಸುರಕ್ಷಿತವಾಗಿ ನೀವು ನವೆಂಬರದಲ್ಲಿ ಮರಳುವುದನ್ನು ನೋಡಲು ನಾನೆಷ್ಟು ಉತ್ಸುಕನಾಗಿದ್ದೇನೆ!

ಮಿತ್ರಮಂಡಳಿಯ ಕವನಸಂಗ್ರಹವು ಇನ್ನೂ ನನ್ನೆಡೆಗೆ ಬಂದಿಲ್ಲ. ಕೆಲವು ದಿನಗಳಲ್ಲಿ ಬರಬಹುದು.

ಕನ್ನಡಸಾಹಿತ್ಯ ಸಮ್ಮೇಳನವು ಇದೇ ಡಿಸೆಂಬರಿನಲ್ಲಿ ಬೆಳಗಾವಿಯಲ್ಲಿ ಕೂಡುತ್ತದೆ. ಬಹುತೇಕ ಆ ವೇಳೆಯಲ್ಲಿ ನೀವು ನಮ್ಮ ಜೊತೆಗೆ ಇದ್ದೇ ಇರುವಿರಿ.

ನೀವು ಕಳಿಸಿದ ಕವಿತೆಗಳನ್ನೆಲ್ಲ ನಾನು ಓದಿದ್ದೇನೆ. ಎರಡು ಭಾವಗೀತೆಗಳಲ್ಲಿ ಉತ್ಸಾಹವು ತುಂಬಿದೆ. ಆದರೆ ಅವುಗಳಲ್ಲೆಲ್ಲ ಶ್ರೇಷ್ಠವಾದುದೂ ಬಹಳ ಆಳವಾದುದೂ ಯಾವುದೆಂದರೆ, - ನೀವು ಬರೆದ ದೀರ್ಘ ಕವಿತೆ, ಓಡು. (Ode) ಅದನ್ನು "ವರುಣನಿಗೆ ಆಹ್ವಾನ" ಎಂಬ ಹೆಸರಿನಿಂದ ಕರೆಯಬೇಕೆಂದು ನನಗನಿಸುತ್ತದೆ. ಈ ಓಡು ಆಳವಾದ ಅಂತಃಕರಣವನ್ನು ಕರಗಿಸುತ್ತದೆ. ಅದಕ್ಕೆ ನಾನು ಮೋಹಿಸಿಬಿಟ್ಟಿದ್ದೇನೆ. ಅದು ಬಹುಶಃ ನಿಮಗೆ ಬಂದ ಅನಂತದ ಮೊದಲನೆಯ ಅನುಭವವಿರಬೇಕು. - ನೀವು ಅದಕ್ಕೆ ಮೊದಲನೆಯ ಸಲ

ಕೊಟ್ಟ ಉತ್ತರವಿರಬೇಕು. ನಿಮ್ಮ ಹೃದಯವನ್ನು ತೆರೆದು ನೀವದನ್ನು ಸ್ವಾಗತಿಸಿದ್ದೀರಿ. ಪ್ರಿಯ ಸುಹೃತ್, ನಿಮ್ಮ ಅಂತರಂಗದ ಕದವು ಹೀಗೆಯೇ ಯಾವಾಗಲೂ ತೆರೆದಿರಲಿ. ಆಗ ಅನಂತರ ಸ್ಫೂರ್ತಿಯು ಪಾವನಗಂಗೆಯ ಪ್ರವಾಹದಂತೆ ನಿಮ್ಮ ಮೇಲೆ ಧುಮುಕೀತು.

ಈ ಕೃತಿಯಲ್ಲಿ ಕೆಲವು ಶೈಲಿದೋಷಗಳಿವೆ, - ಮಣಿವ ಕಿರಣ ಕೋಟಿಗಳನ್ನು ರಬ್ಬರಿಗೆ ಹೋಲಿಸಿದ್ದು, ವಿದ್ಯುತ್ತನ್ನು ಹಗ್ಗಕ್ಕೆ ಹೋಲಿಸಿದ್ದು, ಇತ್ಯಾದಿ. ಇಂಥ ಕೆಲವು ದೋಷಗಳನ್ನು ಬಿಟ್ಟರೆ ಇದೊಂದು ಅದ್ಭುತವಾದ ಓಡೆಂದು ಹೇಳಬಹುದು.

ಮುಂದಿನ ತಿಂಗಳಿಂದ ಬೇಂದ್ರೆಯವರೂ ನಾನೂ ಒಂದು ಮಾಸಿಕವನ್ನು ಹೊರಡಿಸಬೇಕೆಂದಿದ್ದೇವೆ. ಇದಕ್ಕೊಂದು ಪೂರ್ವ ಪೀಠಿಕೆಯನ್ನು ಬರೆದು ಇದನ್ನು ಈ ಮಾಸಿಕದಲ್ಲಿ ಪ್ರಸಿದ್ಧಿಸಬೇಕೆನ್ನುತ್ತೇನೆ. ನಿಮ್ಮ ಅಪ್ಪಣೆಯಿರಲಿ.

ಒಳ್ಳೇದು, ಸದಾಶಿವರಾವ್! ಯುರೋಪ್ ನಿಮ್ಮನ್ನು ಸಿದ್ಧಿಯನ್ನು ಹೊಂದಿದ ಕವಿಯನ್ನಾಗಿ ಮಾಡಿದೆ; ದೊಡ್ಡ ಸಂಬಳವನ್ನು ಇಲ್ಲಿ ಪಡೆಯಲು ಬೇಕಾದ ಯೋಗ್ಯತೆಯನ್ನು ಈಗ ದೊರಕಿಸಿಕೊಡುತ್ತಲಿದೆ. ದಯವಿಟ್ಟು ಚಿಂತೆ ಹಚ್ಚಿಕೊಳ್ಳಬೇಡಿರಿ. ನಿಮ್ಮ ಪ್ರಕೃತಿಯನ್ನು ಜಪ್ಪಿಸಿರಿ. ಅಲ್ಲದೆ ಪೂರಾ ಸುರಕ್ಷಿತವಾಗಿ ನಿಮ್ಮನ್ನು ಇಲ್ಲಿ ಮುಟ್ಟಿಸುವ ಅಭಿವಚನ ಕೊಡುವ ಹಡಗನ್ನೇರಿ ನೀವಿಲ್ಲಿಗೆ ಬಂದು ಬಿಡಿರಿ.

ಒಲವಿನ ಮನ್ನಣೆಗಳಿಂದ ಕೂಡಿ,

ಎಂದಿಗೂ ನಿಮ್ಮವನಾದ

ವಿ. ಕೃ. ಗೋಕಾಕ.

ಈ ಪತ್ರವನ್ನು ಸದಾಶಿವರಾಯರು ತಿಳಿಸಿದ ವಿಳಾಸಕ್ಕೆ ಹಾಕಿದೆನು. ಅಲ್ಲಿಗೆ ಅದು ೨-೧೧-೧೯೩೯ನೆಯ ತಾರೀಖಿಗೆ ಹೋಗಿ ಮುಟ್ಟಿತು, - ಅಂದರೆ ಸದಾಶಿವರಾಯರು ತೀರಿ ಹೋಗಿ ಹದಿನೈದು ದಿನಗಳಾದ ಮೇಲೆ. ತಪಾಸಣೆಯ ಹಾಗು ಮಹಾಯುದ್ಧದ ಗಲಾಟೆಯು ಈ ವಿಳಂಬಕ್ಕೆ ಕಾರಣವಾಗಿರಬೇಕು. ಆಸ್ಪತ್ರೆಯಲ್ಲಿ ಮಲಗಿದ ಗೆಳೆಯನನ್ನು ಒಂದು ಪತ್ರದಿಂದಾದರೂ ಸಂತೈಸದೆ ಹೋದೆನಲ್ಲ! ಎಂದು ಇಂದಿಗೂ ಮರುಗುತಿದ್ದೇನೆ. ಆಮೇಲೆ ೧೮-೧೧-೩೯ ಕ್ಕೆ ನಾನು ಬರೆದ ಪತ್ರವು ಒಡೆಯದೆ ತಿರುಗಿ ಬಂದಿತು. ಈಗಲೂ ನನ್ನ ಹತ್ತಿರ ಗಂಡ ಬಿಟ್ಟ ಹೆಂಡತಿಯಂತೆ ಬಿದ್ದುಕೊಂಡಿದೆ. ಆಸ್ಪತ್ರೆಯವರು ಅದರ ಮೇಲೆ ಇಟಾಲಿಯನ್ ಭಾಷೆಯಲ್ಲಿ 'decede' ಮುಂತಾಗಿ ಬರೆದಿದ್ದಾರೆ. ಪತ್ರವನ್ನು ಸ್ವೀಕರಿಸುವವರು ತೀರಿಹೋದರೆಂದು ಅದರರ್ಥವಿರಬೇಕು.

ಇಲ್ಲಿಗೆ ಕಥೆಯು ಮುಗಿದು ಹೋಯಿತು. ಅನಂತದಲ್ಲಿ ಮರೆಯಾಗಿ ಹೋದ ಆ ಮೋರೆಯನ್ನು ಕಾಣುವುದು ಹೇಗೆ?

ವಿ. ಕೃ. ಗೋಕಾಕ.



# ೭ ಗೋವಿಂದ ಪೈಗಳ ಬದುಕು-ಬರಹದ ಹಿನ್ನೆಲೆ

ಪೈಗಳ ಶತಾಬ್ದಿಯ ಉತ್ಸವ ಕಾಲದಲ್ಲಿ ಪೈ ಅವರ ಬದುಕು ಬರಹಗಳ ಮಾಮೂಲಿಯ ಮಾಹಿತಿ ಸಾಕಷ್ಟು ಪ್ರಚಾರಗೊಂಡಿತು. ಅವೆಂದರೆ - ಮಂಜೇಶ್ವರದಲ್ಲಿ ಜನನ, ಪ್ರಾಸಬಿಟ್ಟು ಪದ್ಯರಚನೆ, ರಾಷ್ಟ್ರಕವಿ ಪ್ರಶಸ್ತಿ, ಮುಂಬಯಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಬಹುಭಾಷಾ ಪಾಂಡಿತ್ಯ, ಕವನಗಳಿಗೆ ಹೊರೆ ಟಿಪ್ಪಣಿ, ವಿಶೇಷ ಆತಿಥ್ಯ, ನೇರಿಳೆ ಶಾಯಿಯಲ್ಲಿ ಪತ್ರೋತ್ತರ - ಇತ್ಯಾದಿ. ಈ ರೀತಿ ಅವರ ಪರಿಚಯ ಮಾಡಿಕೊಡುವಾಗ ಅನೇಕ ತಪ್ಪುಗಳಾದುವು. ಅತಿ ರಂಜಿತ ಸಂಗತಿಗಳು ಸೇರಿಕೊಂಡವು. ಅವನ್ನು ತಿದ್ದಹೋಗಬೇಕೆಂದು ಅನಿಸಿದರೂ ಹಾಗೆ ಮಾಡದೇ ಈ ನನ್ನ ಭಾಷಣದಲ್ಲಿ* ಅವರ ಸಾಹಿತ್ಯ ವ್ಯವಸಾಯಕ್ಕೆ ಹಿನ್ನೆಲೆಯಾಗಿರತಕ್ಕಂಥ ಅಂಶಗಳನ್ನೂ, ಅವರ ವಿಶಿಷ್ಟವಾದ ನಡೆ-ನುಡಿಗಳ ಸ್ವರೂಪವನ್ನು ಕುರಿತು ಮಾತ್ರ ಹೇಳಬೇಕೆಂದಿದ್ದೇನೆ.

**ಕೌಟುಂಬಿಕ ಹಿನ್ನೆಲೆ**

ರಾಜರತ್ನಂ ತಮ್ಮೊಂದು ಪುಸ್ತಕದಲ್ಲಿ ಪೈಗಳ ಲೆಕ್ಕಾಚಾರದ ವಿಷಯ ಪ್ರಸ್ತಾಪಿಸುತ್ತಾರೆ. ಆ ಪ್ರಸಂಗ ಹೀಗಿದೆ: ರಾಜರತ್ನಂ ಒಂದು ಪುಸ್ತಕವನ್ನು ಪೈಗಳ ವ್ಯಾಸಂಗಕ್ಕಾಗಿ ಕಳಿಸಿದ್ದರು. ಅದನ್ನು ಹಿಂತಿರುಗಿಸುವಾಗ ಪೈಗಳು, ಅಂಚೆಗಾಗಿ ವೆಚ್ಚಮಾಡಿದ ಒಂದೂಕಾಲು ರೂಪಾಯಿಯನ್ನು ರಾಜರತ್ನಂಗೆ ಹಿಂತಿರುಗಿಸಿದರಂತೆ. ಈ ಲೆಕ್ಕಾಚಾರವೆಂಬೋದು ಪೈಗಳಿಗೆ ರಕ್ತಗತವಾಗಿತ್ತು- ಅವರ ತಂದೆ ಸಾಹುಕಾರ ತಿಮ್ಮ ಪೈಗಳಿಂದ. 'ಸಾಹುಕಾರ' ಏಕೆಂದರೆ ಅವರು ಪೇಟೆಯಲ್ಲಿ ಹುಂಡಿ/ಹಣ ಕೊಟ್ಟು ಬಡ್ಡಿ ವ್ಯವಹಾರ ಮಾಡತಿದ್ರು.... ತಮ್ಮ ಕಿಸೆಯಲ್ಲಿರುವ ನೋಟ್ ಬುಕ್‌ನಲ್ಲಿ, ಅವರು ಪೈಗೆ ಪೈಯ (ಮೂರು ಕಾಸು) ಲೆಕ್ಕವನ್ನು ತಪ್ಪದೇ ಬರೀತಿದ್ರಂತೆ. ಆದರೆ ನಮ್ಮ ಪೈಗಳ ಲೆಕ್ಕಾಚಾರದ ರೀತಿ ಬೇರೆಯೇ. ಅದು ಇನ್ನೊಬ್ಬರಿಂದ ದುಡ್ಡು ಬರುವ ವಿಚಾರದಲ್ಲಿ ಅಲ್ಲ. ಇನ್ನೊಬ್ಬರಿಗೆ ತಾವು ಕೊಡಬೇಕಾದ ಹಣದ ವಿಚಾರದಲ್ಲಿ. ಸ್ವಂತಕ್ಕಾಗಿ ಹಣ ವೆಚ್ಚ ಮಾಡಬೇಕಾದರೂ ಇದೇ ಲೆಕ್ಕಾಚಾರ. ಮಂಗಳೂರಿಗೆ ಇವರು ವಾರಕ್ಕೆ ಎರಡು - ಮೂರು ಬಾರಿ ರೈಲಿನಲ್ಲಿ ಹೋಗತಿದ್ರು. ಮೂರನೇ ವರ್ಗದ ರೈಲು ಪ್ರವಾಸಕ್ಕೆ ಎಷ್ಟು

---

* ಕರ್ನಾಟಕ ಸಾಹಿತ್ಯ ಅಕಾಡೆಮಿಯು ಅವರ ಜನ್ಮ ಶತಾಬ್ದಿಯಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ

ಬೇಕೊ ಅಷ್ಟನ್ನೇ ಬಂಧು ಸುಬ್ರಾಯ ಪೈಗಳಿಂದ ಇಸಕೊಳ್ಳತಿದ್ರು. ಜೊತೆಗೆ ೧೦-೧೨ ಪಾವಾಣೆಗಳು. ಯಾಕೆ ಗೊತ್ತೆ? ಮಂಗಳೂರ ಪೇಟೆಯ ದಾರಿಯಲ್ಲಿ ಠರಾವಿಕ ಜಾಗದಲ್ಲಿ ಕುಳ್ಳಿರುತಿದ್ದ ಕೆಲವು ಪರ್ಮನೆಂಟ್ ಭಿಕ್ಷುಕರಿಗೆ ಕೊಡಲೆಂದು. (ಆ ದಾರಿಗೆ ಈಗ ಖೈಬರ್ ಪಾಸ್ ಎಂದು ಹೆಸರು!)

ಈ ಲೆಕ್ಕಾಚಾರದ ಇನ್ನೊಂದು ಪರಿಯನ್ನು ನಾವು ಅವರು ಕಾರ್ಡಿನಲ್ಲಿ ಪತ್ರಾ ಬರೀತಿದ್ದುದರಲ್ಲಿಯೂ ಕಾಣ್ತೇವೆ. ಅವರ ನಿಯಮಿತವಾದ ಪತ್ರವ್ಯವಹಾರವು ೯೦% ಕಾರ್ಡಿನಲ್ಲಿ ತಾನೇ. ಅದರಲ್ಲಿ ಮೇಲೆ-ಕೆಳಗೆ ಎಲ್ಲೆಡೆಗೂ ಬರೀತಿದ್ರು - ಎಳ್ಳಷ್ಟೂ ಜಾಗ ಬಿಡದೇ. ಯಾವುದನ್ನೂ ವ್ಯರ್ಥ ಬಿಡಬಾರದು. ವೇಸ್ಟ್ ಮಾಡಬಾರದು ಎನ್ನುವ ಮನೋಭಾವ ಇರಬೇಕು. ಅದಕ್ಕೆ ಇನ್ನೊಂದು ಉದಾಹರಣೆ ಕೊಡ್ತೇನೆ. ಮೇಜಿನ ಮೇಲೆ ಇಡಲು ಬರುವ ಡೈರಿ ಇರ್ತದಷ್ಟೆ. ಅದರಲ್ಲಿ ದಿನಕ್ಕೊಂದು ಪುಟದಂತೆ ಅಂಗೈಯಗಲದ ಕಾಗದ. ಪೈಗಳು ೨೪-೧೦-೧೯೫೭ರ ಇಂಥ ಒಂದು ಖಾಲೀ ಪುಟವನ್ನು ಒಂದು ಚೀಟಿ ಬರೆಯುವುದಕ್ಕೆ ಉಪಯೋಗಿಸಿದ್ದಾರೆ. ಯಾವಾಗ ಗೊತ್ತೆ? ದಿ. ೨೮-೬-೧೯೫೯ ರಂದು. ಎಂದರೆ ಒಂದೂವರೆ ವರ್ಷದ ಅನಂತರ!

ಇದೇನೇ ಇರಲಿ, ಪೈಗಳದು ನಿಜಕ್ಕೂ ಅಪರಿಗ್ರಹ ಮನೋವೃತ್ತಿ. ಸಂಪತ್ತಿನ ವಿಚಾರದಲ್ಲಿ ಅತೀವ ನಿರ್ಮೋಹ. "ಬಡತನವನ್ನು ತಾಳಿಕೋಬಹುದು. ಸಂಪತ್ತನ್ನು ಕಾಯ್ದುಕೊಳ್ಳೋದು ಕಷ್ಟ. ಹಣವಿದ್ದವನಷ್ಟು ಬೇರೆ ಬಡವನಿಲ್ಲ. ಹಣದಾಸೆ ಮುಗಿವಲ್ಲಿಂದಲೇ ಮಾನುಷತೆಯ ಆರಂಭ" ಎಂದು ಅವರು ತಮ್ಮ 'ಭಕ್ತವಾಣಿ'ಯಲ್ಲಿ ಒಂದೆಡೆ ಹೇಳಿದ್ದಾರೆ.

ತಂದೆಯ ಮರಣದಿಂದಾಗಿ, ಹಿರಿಯ ಮಗನಾಗಿ ಗೋವಿಂದ ಪೈ ಬಿ.ಎ. ವಿದ್ಯಾಭ್ಯಾಸವನ್ನು ಅರ್ಧಕ್ಕೆ ನಿಲ್ಲಿಸಿದರು-೧೯೦೨ರಲ್ಲಿ. ತಾಯಿ ದೇವಕಿ ಬಾಯಿಯಾದರೂ ಆ ಮುಂದೆ ನಾಲ್ಕೇ ವರ್ಷ ಬದುಕಿ ಇದ್ದರು. (೧೮೫೬-೧೯೦೬). ಆಕೆಯ ತವರ್ಮನೆ ಮಂಜೇಶ್ವರ. ಆ ಕಾರಣದಿಂದಲೇ ಪೈ ಕುಟುಂಬ ಆ ಊರಲ್ಲಿ ಸ್ಥಾಯಿಯಾಗಿ ನಿಂತುದು. ತಮ್ಮ ಆತ್ಮಕಥನದಲ್ಲಿ ಗೋವಿಂದ ಪೈ ತಮ್ಮ ತಾಯಿ ಕವಿತೆ ಬರೆಯೋದಕ್ಕೆ ಅಡ್ಡಿ ಮಾಡ್ತಿದ್ದಳು ಎಂಬುದಾಗಿ ಹೇಳಿದ್ದಾರೆ. ಇದರರ್ಥ ಆಕೆ ಋೂಕ್ಷ ಮನಸ್ಸಿನವಳಿದ್ದಳೆಂದು ಯಾರೂ ಭಾವಿಸಬಾರದು. ದೇವಕಿಯಮ್ಮನ ಬಗ್ಗೆ ನಾನು ಅವರಿವರಲ್ಲಿ ವಿಚಾರಿಸಿದಾಗ, ತುಂಬಾ ಒಳ್ಳೆಯ ಹಾಗೂ ಸೌಮ್ಯ ಸ್ವಭಾವದ ಹೆಣ್ಣು ಮಗಳಿದ್ದಳೆಂದೇ ಕೇಳಿ ಬಂತು. ಪೈ ಅವರ ಬಾಲಿಶ ಕವನರಚನೆಗೆ ಅಡ್ಡಿ ಮಾಡಿದ್ದಕ್ಕೆ ಕಾರಣವೆಂದರೆ-ಅವರ ಮನೆತನದಲ್ಲಿ ಒಬ್ಬ ಕವಿತೆ ಕಟ್ಟುವವರಿಗೆ ಹುಚ್ಚು ಹಿಡಿದಿತ್ತಂತೆ. 'ದೇವಕೀತನಯ' ಅಂತ ಕಾವ್ಯನಾಮ ಪೈಗಳಿಗೆ ಇತ್ತು - ಕೆಲವು ಕಾಲ.

ತಮ್ಮ ಸಾಕು ತಾಯಿ ಸುಬ್ಬಮ್ಮನ ಬಗ್ಗೆ ಪೈಗಳಿಗೆ ವಿಶೇಷ ಪ್ರೀತ್ಯಾದರ ಭಾವವಿದ್ದಿತು. "ಅವರ ಹಿತವಚನಗಳನ್ನು ಕಿವಿಗೆ ಹಾಕಿಕೊಳ್ಳದೇ ಅಸಡ್ಡೆ ಮಾಡಿ, ಅವರಿಗೆ ಎದುರಾಡಿ, ಅವರ ಮಾತಿಗೆ ಆಗಾಗ್ಗೆ ಅಡ್ಡ ನುಡಿದು, ಅವರ ಮನನೋಯಿಸಿದ ಪಶ್ಚಾತ್ತಾಪದ

ಕಾಣಿಕೆ" ಎಂದು ಹೇಳಿ 'ಹೆಬ್ಬೆರಳು' ಕೃತಿಯನ್ನು ಪೈಗಳು ಅವರಿಗೆ ಅರ್ಪಿಸಿದ್ದಾರೆ.

ಇನ್ನು ಹೆಂಡತಿ ಕೃಷ್ಣೆ. ಆಕೆ ಸಾಹಿತ್ಯ ಪ್ರಿಯೆಯಾಗಿದ್ದಳೆಂಬುದು ನಮಗೆ ಹೆಚ್ಚು ಪ್ರಸ್ತುತ. It seems his wife knew Marathi and had told him of the beauties of Marathi literature ಅಂತ ಕಾಕಾ ಕಾಲೇಲಕರರು ತಮ್ಮ ಹಾಗೂ ಗೋವಿಂದ ಪೈಗಳ ನವಸಾರಿ ಭೆಟ್ಟಿಯ ಸಂದರ್ಭದಲ್ಲಿ ಹೇಳಿದ್ದಾರೆ. ಆಗಿನ ಕಾಲದ ಅನೇಕ ಸಾರಸ್ವತ ಕುಟುಂಬಗಳಲ್ಲಿ ಮರಾಠೀ ಧಾರ್ಮಿಕ ಸಾಹಿತ್ಯದ ಪ್ರಚಾರ ಸಾಕಷ್ಟಿದ್ದಿತು. ಹೆಣ್ಣು ಮಕ್ಕಳು ಜ್ಞಾನೇಶ್ವರೀ, ಮನಾಚೇ ಶ್ಲೋಕ, ಏಕನಾಥೀ ಭಾಗವತ ಮುಂತಾದ್ದನ್ನು ನಿತ್ಯ ಅನ್ನತಿದ್ರು. ಪೈಗಳ ಪತ್ನಿ ಕೃಷ್ಣಾಬಾಯಿ ಈ ಕುರಿತು ಸಂವಾದಿಸಬಲ್ಲವಳಾಗಿದ್ದಳು. ಅವಳ ಹೆಸರಿರುವ ಒಂದು ವಹಿಯಲ್ಲಿ, ಹಳೆಯ ಪೌರಾಣಿಕ ನಾಟಕ (ಗದ್ಯ- ಪದ್ಯ ಸಹಿತವಾದದ್ದು), ಹಾಡುಗಳು ಇವೆ. ಕೃಷ್ಣಾಬಾಯಿಗೆ ಸಂಗೀತ ನಾಟಕಗಳಲ್ಲಿ ಒಲವಿದ್ದುದನ್ನು ಇದು ದೃಢೀಕರಿಸುತ್ತದೆ.

ಪೈಗಳಿಗೆ ತಮ್ಮ ಪತ್ನಿಯಲ್ಲಿ ಅತ್ಯಂತಿಕವಾದ ಅನೂನವಾದ ಪ್ರೇಮ. ಅವಳ ಸಾಹಿತ್ತಿಕ ಒಲವು ಈ ಪತ್ನೀ ಪ್ರೇಮದ ಪರಾಕಾಷ್ಠೆಗೆ ಕಾರಣವಾಗಿರಬಹುದು. ಮೊದಲೇ ಇವರದು ಬಲು ಬೇಗ ಕರಗುವ ಹೃದಯ. ಆಕೆ ಉಬ್ಬಸ ರೋಗದಿಂದ ನರಳುತ್ತಿದ್ದುದನ್ನು ಪೈಗಳು ಬಹು ಕಷ್ಟದಿಂದ ಸಹಿಸಿಕೊಂಡರು. ಕೊನೆಗಳಿಗೆಯ ವರೆಗೂ ಸೇವೆ ಮಾಡಿದರು. ಆಕೆಯ ಮರಣಾನಂತರವೂ ಇವರ ಪ್ರೇಮ ಗಾಢವಾಗಿಯೇ ಇದ್ದಿತು. ಆ ಮೂಲಕ ಆಕೆ ಸ್ಫೂರ್ತಿದೇವತೆಯೂ ಆಗಿ ಪರಿಣಮಿಸಿದಳೆನ್ನಬೇಕು. ('ಗೊಮ್ಮಟ ಜಿನಸ್ತುತಿ', 'ನಂದಾದೀಪ'ಗಳು ಆಕೆಗೆ ಸಂದ ನೆನಹಿನ ಕಾಣಿಕೆಗಳೇ ತಾನೇ.) ಅವರ ಈ ಪ್ರೇಮಭಾವನೆ ಲೋಕೋತ್ತರ ರೂಪವನ್ನು ತಾಳಿದ್ದುದು ಅವರ ಕೆಲವು ಕವನಗಳಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಪತ್ನಿ ತೀರಿಕೊಂಡಾಗ ಪೈಗಳಿಗೆ ೪೪ ವರ್ಷ. ಆ ಮುಂದೆ ತಮ್ಮ ಇಳಿವಯಸ್ಸಿನಲ್ಲಿಯೂ ಪೈಗಳು ಮಂಗಳೂರಲ್ಲಿದ್ದ ಆಕೆಯ ಬಂಧು ಬಳಗದವರನ್ನು ಮೇಲಿಂದ ಮೇಲೆ ಕಾಣುತ್ತಿದ್ದರಂತೆ.

ಪೈಗಳಿಗೆ ಮಕ್ಕಳೆಂದರೆ ಬಲು ಜೀವ. (ಸ್ವಂತಕ್ಕೆ ಮಕ್ಕಳಿದ್ದಿಲ್ಲ ಎಂದೇನಲ್ಲ) ಎಳೆಯರಲ್ಲಿ ಎಳೆಯರಾಗಿ, ಅವರೊಂದಿಗೆ ಬೆರೆಯುವ ವಿಚಾರದಲ್ಲಿ ಗಾಂಧೀ-ನೆಹರೂಗಳು ಹೇಗೋ ಹಾಗೇ ಇವರೂ. ಮಂಜೇಶ್ವರವಿರಲಿ, ಮಂಗಳೂರೇ ಇರಲಿ - ಮಕ್ಕಳನ್ನು ನೆರೆಯಿಸಿಕೊಂಡು ಸಲ್ಲಾಪಗೈತಿದ್ರಂತೆ. ಕತೆ ಹೇಳ್ತಿದ್ರಂತೆ. ದೆವ್ವದ ಕತೆಗಳು ಸಹ! ಅವನ್ನು ತಾದಾತ್ಮ್ಯದಿಂದ ಕೇಳಿದರೆ ದೊಡ್ಡವರೂ ಹೆದರಬೇಕು ಎನ್ನುವಷ್ಟು ರಸವತ್ತಾಗಿ ಹೇಳ್ತಿದ್ರು.

ಅವರ ಬಂಧು ಸುಬ್ರಾಯ ಪೈಗಳ ಹೆಸರನ್ನು ಮಾತ್ರ ನಾವು ಕೇಳಿಬಲ್ಲೆವು. ಗೋವಿಂದ ಪೈಗಳ ಖಾಸಗಿ ಜೀವನದಲ್ಲಿ ಇವರದ್ದೇ ಪ್ರಮುಖ ಪಾತ್ರ. ಹೆಂಡತಿ ತೀರಿದ ಮೇಲೆ ಅಂತ ಕಾಣ್ತದೆ - ಗೋವಿಂದ ಪೈಗಳು ಈ ತಮ್ಮನ ಮೇಲೆ ಕುಟುಂಬದ ಆಸ್ತಿ ನಿರ್ವಹಣೆಯ ಎಲ್ಲ ಭಾರವನ್ನು ಹಾಕಿದರು ಅಥವಾ ಸುಬ್ರಾಯ ಪೈಗಳೇ ಅಣ್ಣನನ್ನು ಈ ಹೊಣೆಯಿಂದ

ಮುಕ್ತಮಾಡಿ, ಅವರು ವ್ಯಾಸಂಗ, ಸಂಶೋಧನ ಕಾರ್ಯದಲ್ಲಿ ಪೂರ್ಣ ತೊಡಗುವುದಕ್ಕೆ ಅನುಕೂಲ ಮಾಡಿಕೊಟ್ಟರೆಂದು ಹೇಳುವುದು ಹೆಚ್ಚು ಸಮಂಜಸವೆನಿಸೀತು. ಸುಮಾರು ೩೦ ವರ್ಷಗಳ ಕಾಲ ಸುಬ್ರಾಯ ಪೈಗಳು ಅಣ್ಣನನ್ನು ಈ ರೀತಿಯಾಗಿ ನೋಡಿಕೊಂಡಿದ್ದಾರೆ. ಪೈಗಳ ಧಾರಾಳವಾದ ಅತಿಥಿ ಸತ್ಕಾರದ ಶ್ರೇಯಸ್ಸಿನಲ್ಲಿ ಇವರದ್ದು ಹೆಚ್ಚಿನ ಪಾಲು.

ಹೆಚ್ಚು ಬೆಳಕಿಗೆ ಬಾರದ ಒಂದು ಸಂಗತಿಯೆಂದರೆ, ಸುಬ್ರಾಯ ಪೈಗಳು ಸ್ವತಃ ವಿದ್ವಾಂಸರೂ ಬಹುಶ್ರುತರೂ ಆಗಿದ್ದರು. ಪೈ ಮನೆತನದಲ್ಲಿ ಇವರೇ ಪ್ರಥಮ ಬಿ. ಎ. ಪದವೀಧರರು. ಆರ್ಥಿಕ ವಹಿವಾಟಿನಲ್ಲಿ ಮುಳುಗಿದ್ದರೂ, ಸುಬ್ರಾಯರು ವ್ಯಾಸಂಗಪ್ರಿಯರು. ಹಾಗೆ ನೋಡಿದರೆ ಅಣ್ಣನಿಗಿಂತಲೂ ಇವರ ಆಸಕ್ತಿಯ ವಿಷಯಗಳ ಹರಹು ದೊಡ್ಡದು. ಸಾಹಿತ್ಯ, ಇತಿಹಾಸಗಳ ಜೊತೆಗೆ ಪಾಶ್ಚಿಮಾತ್ಯ ತತ್ವಜ್ಞಾನ, ಕಲೆಗಳು, ವಿಜ್ಞಾನ - ಇನ್ನೂ ಹಲವಾರು ಅವರ ಆಸ್ಥೆಯ ವಿಷಯಗಳಾಗಿದ್ದುವು. ಗೋವಿಂದ ಪೈ ಗ್ರಂಥಸಂಗ್ರಹದಲ್ಲಿ ಇವರು ಕೊಂಡಿದ್ದ ಪುಸ್ತಕಗಳೂ ಅನೇಕವಿವೆ. ಪೈಗಳು ತಮ್ಮ ಮಧ್ಯ ವಯಸ್ಸಿನ ಕಾಲದ ಇತಿಹಾಸ ಸಂಶೋಧನೆಯ ಅನೇಕ ಅಂಶಗಳನ್ನು ಇವರೊಂದಿಗೆ ಚರ್ಚಿಸುತ್ತಿದ್ರು. ರಾತ್ರಿಯ ವೇಳೆ ಅಣ್ಣ-ತಮ್ಮ ಆಗೀಗ ಈ ಕುರಿತು ಹಣಾಹಣಿ ವಾದದಲ್ಲಿ ತೊಡಗಿರ್ತಿದ್ರಂತೆ.

ಮಂಜೇಶ್ವರ ಊರು! ಬಾಲ್ಯದಿಂದ ಕೊನೆವರೆಗೆ ಅಲ್ಲೇ ಓಡಾಡಿಕೊಂಡು ಇದ್ದರಲ್ಲವೆ. ಅವರ ಅಡ್ಡ ಹೆಸರಾದ ಮಂಗಳೂರನ್ನು ಮರೆಮಾಚುವಷ್ಟು ಗಾಢವಾದ ಒಡನಾಟ ಮಂಜೇಶ್ವರದ್ದು. (ಬೇಂದ್ರೆಯವರಿಗೆ ಧಾರವಾಡ ಇದ್ದ ಹಾಗೆ). ಗೋವಿಂದ ಪೈಗಳಿಗೆ ಊರಿನ ಜನರೊಡನೆ ಸ್ವಾಭಾವಿಕವಾಗಿಯೇ ನಿಕಟ ಸಂಬಂಧವಿದ್ದಿತು. ನೆರೆಮನೆಯ ಭಟ್ಟರು, ಶಾಲೆಯ ಉಪಾಧ್ಯಾಯರುಗಳು. ದೇವಸ್ಥಾನದ ಪಾರುಪತ್ಯಗಾರರು - ಯಾರೆಲ್ಲ. ಮೋಜೆಂದರೆ ತಮ್ಮ ತರುಣ ವಯಸ್ಸಿನಲ್ಲಿ (ಅಥವಾ ಹೆಂಡತಿ ತೀರಿಕೊಂಡ ೧೯೨೭ರ ವರೆಗೆ) ಪೈಗಳು ಸಾಹಿತ್ಯ ನಿರ್ಮಿತಿಯನ್ನು ಗಂಭೀರವಾಗಿ ತಗೊಂಡವರೇ ಅಲ್ಲ! ಊರಿನ ಕಾರುಭಾರು, ಸ್ಥಳೀಯ ವಿದ್ಯಮಾನಗಳಲ್ಲೇ ಸಾಕಷ್ಟು ಕಾಲಹರಣ.

ಊರು ಎಂದೊಡನೆ, ಸ್ಥಳೀಯ ದೈವತವಾದ ಅನಂತೇಶ್ವರನ ನೆನಪಾಗುತ್ತದೆ. ಆ ದೇವಸ್ಥಾನದ ಬಗ್ಗೆ, ಆ ನಿಮಿತ್ತದಿಂದ ಸಾರಸ್ವತರನ್ನು ಕುರಿತು ಸಂಶೋಧನೆ ಮಾಡಿದ್ದಾರೆ. ನಿಸ್ಸೀಮ ದೈವಭಕ್ತರಲ್ಲವೆ ಪೈಗಳು. ಉತ್ಸವ ಕಾಲಕ್ಕೆ ದೇವರ ರಥಕ್ಕೆ ತಾವೂ ಕೈಗೊಡುತ್ತಿದ್ರು. ಆದರೆ ನಿತ್ಯ ದರ್ಶನಕ್ಕೆಂದು ದೇವಸ್ಥಾನಕ್ಕೆ ಹೋಗಿ ಪ್ರದಕ್ಷಿಣೆ-ನಮಸ್ಕಾರ ಹಾಕುವ ಪರಿಪಾಠವನ್ನೇನೂ ಅವರು ಇಟ್ಟುಕೊಂಡಿರಲಿಲ್ಲ.

## ದಿನಚರಿ

ಏಳು ದಶಕಗಳಷ್ಟು ದೀರ್ಘಕಾಲ ಬಾಳಿದ ಆ ಊರಲ್ಲಿ, ಆ ದೊಡ್ಡ ಮನೆಯಲ್ಲಿ ಪೈಗಳ ದಿನಚರಿ ಏನಿದ್ದಿತು? ಸು. ೧೯೩೫ರ ವರೆಗೆ ರಾಜರತ್ನಂ, ಕಾರಂತ, ಹಾಗೂ ದ. ಕ. ಪ್ರದೇಶದ ಇತರ ಊರುಗಳಿಗೆ ಬಂದಿದ್ದ ಕೆಲವು ಸಾಹಿತಿಗಳು ಮಾತ್ರ ಮಂಜೇಶ್ವರದ ತನಕ

ಹೋಗಿ ಬರತಿದ್ರು. ಯಾವಾಗ ಆಸ್ಥಾನಕವಿ ಬಿರುದು ಬಂತೋ, ಯಾವಾಗ ಮುಂಬಯಿ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಹಿಂತಿರುಗಿದರೋ ಆಗ, ಅಂದ್ರೆ ೧೯೫೦ರಿಂದ ಮಂಜೇಶ್ವರಕ್ಕೆ ಹೋಗಿ ಬರುವವರ ಸಂಖ್ಯೆ ಹೆಚ್ಚಾಯಿತು. (ಅವರೊಡನೆ ಪತ್ರ ವ್ಯವಹಾರ ಮಾಡುವವರೂ ಹೆಚ್ಚಾದರು) ಇಂಥವರ ಮಾತು - ಬರವಣಿಗೆಯಿಂದಾಗಿ ನಮಗೆ ಪೈಗಳ ಉತ್ತರಾರ್ಧ ಕಾಲದ ದಿನಚರಿ ಹೆಚ್ಚು ಸ್ಫುಟವಾಗಿ ತಿಳಿದುಬರ್ತದೆ.

ರಾತ್ರಿ ಬೇಗ ಮಲಗತಿದ್ರಿಂದ, ಪೈಗಳು ಬೆಳಿಗ್ಗೆ ಬೇಗ ಏಳುವ ಪರಿಪಾಠವನ್ನಿಟ್ಟು ಕೊಂಡಿದ್ರು. (ಅಂದ ಹಾಗೆ ಮಲಗುವಾಗ ರಾತ್ರಿ ದೀಪವನ್ನು ಬಳಿಯಲ್ಲಿ ತಪ್ಪದೇ ಇಟ್ಟುಕೊಳ್ತಿದ್ರಂತೆ-ಏನಾದರೂ ನೆನಪಾದರೆ ಟಿಪ್ಪಣಿ ಬರೆದುಕೊಳ್ಳಲು.) ಕಾಫಿ ಸೇವನೆಯಾದ ಮೇಲೆ ಓದು, ಬರಹ, (ಈ ವಯಸ್ಸಿಗೆ ಅವರ ಸೃಜನಶೀಲ-ಸಂಶೋಧನ ಕಾರ್ಯದ ಭರ ತಗ್ಗಿತ್ತೆಂಬುದನ್ನು ನೆನೆದಿರಬೇಕು. ಆದರೂ) ಸಂದರ್ಭ ಗ್ರಂಥ-ಪತ್ರಿಕೆಗಳ ರಾಶಿಯನ್ನು ಹರಡಿಕೊಂಡು ಎಡಗೈಯಲ್ಲಿ ಹೊಗೆಬತ್ತಿಯನ್ನು ಹಿಡಕೊಂಡು ತಲ್ಲೀನರಾಗಿರುತ್ತಿದ್ದರು. ಅನಂತರ ಸಮುದ್ರವಿಹಾರ. ದಿನಪತ್ರಿಕೆ ಬಂತೆಂದರೆ, ಏನೊಂದನ್ನು ಬಿಡದೇ ಓದುವುದು. ಅಷ್ಟೇ ಅಲ್ಲ, ಅದರಲ್ಲಿ ಶಾಬ್ದಿಕವಾದ ತಪ್ಪುಗಳನ್ನು ತಿದ್ದುವುದು- ಖುಶಿ ಬಂದಾಗ! ಊಟವಾದ ಮೇಲೆ ವಾಮಕುಕ್ಷಿ. ಅನಂತರ ಮತ್ತೆ ವಾಚನ-ಬರಹ, ವಿಶೇಷತಃ ಪತ್ರೋತ್ತರ. ಯಾವಾಗೇ ಪತ್ರ ಬರೆದು ಮುಗಿಸಲಿ, ಅದನ್ನ ತಾವೇ ಅಂಚೆಯ ಕಟ್ಟೆಗೆ ಒಯ್ದು ಹಾಕೋದು. ತಿರುಗಿ ಬರೋ ಮುಂದೆ, ಹಾದಿಯಲ್ಲಿ, ನೆರೆಮನೆಯವರಲ್ಲಿ ಕಾಣಿಸಿಕೊಂಡವರೊಡನೆ ಪಟ್ಟಾಂಗ. ಈ ಪಟ್ಟಾಂಗ ಅವರಿಗೆ ಬಹಳ ಪ್ರಿಯವಾದ ವಿಷಯ. ಮಂಜೇಶ್ವರವೇ ಆಗಲಿ, ಮಂಗಳೂರಲ್ಲಿಯೇ ಇರಲಿ, ಈ ಇನ್ನೊಬ್ಬರ ಕುಶಲವನ್ನು ವಿಚಾರಿಸಿ, ಹರಟೆ ಹೊಡೆಯುವಲ್ಲಿ ಅವರಿಗೆ ವಿಶೇಷ ಒಲವು. ಸೀರಿಯಸ್ ವಾಚನ, ಆಳವಾದ ಚಿಂತನಗಳನ್ನು ನಡೆಸಿಯಾದ ಮೇಲೆ ಈ ರೀತಿಯಾಗಿ ಮನಸ್ಸನ್ನು ಹಗುರ ಮಾಡಿಕೊಳ್ಳುವುದು ಆವಶ್ಯಕವೇ. ಅವರ ನೆಚ್ಚಿನ ತಿನಿಸುಗಳಾದ ತನಿಬೆಲ್ಲ, ಎಳೆಯ ಗೋಡಂಬಿಗಳಿದ್ದರೆ ಇಂಥ ಪಟ್ಟಾಂಗಕ್ಕೆ ವಿಶೇಷ ರಂಗು ಬರುತ್ತಿತ್ತು.

ಕವಿಗಳಿಗಾಗಲೀ, ವಿದ್ವಾಂಸರಿಗಾಗಲೀ ಸಮಯದ ಇಲ್ಲವೆ, ಕೇಳಿಸಿಕೊಳ್ಳುವ ವ್ಯಕ್ತಿಯ ಅರ್ಹತೆ-ಯೋಗ್ಯತೆಯ ಪರಿವೆಯೇ ಇರುವುದಿಲ್ಲ. ಗೋವಿಂದ ಪೈಗಳು ಇದಕ್ಕೆ ಅಪವಾದವಾಗಿದ್ದರು. ಯಾರೇ ಭೆಟ್ಟಿಯಾದರೆ ಮೊದಲಿಗೆ ಅವರ ವಿಚಾರ, ಸುಖದುಃಖವನ್ನು ಕೂಲಂಕಷವಾಗಿ ವಿಚಾರಿಸಿ ತಿಳಕೋತಿದ್ರು. ಮುಂದಿನ ಮಾತುಕತೆ ಅವರವರಿಗೆ ತಕ್ಕಂತೆ ನಡೀತಿತ್ತು. ಸಾಹಿತ್ಯ, ಸಂಶೋಧನೆಗಳಲ್ಲಿ ಆಸಕ್ತಿ ಇಲ್ಲದವರೊಡನೆ, ಆ ಅಂಶಗಳನ್ನೇ ಹೇಳುತ್ತಾ ಹೋಗುತ್ತಿದ್ದರೆಂಬುದನ್ನು ನಾನು ಯಾರ ಬಾಯಿಯಿಂದಲೂ ಇಷ್ಟರವರೆಗೆ ಕೇಳಿಲ್ಲ.

ತಮ್ಮ ಇಳಿವಯಸ್ಸಿನಲ್ಲಿ ಮಂಗಳೂರಿಗೆ ಅವರು ವಾರಕ್ಕೆ ಎರಡು-ಮೂರು ಬಾರಿ ಬರುತ್ತಿದ್ದಿರಬೇಕು. ಈಗಿನಂತೆ ಆಗ ನಿರಂತರ ಬಸ್ಸುಗಳಿರಲಿಲ್ಲ. ರೈಲು ಪ್ರಯಾಣ. ೨-೩

ದಿನ ಮುಂಚೆ, ರಾಜಾರಾಮ ಮಲ್ಯರಿಗೋ (ಸುಬ್ರಾಯ ಪೈಗಳ ಅಳಿಯ) ವೈಕುಂಠ ಬಂಟ್ವಾಳಕರರಿಗೋ ಒಂದು ಕಾರ್ಡು, ಇನ್ನೊಬ್ಬ ಸಂಬಂಧಿಕರಾದ ತಿಮ್ಮ ಪೈಗಳು (ಜ್ಯೂಯೆಲರ್) ತಮ್ಮ (ವಿಂಟೇಜ್!) ಕಾರನ್ನು ತಗೊಂಡು ಸ್ಟೇಶನ್ನಿಗೆ ಹೋಗಬೇಕು. ತಿಮ್ಮ ಪೈಗಳ ಮನೆಗೆ, ಮತ್ತೆ ಕೆಲವೆಡೆ ಭೆಟ್ಟಿ. ಹಾಗೆ ನೋಡಿದರೆ ದಾಮೋದರ ಬಾಳಿಗರ ಪುಸ್ತಕದ ಅಂಗಡಿಯೇ ಅವರಿಗೆ ಮಂಗಳೂರಿನ ಹೆಡ್‌ಕ್ವಾರ್ಟರ್ಸ್. ಅವರಿಬ್ಬರ ಸಾಹಿತ್ಯಿಕ ಸಂಬಂಧ ಅದೆಷ್ಟು ಅನ್ಯೋನ್ಯವೆಂಬುದನ್ನು, ಈಚೆಗೆ ಬಾಳಿಗರನ್ನು ಕಂಡ ಮೇಲೆ ನನಗೆ ಇನ್ನಷ್ಟು ಮನವರಿಕೆಯಾಯಿತು.

ಲೌಕಿಕ ವಿಚಾರಗಳಲ್ಲಿ ಪೈ ಅವರ ಸಹಾಯ ತತ್ಪರತೆ ಅಷ್ಟಾಗಿ ಬೆಳಕಿಗೆ ಬಂದಿಲ್ಲ. ನೌಕರಿ ಕೊಡಿಸುವುದು, ತದಂಗವಾಗಿ ಶಿಫಾರಸು ಪತ್ರ ಕೊಡುವುದು, ಮದುವೆ ಹೊಂದಿಸುವುದು-ಇವು ಕೆಲವು ಅಂಥ ಪರಸಹಾಯಗಳು. ಇಲ್ಲಿಯೇ ಅವರ ಜ್ಯೋತಿಷ್ಯ, ಜಾತಕಲೆಕ್ಕದ ವಿಚಾರವನ್ನು ಹೇಳಿಬಿಡ್ತೇನಿ. ಖಗೋಲ, ಜ್ಯೋತಿಶ್ಶಾಸ್ತ್ರವನ್ನು ಅವರು ಚೆನ್ನಾಗಿ ಕಲಿತಿದ್ದರು. (ಇದರ ಕಾರಣದಿಂದಾಗಿ ಅವರ ಸಂಶೋಧನೆಯಲ್ಲಿ ಕಾಲ ನಿರ್ಣಯಕ್ಕೆ ವಿಶೇಷ ಮಹತ್ವ ಇರುತ್ತಿತ್ತು.) ಅದರಿಂದಾಗಿ, ಸಂಬಂಧಿಕರಿಗೆ ಜನ್ಮಕುಂಡಲಿ ಬರೆದು ಕೊಡತಿದ್ರು. ಮದುವೆಯ ಜಾತಕ ಕೂಡಿಸಿ ನೋಡತಿದ್ರು. ಆದರೆ ಸ್ವತಃ ನಂಬುತ್ತಿರಲಿಲ್ಲ! ಯಾಕೆಂದರೆ ಕೆಲವರಿಗೆ ಈ ಬಗೆಯ ಭವಿಷ್ಯ ನಿಜ ಬಂದಿರಲಿಲ್ಲ. ಅದಕ್ಕಿಂತ ಜ್ಯೋತಿಶ್ಶಾಸ್ತ್ರದ ವಾಣಿಜ್ಯೀಕರಣ-ಎಂದರೆ ವಾರ-ಮಾಸ ಪತ್ರಿಕೆಗಳಲ್ಲಿ ಕೊಡುವ ಭವಿಷ್ಯದ ಬಗ್ಗೆ ಮಾತ್ರ ಕಟ್ಟಾ ವಿರೋಧಿಗಳಿದ್ರು. ಈ ಕಾರಣದಿಂದಲೇ ಉಡುಪಿಯ 'ರಾಯಭಾರಿ' ಸಾಪ್ತಾಹಿಕದ ಪ್ರಾರಂಭೋತ್ಸವದಲ್ಲಿ, ಪತ್ರಿಕೆಯಲ್ಲಿ ನೀವು ಭವಿಷ್ಯವನ್ನು ಪ್ರಕಟಿಸಿ ಜನರನ್ನು ಮೋಸಗೊಳಿಸಬೇಡಿರೆಂದು ಹೇಳಿದ್ದರು.

ನಾವೆಲ್ಲ ಸಹೃದಯ ಭಾವನೆಯಿಂದ ಗೇಲಿ ಮಾಡಬಹುದಾದ ಅವರ ಒಂದು ದೌರ್ಬಲ್ಯದ ವಿಷಯವೆಂದರೆ, ಹೊಗೆಬತ್ತಿಯ ಸೇವನೆ. ಸಿಗರೇಟ್, ಬೀಡಿ ಎರಡರಲ್ಲಿಯೂ ಸವ್ಯಸಾಚಿತ್ವದಿಂದ ಆ ಚಟ ಅಂಟಿಕೊಂಡಿತ್ತು. ಅದನ್ನ ಬಿಡಲೇಬೇಕೆಂಬ ನಿರ್ಧಾರವನ್ನು ಅನೇಕ ಚಟಗಾರರಂತೆ ಇವರೂ ಕೈಗೊಂಡರು - ಹಲವಾರು ಬಾರಿ! ಸಿಗರೇಟ್ ಬಿಡುವುದರ ಮೊದಲ ಹಂತ ಎಂದರೆ ಅದನ್ನು 'ಕಡಿಮೆ' ಮಾಡಬೇಕಲ್ಲವೆ. ನಮ್ಮ ವೈಕುಂಠ ಬಂಟ್ವಾಳಕರರು ಆಗಿನ್ನೂ ಹುಡುಗ. ಮಂಗಳೂರಿಗೆ ಬಂದಾಗ ಪೈಗಳು ಅವನಿಂದ ಸಿಗರೇಟ್ ತರಿಸಬೇಕು. ಎಷ್ಟು? ಎರಡೇ. ಅದಕ್ಕಾಗಿ ಆತ ಮುಕ್ಕಾಲು ಮೈಲು ದೂರ ನಡೆದುಹೋಗಬೇಕು. ಸರಿ, ತಂದ. ಅದೇ ದಿನ ತುಸು ಸಮಯದಲ್ಲೇ ಅವೆರಡನ್ನೂ ಸೇದಿ ಮುಗಿಸಿಯಾಯಿತು. ಆಗ ವೈಕುಂಠ ಮತ್ತೆ ಹೋಗಬೇಕು. ಆಗೂ ಆತ ತರಬೇಕಾದದ್ದು ಎರಡೇ! ಈ ಅಲೆದಾಟಕ್ಕೆ ಬೇಸತ್ತು ಅವನು ಒಂದು ಸಲ ನಾಲ್ಕು ಸಿಗರೇಟ್ ತಂದ. ಎರಡನ್ನೇ ಕೊಟ್ಟ ಅವರಿಗೆ. ಮತ್ತೆ ಯಥಾಪ್ರಕಾರ ಇನ್ನೆರಡನ್ನು ಅಂಗಡಿಗೆ ಹೋಗಿ ತರಬೇಕು ಎಂದಾಗ, ಈ ಮೊದಲೇ ತಂದು ಇಟ್ಟವುಗಳನ್ನು ಕೊಟ್ಟ. ಆದರೆ ಪೈಗಳಿಗೆ ನಿಜ ಸಂಗತಿ ಗೊತ್ತಾಗಿಬಿಟ್ಟಿತು - ಅವನು ಎರಡನೆಯ ಬಾರಿ ತೆಗೆದುಕೊಂಡ ಕಡಿಮೆ ವೇಳೆಯಿಂದಾಗಿ.

ಹೊಗೆಬತ್ತಿಯನ್ನು ಬಿಟ್ಟೇಬಿಡಬೇಕೆಂಬ ನಿರ್ಧಾರ ಮನಸ್ಸಿನಲ್ಲಿ ಗಟ್ಟಿಯಾಗೇ ಉಳಿದಿತ್ತು. ಆದ್ದರಿಂದ ತಮ್ಮ ಇಳಿವಯದಲ್ಲಿ, ತಿರುಪತಿ ತಿಮ್ಮಪ್ಪನಿಗೆ ಹೇಳಿಬಿಟ್ಟರು: "ಇಕೋ..... ಇಂದಿನಿಂದ ನಾ ಸಿಗರೇಟ್ ಬಿಟ್ಟೆ. ಇನ್ನೇನಾದರೂ ನಾ ಮತ್ತೆ ಆ ಚಟಕ್ಕೆ ಬಲಿಯಾದರೆ ಆ ಪಾಪಕ್ಕೆ ನೀನೇ ಹೊಣೆ." ತಿಮ್ಮಪ್ಪ ಹೇಳಿ ಕೇಳಿ ಕರುಣಾಮಯಿ, ಅದರಲ್ಲಿಯೂ ಪೈಯವರಂಥ ನಿಷ್ಪಾಪದವರ ಮೇಲೆ ಇನ್ನಷ್ಟು ಅನುಕಂಪ. ಆದ್ದರಿಂದ ಪೈಗಳು ಆ ಮುಂದೆಯೂ ಸೇದಿದ ಪಾಪದ ಹೊಣೆಯನ್ನು ಹೊತ್ತುಕೊಂಡುಬಿಟ್ಟ!

ಇನ್ನೊಂದು ಪ್ರಸಂಗ. ೧೯೫೮ರಲ್ಲಿ ಕಾಸರಗೋಡಿನಲ್ಲಿ ಸಾಹಿತ್ಯ ಸಮ್ಮೇಳನ ನೆರವೇರಿತಷ್ಟೆ. ಪೈಗಳದ್ದು ಅಲ್ಲಿ ಒಂದು ಬಗೆಯ ಆತಿಥೇಯ ಯಜಮಾನಿಕೆ. ಅನೇಕ ಹಿರಿಯ ಸಾಹಿತಿಗಳು ಸಮ್ಮೇಳನಕ್ಕೆಂದು ಆಗಮಿಸಿದ್ದಾಗ, ವೈಕುಂಠನನ್ನು ಕರೆದು "ಇಕೋ ಇಲ್ಲಿಗೆ ಬಂದಿರುವ ಹಿರಿಯರ ಯೋಗಕ್ಷೇಮದ ಭಾರ ನಿನ್ನ ಮ್ಲೇಲೆ" ಎಂದರು. ವಿಶೇಷ ಹುಮ್ಮಸ್ಸಿನಿಂದ ವೈಕುಂಠ ತುಂಬಾ ಪರಿಶ್ರಮಿಸಿದ. ಒಂದು ಬಾರಿ, ಸಾಮೂಹಿಕ ಊಟ ನಡೆದಾಗ, ಯಾರೋ ಒಬ್ಬ "ನನಗೆ ಚಪಾತಿ-ಬೇಕು. ಮಾಡಿಲ್ಲೇನ್ರಿ?" ಅಂತ ದೊಡ್ಡ ದನಿಯಿಂದ ಕೇಳಿದ. ಆಗ ಪೈಗಳು "ವೈಕುಂಠಾ, ಹೋಗು ಚಪಾತಿ ತಗೊಂಡು ಬಾ ಬೇಗ" ಎಂದರು. ಆದರೆ ಚಪಾತಿಯನ್ನು ಮಾಡಿರಲೇ ಇಲ್ಲ! ಹಾಗೆ ಪೈಗಳಿಗೆ ಹೇಳಲಿಕ್ಕುಂಟೆ? ಅಡಿಗೆಯ ಮನೆಯ ಜವಾಬ್ದಾರಿ ಹೊತ್ತಿದ್ದ ಲೀಲಾಬಾಯಿ ಕಾಮತರು ಹೇಗೋ ಒದಗಿಸಿದರು. ಸಮ್ಮೇಳನ ಮುಗಿದ ಮೇಲೆ ಪೈಗಳು "ಮಗೂ, ನೀನಿಲ್ಲದಿದ್ರೆ ನನ್ನ ಫಜೀತೀನೆ ಆಗ್ತಿತ್ತು" ಎಂದು ವೈಕುಂಠನಿಗೆ ಪ್ರಾಂಜಲ ಮನಸ್ಸಿನಿಂದ ಹೇಳಿದಾಗ, ಅವನಿಗೆ ತಾನು ಪಟ್ಟ ಶ್ರಮ ಸಾರ್ಥಕವೆನಿಸಿತಂತೆ.

ಮುಂದೊಮ್ಮೆ ವೈಕುಂಠರು ವಿಶೇಷ ಬೇನೆಯಿಂದ ಹಾಸಿಗೆ ಹಿಡಿದಿದ್ದಾಗ, ಪೈಗಳು ಮಂಜೇಶ್ವರದಿಂದ ಧಾವಿಸಿ ಬರತಿದ್ರು. ದೇವರ ಪ್ರಸಾದವನ್ನು ತಂದು ಅವನ ತಲೆದಿಂಬಿನಡಿಯಲ್ಲಿ ಇಡುತ್ತಿದ್ದುದರ ಜೊತೆಗೆ ಶುಶ್ರೂಷೆ ಮಾಡತಿದ್ರು. "ಅವರ ಈ ಶುಶ್ರೂಷೆ ನನ್ನ ಬಳಲಿದ ದೇಹಕ್ಕೆ, ಮನಸ್ಸಿಗೆ ಅದೆಷ್ಟೊ ಚೈತನ್ಯ ಮೂಡಿಸಿತು. ಬೇಗ ಗುಣ ಹೊಂದಿದೆ" ಎಂದು ನೆನೆಯುತ್ತಾರೆ, ವೈಕುಂಠರು.

ಪೈಗಳ ಸರಳ ಸ್ವಭಾವದ್ಯೋತಕವಾದ ಹಲವಾರು ಇಂಥ ಸನ್ನಿವೇಶಗಳನ್ನು ವೈಕುಂಠ ಬಂಟ್ವಾಳಕರರು ನನಗೆ ಹೇಳಿದ್ದಾರೆ. ಅವುಗಳಲ್ಲಿ ಇದೊಂದು ಆವಿದ್ಧ ಸನ್ನಿವೇಶ. ಪೈಗಳ ಕೊನೆಯ ದಿನಗಳಿಗೆ ಸಂಬಂಧಪಟ್ಟದ್ದು. ಋಗ್ಣಶಯ್ಯೆಯಲ್ಲಿದ್ದ ಅವರಿಗೆ ಕ್ಲುಪ್ತ ಸಮಯಕ್ಕೆ ಇಂಜೆಕ್ಶನ್ ಕೊಡಬೇಕಾಗುತ್ತಿತ್ತು. ಒಂದು ಸಮಯಕ್ಕೆ ಡಾಕ್ಟರರು ಬರಲೇ ಇಲ್ಲ. ಗಟ್ಟಿ ಧೈರ್ಯ ಮಾಡಿ ಬಂಟ್ವಾಳಕರರೇ ಚುಚ್ಚಿಬಿಟ್ಟರು. ಪರಿಣಾಮ? ಪೈಗಳು ಚಿಟ್ಟನೇ ಚೀರಿದರಂತೆ. "ಅಯ್ಯೋ! ಕೊನೆ ಗಳಿಗೆಯಲ್ಲಿ ದೊಡ್ಡ ಮಾವನನ್ನು ನಾನು ನೋಯಿಸಿದೆ" ಎಂಬುದಾಗಿ ಹನಿಗಣ್ಣಿನಿಂದ ಬಂಟ್ವಾಳಕರರು ಆ ಪ್ರಸಂಗವನ್ನು ನೆನೆದರು.

ಪೈಗಳದ್ದು ಹಟದ ಸ್ವಭಾವ. ಆಢ್ಯತೆ, ದುರಭಿಮಾನಗಳು ಲವಲೇಶವೂ ಇಲ್ಲದ, ಮಗುವಿನ ನಿರ್ಮಲ ಸ್ವರೂಪದ ಪ್ರಾಮಾಣಿಕ ಹಟವದು. ಈ ಗುಣ ಅವರ ಸಾಹಿತ್ಯಿಕ ಗೈಮೆಯಲ್ಲಿ ಸಾಕಷ್ಟು ಕಂಡುಬಂದಿದೆ. ಉದಾಹರಣೆಗೆ ಅಡಿ ಟಿಪ್ಪಣಿ. ಅದನ್ನು ಮೊದಲಿನಿಂದಲೂ ಕೊಡುತ್ತ ಬಂದರು. ಕೊನೆಗಾಲದ ಕವಿತೆಗಳಿಗೂ ಕೊಟ್ಟಿದ್ದಾರೆ. 'ಅರೆ, ಇದರ ಅರ್ಥ ಸುಲಭವಾದದ್ದೇ. ಅಡಿ ಟಿಪ್ಪಣಿಯಲ್ಲಿ ಹೇಳಕಾರಣವಿರಲಿಲ್ಲ' ಎಂದು ನಮಗೆ ಅನೇಕ ಬಾರಿ ಅನಿಸುವದುಂಟು. ಆದರೂ ಅವು ಬೇಕೇ ಬೇಕು. ಶಬ್ದಗಳನ್ನು ಸೃಷ್ಟಿಸಬೇಕೆನ್ನುವುದೂ ಒಂದು ಬಗೆಯ ಹಟವೆ. (ಮುದ್ದಣನಲ್ಲಿದ್ದಂತೆ. ಹಾಗೆ ನೋಡಿದರೆ ಇದೊಂದು ದ. ಕ. ಜಿಲ್ಲೆಯವರ ವೈಶಿಷ್ಟ್ಯವೇ ಆಗಿದ್ದಿತು.) ಒಂದು ಉದಾಹರಣೆ ನೆನಪಿಗೆ ಬರ್‍ತದೆ. ಚೊಚ್ಚಲು ಕವನ, ಮೀಸಲುಗವಿತೆ - ಎಂದು ಯಾವುದಕ್ಕೆ ನಾವು ಹೇಳ್ತೇವೆಯೊ, ಅದನ್ನು ಪೈಗಳು 'ಕನ್ಯಾ ಕವಿತೆ' ಎಂದು ಕರೆದರು - Maiden Poem ಎಂಬುದನ್ನು ಅನುಸರಿಸಿ. ಅವರು ತಮ್ಮ ಸಂಶೋಧನ ವಿಚಾರವೊಂದನ್ನು ಮಂಡಿಸುವಾಗ ಆಧಾರ-ಪುರಾವೆಗಳನ್ನು ಕೊಟ್ಟಿರುವರಷ್ಟೆ. ಎಂಟು ಹತ್ತು ಆಧಾರಗಳನ್ನು ಕೊಟ್ಟ ಮೇಲೆಯೂ "ಇನ್ನೂ ಹೇಳುವುದಾದರೆ......" ಎಂಬುದಾಗಿ ಮತ್ತೊಂದನ್ನು ಸೇರಿಸಿದರೇ!

'ಪ್ರಾಮಾಣಿಕ ಹಟ' ಎಂದೆ. ಹೌದು, ಪ್ರಾಮಾಣಿಕತೆ ಅಂತಂದ್ರೆ ಅವರ ವಿಚಾರ ಹಾಗೂ ಮಾತುಬರಹಗಳಲ್ಲಿ ಕಂಡು ಬರುವ ಏಕರೂಪತೆ. ಇದೊಂದು ಬಗೆಯ ತ್ರಿಕರಣಶುದ್ಧಿ. (ಕಾರಂತರು, ನನ್ನಂತಹರು ಅವರ ಬಗ್ಗೆ ವಿಶೇಷ ಆದರಭಾವವನ್ನು ತಳೆದಿರುವುದಕ್ಕೆ ಇದೇ ಮುಖ್ಯ ಕಾರಣ). ಅವರು ಏನೇ ಬರೆದರೂ, ಮನಸ್ಸಿಗೆ ತೋಚಿದ ರೀತಿಯಲ್ಲಿ ನೇರವಾದದ್ದಿರುತಿತ್ತು. ತುಂಬಾ ಉತ್ಸಾಹದಿಂದ, ಕಾವಿನಿಂದ ಅವರು ಯಾವದೊಂದು ವಿಷಯವನ್ನು ಮಂಡಿಸತಿದ್ರು. ಬಹಳ ಸೀರಿಯಸ್ ಆಗಿ ವಾದ ಮಾಡ್ತಿದ್ರು. ಅದಕ್ಕೆ ಕಾರಣ ಅವರು ಯಾವುದೇ ತಮ್ಮ ವಿಚಾರದಲ್ಲಿ ಅತ್ಯಂತ ಗಾಢವಾದ ನಂಬಿಕೆಯನ್ನು ಇರಿಸಿಕೊಂಡಿದ್ರು. "ತಮ್ಮ ಸ್ವಂತ ಲೇಖನಗಳ ಬಗ್ಗೆ ಅವರು ತಾಳಿರುತ್ತಿದ್ದ ಗಾಂಭೀರ್ಯ ಪ್ರಾಮಾಣಿಕತೆಗಳನ್ನು ಬೇರೆ ಒಬ್ಬಿಬ್ಬರಲ್ಲಿ ಮಾತ್ರ ಕಾಣಬಹುದು" ಎಂದು ಬೇಂದ್ರೆಯವರು ಹೇಳಿದ್ದನ್ನು ಇಲ್ಲಿ ನೆನೆಯಬಹುದು. ಮೋಜೆಂದರೆ ಇತರರೂ ಅಷ್ಟೇ ಪ್ರಾಮಾಣಿಕತನದಿಂದ ವರ್ತಿಸುತ್ತಾರೆ ಅಂತಲೂ ನಂಬಿದ್ದರು.

ಹಾಗಿದ್ದರೆ ಸಂಶೋಧನ ಬರಹದಲ್ಲಿ ತಮ್ಮದು ತಪ್ಪು ನಿಲುಮೆ ಎಂದು ಕಂಡು ಬಂದರೆ ಗೋವಿಂದ ಪೈ ಅಷ್ಟೇ ಪ್ರಾಂಜಲವಾಗಿ ಒಪ್ಪಿಕೊಳ್ಳುತ್ತಿದ್ದರೆ? ನಿಸ್ಸಂಶಯವಾಗಿ ಹೌದು. ಇದಕ್ಕೆ ಹತ್ತಾರು ನಿದರ್ಶನಗಳು ದೊರೀತವೆ. ಹರಿಹರನ ಗಿರಿಜಾಕಲ್ಯಾಣದಲ್ಲಿ ಬರುವ ಶಂಕರಾಚಾರ್ಯರನ್ನು ಆದಿಶಂಕರರೆಂದು ತಮ್ಮೊಂದು ಲೇಖನದಲ್ಲಿ ಕಾಣಿಸಿದ್ದರು. ಎಂ.ಆರ್.ಶ್ರೀ. ಅದು ತಪ್ಪೆಂದು ತೋರಿಸಿಕೊಟ್ಟಾಗ, ಪೈಗಳು ಮುಕ್ತಮನದಿಂದ ಒಪ್ಪಿಕೊಂಡರು. ಆದರೆ ಈ ತಪ್ಪೊಪ್ಪಿಗೆ ಸಾಂಗತಿಕ ತಪ್ಪು ಇದ್ದಾಗ ಮಾತ್ರ! ಅಭಿಪ್ರಾಯ ಭೇದ ಇದ್ದಾಗ

ಅಲ್ಲ. ಅಂಥ ಸಂದರ್ಭದಲ್ಲಿ Compromise ಎನ್ನುವುದು ಅವರ ಜಾಯಮಾನದಲ್ಲಿ ಇರಲೇ ಇಲ್ಲ. ಹಲ್ಮಿಡಿಯ ಶಾಸನದ ಕಾಲವನ್ನು ಕ್ರಿ. ಶ. ೫ನೆಯ ಶತಮಾನದಿಂದ, ಮೂರನೆಯ ಶತಮಾನಕ್ಕೆ ಒಯ್ದಾಗಿನ ಪ್ರಸಂಗವನ್ನು ಇದಕ್ಕೆ ಉದಾಹರಣೆಯಾಗಿ ತಿಳಿಯಬಹುದು. ಇತ್ತ 'ಗೊಮ್ಮಟ' ಶಬ್ದದ ನಿಷ್ಪತ್ತಿಯ ವಿಚಾರದಲ್ಲಿ ಅವೆರಡೂ ಅಂಶಗಳನ್ನು ಕಾಣುತ್ತೇವೆ. 'ಮನ್ಮಥ' ಪ್ರಾಕೃತದಲ್ಲಿ 'ಗಮ್ಮಹ'ವಾಗಿ ಇದ್ದು ಆಮೇಲೆ ಕನ್ನಡದಲ್ಲಿ ಗೊಮ್ಮಟ ಆಯಿತು-ಎಂಬುದು ಅವರ ವಾದ. ಆದರೆ ಆ.ನೇ. ಉಪಾಧ್ಯೆ ಅವರು ಪ್ರಾಕೃತದಲ್ಲಿ ಅದು 'ಗಮ್ಮಹ' ಎಂದಾಗದೇ 'ವಮ್ಮಹ' ಆಗ್ತದೆ ಎಂದಾಗ ಪೈಗಳು ಒಪ್ಪಲಿಲ್ಲ. ಇಷ್ಟೇ ಅಲ್ಲ, ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ತುಂಬಾ ಪತ್ರವ್ಯವಹಾರ ಮಾಡಿದರು. ಕೊನೆಗೊಮ್ಮೆ ಸಮರ್ಥನೆ ಸಿಕ್ಕದೆಂದು ತಿಳಿದ ಕ್ಷಣವೇ, ತಮ್ಮ ನಿಲುವು ತಪ್ಪಿದೆಯೆಂದು ಒಪ್ಪಿಕೊಂಡರು.

ಅವರ ಪ್ರಸಿದ್ಧಿ ವಿಮುಖತೆಗೆ ಈ ಪ್ರಾಮಾಣಿಕತೆ ಮೂಲ ಕಾರಣವಿರಬಹುದೆ? ನನಗೇನೊ ಹಾಗೇ ಕಾಣಸ್ತದೆ. ಬರೆದದ್ದಕ್ಕೆಲ್ಲ ಯಶಸ್ಸು ಸಿಗಬೇಕು; 'ಅರ್ಥ' ಪ್ರಯೋಜನ ದೊರೀಬೇಕು - ಅಂತ ನಮ್ಮಲ್ಲಿ ಅನೇಕಾನೇಕರು ಪ್ರಯತ್ನಿಸತೇವೆ, ಹಪಾಪಿಸತೇವೆ. ಪೈಗಳು ಇದಕ್ಕೆ ತೀರ ವಿರುದ್ಧ. ಇದೇನು ಇಳಿಗಾಲದ ನಿರಾಸಕ್ತಿ ಎಂದಲ್ಲ. ಮೊದಲಿನಿಂದಲೂ ಇದ್ದ ಮನೋಭಾವವದು. 'ಗಿಳಿವಿಂಡು' ಈ ಮೊದಲ ಸಂಗ್ರಹವನ್ನು ದಾಮೋದರ ಬಾಳಿಗರು ಪ್ರಕಟಿಸಬೇಕೆಂದಾಗ (೧೯೩೦), ಒತ್ತಾಯಕ್ಕೆ ಮಣಿದು ಒಪ್ಪಿದರು. ಆದರೆ ಕೆಲವು ಕರಾರುಗಳನ್ನು ಹಾಕಿದರು! ಒಂದು : ೨೫೦ ಪ್ರತಿಗಿಂತ ಹೆಚ್ಚು ಮುದ್ರಿಸಬಾರದು. ಎರಡು: ಪಠ್ಯಪುಸ್ತಕವಾಗಿ ಮಾಡಲು ಯಾವ ರೀತಿಯಿಂದಲೂ ಪ್ರಯತ್ನಿಸಕೂಡದು.

ಕಡೆಕಡೆಗೆ ಅವರು ಇಂಥ ಸಂಗ್ರಹಗಳನ್ನು ಹೊರ ತರುವುದಕ್ಕೂ ವಿರೋಧಿಸುತ್ತಿದ್ದರು. ಮುಂಬಯಿಯ ಒಬ್ಬ ಪ್ರಕಾಶಕರಿಗೆ, ಕೋಟೆಕಾರದ ಸಾಹಿತ್ಯಾಂಜಲಿ ಗ್ರಂಥಮಾಲೆಯವರಿಗೆ ಹಾಗೆ ಸ್ಪಷ್ಟವಾಗಿ ಬರೆದು ತಿಳಿಸಿದ್ದಾರೆ. ಅವರ ಬರಹಗಳ ಸಾದಾ ಪರಿಚಯ ಮಾಡಿಕೊಡುತ್ತೇವೆಂದು ಮ. ವಿ. ನಾಯಕ ಹಾಗೂ ನಾನು ಅವರನ್ನು ಕೇಳಹೋಗಿ ಬೈಸಿಕೊಂಡು ಬಂದಿದ್ದೇವೆ. 'ಸ್ವಾಂತಸ್ಸುಖಾಯ ಬರೆದಾದ ಮೇಲೆ ನಾಲ್ಕು ಜನರ (ಸಾವಿರಾರು ಜನ, ಅಲ್ಲ!) ಕಣ್ಣಿಗೆ ಬಿದ್ದರೆ ಅಷ್ಟು ಸಾಕು. ಅದಕ್ಕೂ ಮುಂದೆ ಹೋದದ್ದಾದರೆ ಅದು ಪ್ರಸಿದ್ಧಿ ಎನಿಸಿಕೊಳ್ಳುತ್ತದೆ. ಪ್ರಚಾರಕ್ಕೂ ಎಡೆಮಾಡಿಕೊಡುತ್ತದೆ. ಅದು ಕೃತ್ರಿಮ, ಡಂಭಾಚಾರ ಎಂದು ಅವರಿಗೆ ಅನಿಸುತ್ತಿತ್ತು. ಹೀಗಿರುತ್ತ ಪ್ರಶಸ್ತಿ, ಪದವಿ, ಸನ್ಮಾನಗಳಂತೂ ಅವರ ಕನಸಿನಲ್ಲಿ ಸುಳಿಯಲಿಕ್ಕೂ ಹೆದರಬೇಕು!

ಕವಿತೆಯೇ ಇರಲಿ, ಸಂಶೋಧನೆಯೇ ಇರಲಿ, ಅವರ ಬರವಣಿಗೆಗೆ ಬೆಂಗಾವಲಾಗಿ ನಿಂತವುಗಳೆಂದು ಬಹುಶ್ರುತತ್ವ ಹಾಗೂ ಬಹುಭಾಷಾ ಪರಿಚಯ ಇವನ್ನು ಹೆಸರಿಸಬೇಕು. ಅವರ ಜ್ಞಾನಾರ್ಜನೆಯ ವಿಸ್ತಾರ, ವೈವಿಧ್ಯಗಳ ಕಲ್ಪನೆ ಬರಬೇಕಾದರೆ, ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿಯ ಆ ಗ್ರಂಥ ಸಂಗ್ರಹವನ್ನು ನೋಡಬೇಕು. ಮಹತ್ವದ್ದೆಂದರೆ,

ಓದುತ್ತ, ಓದುತ್ತ ಅವರು ಹಾಕುತ್ತಿದ್ದ ಕತ್ತರಿ ಗುರುತು, ಉದ್ದಗೀಟು, ಅಡ್ಡಗೀಟು, ಪ್ರಶ್ನಾರ್ಥಕ ಚಿಹ್ನೆ ಮತ್ತು ಚಿಕ್ಕ ಟಿಪ್ಪಣಿಗಳನ್ನು ಕಂಡಾಗ ಅವರ ವ್ಯಾಸಂಗ ಎಷ್ಟು ಆಳವಾಗಿತ್ತೆಂಬುದನ್ನೂ ಅರಿಯಬಹುದು. (ಅನುಬಂಧ ೨ ನೋಡಬಹುದು)

ಬಹು ಭಾಷೆಗಳನ್ನು ಅವರು ಕಲಿತಿದ್ದರ ಕಾರಣ, ಯಾವದೊಂದು ವಿಷಯವನ್ನು ಮೂಲದಲ್ಲಿಯೇ ತಿಳಿಯಬೇಕು ಎನ್ನುವ ಬೌದ್ಧಿಕ ಛಲ. ಈ ಕಲಿಯುವಿಕೆಯಲ್ಲಿ 'ನಡೀತದೆ' ಅನ್ನುವ ಪ್ರಮೇಯಕ್ಕೆ ಎಂದರೆ ಅದರ Working Knowledge ಇದ್ದರೆ ಸಾಕು ಎಂಬ ಮನೋಭಾವಕ್ಕೆ - ಅವರಲ್ಲಿ ಅವಕಾಶವೇ ಇದ್ದಿಲ್ಲ. ಹಾಗೆ ಮೊದಲಿಗೆ ಕಲಿತ ಹೊರಗಿನ ಭಾಷೆಯೆಂದರೆ ಬಂಗಾಲಿ. ಅದಕ್ಕೆ ರವೀಂದ್ರರ ಪ್ರಭಾವ ಕಾರಣವಾಗಿರಬೇಕು. ಅನಂತರದ್ದು ಫ್ರೆಂಚ್ ಮತ್ತು ಜರ್ಮನ್. ಈ ಭಾಷೆಗಳಲ್ಲಿನ ಕವಿತೆಗಳನ್ನು ಇಂಗ್ಲೀಷ್‌ಗೆ ಅನುವಾದಿಸುವಷ್ಟು ಆಸ್ಥೆ ಕುದುರಿತು -೧೯೧೧ರ ವೇಳೆಗೆ. ಅನಂತರದ ಅಪರ ಕಲಿಕೆಯ ಭಾಷೆಯೆಂದರೆ ಗ್ರೀಕ್. ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳೇನಿವೆಯೆಂದು ತಿಳಿಯಲೋಸುಗ (೧೯೨೯) ಇದನ್ನು ಮೊದಲು ಕಲಿತದ್ದಲ್ಲ. ಅದಕ್ಕೂ ಮುಂಚೆ ಕುಶಾಣ, ಪಹ್ಲವ, ಶಕ - ಈ ವಾಯವ್ಯ ಪ್ರಾಂತದ ರಾಜರ ಚರಿತ್ರೆಯನ್ನು ತಿಳಿಯಲು ಗ್ರೀಕ್ ವ್ಯಾಸಂಗದ ಅಗತ್ಯ ಬಿದ್ದಿತು - ೧೯೨೫ರ ಸುಮಾರಿಗೆ. Rapsonನ Coins of India ಗ್ರಂಥದಲ್ಲಿ ಉದ್ದಕ್ಕೂ ಗ್ರೀಕ್ ಶಬ್ದಗಳು ಬರುತ್ತಿದ್ದು, ಅವಕ್ಕೆಲ್ಲ ಪೈಗಳು ಇಂಗ್ಲೀಷ್‌ನಲ್ಲಿ ಅರ್ಥ ಮತ್ತು ಟಿಪ್ಪಣಿ ಬರೆದುಕೊಂಡಿದ್ದಾರೆ. ಇನ್ನೊಂದೇ ಭಾಷೆಯನ್ನು ಹೆಸರಿಸುವೆ, ಅದು 'ಪಾಲಿ'ಯದು. ಅದನ್ನು ಓರ್ವ ಸಿಲೋನೀ ಬೌದ್ಧ ಸನ್ಯಾಸಿಯಿಂದ ಹೇಳಿಸಿಕೊಂಡರು; ಆಮೇಲೆ ಆ ಸನ್ಯಾಸಿಯ ಕುರಿತು ಒಂದು ಚರಮ ಗೀತೆಯನ್ನೂ ರಚಿಸಿದುದುಂಟು.

ಲೇಖಕನಾದವನಿಗೆ ಬೆಂಗಾವಲಾಗಿ ಇನ್ನೆರಡು ಅಂಗಗಳು ಬೇಕಾಗುತ್ತವೆ. ಅದೆಂದರೆ ಸಹಲೇಖಕರ ಸಾಹಚರ್ಯ ಮತ್ತು ವಾಚಕ ಪ್ರತಿಕ್ರಿಯೆ. ನಮ್ಮ ಸಾಹಿತ್ಯ ಕಾರ್ಯದ ವಿಕಾಸಕ್ಕೆ ಇವು ಆವಶ್ಯಕ. ವಾಚಕ ಪ್ರತಿಕ್ರಿಯೆಗೆ ಪೈಗಳು ಗಮನ ಕೊಟ್ಟವರಲ್ಲ. ಈ ಅಂಶವನ್ನು ಹೇಳಿಯಾಗಿದೆ. ಆದರೆ ತಮ್ಮ ಲೇಖನೋದ್ಯಮದಲ್ಲಿ ವಿಶೇಷತಃ ಸಂಶೋಧನ ರಂಗದಲ್ಲಿ ಅವರಿಗೆ ಸರಿಸಮಾನರಾಗಿ, ಪ್ರಸಂವಾದ (Interaction) ನೀಡುವಂಥವರು ಒಟ್ಟಿನಲ್ಲಿ ಇರಲೇ ಇಲ್ಲ- ಒಬ್ಬರನ್ನು ಬಿಟ್ಟರೆ! ಅವರೇ ಡಿ. ಎಲ್. ನರಸಿಂಹಾಚಾರ್ಯರು. ಹಳಗನ್ನಡ ಕಾವ್ಯ, ಸಂಸ್ಕೃತ- ಪ್ರಾಕೃತ ಕೃತಿಗಳು, ಇತಿಹಾಸ, ಶಾಸನ, ಭಾಷಾಶಾಸ್ತ್ರ, ನಾಟ್ಯಶಾಸ್ತ್ರ, ತತ್ತ್ವವಿಚಾರ - ಈ ಎಲ್ಲ ರಂಗಗಳಲ್ಲಿ ಡಿ.ಎಲ್.ಎನ್.ರೊಡನೆ ಪೈಗಳು ವ್ಯವಹರಿಸಿದ್ದರ ಕೆಲ ನಿದರ್ಶನಗಳು ಈಚೆಗೆ ದೊರೆತಿವೆ. ಬೇರೆ ಕೆಲವು ವಿದ್ವಾಂಸರು ಅವರಿಗೆ ದೊರೆಯಬಹುದಿತ್ತೋ ಏನೋ. ಆದರೆ ಅದು ಪೈಗಳ ಸ್ವಭಾವವೇ ಆಗಿರಲಿಲ್ಲವಲ್ಲ?



# ೮ ಪೈಗಳ ಮೊತ್ತಮೊದಲಿನ ಕವಿತೆ

"೧೯೦೦ನೆಯ ಜುಲಾಯಿಯಲ್ಲಿ ಮಂಗಳೂರಿನಲ್ಲಿ 'ಸುವಾಸಿನಿ' ಎಂಬ ಮಾಸಪತ್ರಿಕೆ ಹೊರಟಿತು. ಅದೇ ಸಂಚಿಕೆಯಲ್ಲಿ 'ಸುವಾಸಿನಿ'ಯ ಕುರಿತು ಕೆಲವು ಪದ್ಯಗಳನ್ನು ರಚಿಸಿದವರಿಗೆ ೫ ರೂಪಾಯಿ ಬಹುಮಾನ ಕೊಡುವರೆಂದು ಪ್ರಕಟಿಸಿರುವುದನ್ನು ಕಂಡು ಪ್ರಾಸುಳ್ಳ ೩ ಕಂದ ಪದ್ಯಗಳನ್ನು ಕಳಿಸಿಕೊಟ್ಟೆ. ಆ ಉಡುಗೊರೆ ನನಗೆ ದಕ್ಕಿತು. ಆ ಪದ್ಯಗಳು ಮರುತಿಂಗಳಿನ ಸಂಚಿಕೆಯಲ್ಲಿ ಪ್ರಕಟವಾದುವು. ನನ್ನ ಕವಿತೆ ಅಚ್ಚಾದುದು ಅದೇ ಮೊದಲ ಬಾರಿ...."

*ಪೈ 'ಸಾಹಿತ್ಯ ಜ್ವರ ಆತ್ಮ ಕಥನ' ಲೇಖನದಲ್ಲಿ*

'ಸುವಾಸಿನಿ' ಪದ್ಯವು ಆಗಸ್ಟ್ ೧೯೦೦ರ ಸಂಚಿಕೆಯಲ್ಲಿ ಪ್ರಕಟವಾಯಿತೆಂದು ಹೇಳಲಾಗುತ್ತಿತ್ತು. ಆದರೆ ಕವನದ ಪಠ್ಯವು ಇದುವರೆಗೆ ದೊರೆತಿರಲಿಲ್ಲ. ಅದರ ಕಾರಣ ೧೯೦೦ರಷ್ಟು ಹಳೆಯ 'ಸುವಾಸಿನಿ' ಸಂಪುಟದ ಅಲಭ್ಯತೆ. ಹಾಗೊಂದು ಸಂಪುಟ ನಮಗೆ ಸಿಕ್ಕಿತೇನೊ ನಿಜ; ಆದರೆ ಆ ಪದ್ಯ ಇರಲಿಲ್ಲ, ಬೆಂಗಳೂರಿನ ಒಂದು ಹಳೆಯ ಲೈಬ್ರರಿಯಲ್ಲಿದ್ದ ಸಂಪುಟದಲ್ಲಿಯೂ ನಾಸ್ತಿ! ಹಾಗಾದರೆ ಹೋಯಿತೆಲ್ಲಿ? ಅದರ ಉಲ್ಲೇಖವೇ ತಪ್ಪಾಗಿದ್ದಿತೆ?

ಹಾಗೇನಿಲ್ಲ. ಆ ಕವನವು ಆಗಸ್ಟ್ ಸಂಚಿಕೆಯ ಕವರ್ ಪುಟದಲ್ಲಿ ಮುದ್ರಿತವಾಗಿತ್ತು! ಮತ್ತು ಬೈಂಡ್ ಮಾಡಿಸುವಾಗ ಕವರನ್ನು ಹರಿದು ತೆಗೆಯುವ ಪರಿಪಾಠದಿಂದಾಗಿ, ಅದು ಹೋಗಿಬಿಟ್ಟಿದ್ದಿತು. ಆದರೆ ಮಿತ್ರ ಶ್ರೀ ಶಿವಾಜಿ ಜೋಯಿಸರ ಸಂಗ್ರಹದಲ್ಲಿ ಲಭ್ಯವಾಗಿದ್ದು, ಆ ಅಪೂರ್ವ ಕವನವನ್ನು ಇಲ್ಲಿ ಕೊಡಲಾಗಿದೆ:

೧. ಕನ್ನಡ ಬಲ್ಲಿದರೆಲ್ಲರ
ಮುನ್ನೀರಿನ ಬೆಳ್ಬೆಳಗಿನ ಧ್ರುವ ತಾರಗೆಯೆ ||
ನಿನ್ನಯ ಕಿರಣದೆ ನೌಕಾ-
ಸನ್ನುತರಲ್ಲದ ನರರಂ ಜತನದೆ ನಡಿಸೌ ||

೨. ಕಮಲೆ | ಕಳ್ತಲು ಸರಿದಪು
ದಮಮಾ | ವಿಜ್ಞಾನಭಾಸ್ಕರಂ ಮೆಲ್ಬೆಳಗಂ ||
ಸುಮದೊಳ್ಗರೆದಪನೇಳೌ |
ಸಮನಿಸುತಲಿ ಭ್ರಾತೃ ಭಗಿನಿಯರನೆಚ್ಚರಿಸೌ ||

೩. ಎಳೆಮಕ್ಕಳ್ಗವಂದಿರ
ಕಳೆಯಂ ತಾಯ್ವಿಂದಿರಿಂದೆ ಪೀರುಲೆವೊಲ್ಲರ್ ||
ಕಲಿಪೊಲು ನಿನ್ನ (ನ್ನಿ?)ದನಿಶಂ
ನೆಲದೆ ಸುವಾಸಿನಿ ಸುವಾಸಿನೀ ಎನೆ ಬಾಳೌ||

ಇಂದಿಗೆ ೧೦೪ ವರ್ಷಗಳ ಹಿಂದೆ ರಚಿತವಾದ ಇದರ ಚಾರಿತ್ರಿಕ ಮಹತ್ವವನ್ನು ಅರಿಯಬೇಕಾದರೆ, ಹೊಸಗನ್ನಡ ಕವಿತೆ, ಭಾವಗೀತೆ ಆರಂಭವಾದ ಕಾಲವನ್ನು ಗಮನಿಸಬೇಕಾಗುತ್ತದೆ. ನಮ್ಮ ಭಾವಗೀತೆಗೆ ಪ್ರೇರಣೆ ದೊರಕಿದ್ದು ಇಂಗ್ಲೀಷ್ ಸಾಹಿತ್ಯದಿಂದ ಎಂಬುದು ನಿರ್ವಿವಾದ. ಹತ್ತೊಂಬತ್ತನೆಯ ಶತಮಾನದಲ್ಲಿ, ಮಿಶನರಿ ಜನರಿಂದ, ಮೈಸೂರಿನ ಆಸ್ಥಾನಿಕರಿಂದ ಹಾಗೂ ಉತ್ತರ ಕರ್ನಾಟಕದ ಶಾಲಾ ಶಿಕ್ಷಕರಿಂದ ಹೊಸಗನ್ನಡ ಸಾಹಿತ್ಯದ ಉಗಮವಾಯಿತು. ಹಿಂದೆ ಕಂಡುಬಾರದ ಗದ್ಯಗ್ರಂಥಗಳು, ನಾಟಕಾನುವಾದಗಳು, ಪತ್ರಿಕೆಗಳು, ಭಾಷಾಭ್ಯಾಸದ ಸಾಧನಗಳು, ಅನುವಾದಿತ ಕಾದಂಬರಿಗಳು ಸಹ ಪ್ರಕಟವಾದುವು. ಆದರೇನು ಸ್ವತಂತ್ರವಾದ ಭಾವಗೀತೆ ಹುಟ್ಟಿಕೊಂಡಿರಲಿಲ್ಲ. ಬದಲಾಗಿ ಚರ್ವಿತ ಚರ್ವಣವೆನಿಸುವ ವಿಷಯಗಳ ಮೇಲೆ ಬರೆದ, ಅಕ್ಷರ-ಮಾತ್ರಾ ವೃತ್ತಗಳಲ್ಲಿ, ಕಂದ ಷಟ್ಪದಿಗಳಲ್ಲಿ ರಚಿತವಾದ ಪದ್ಯಗಳು ಆ ಕಾಲದಲ್ಲಿ ಬೇಕಾದಷ್ಟು ಕಂಡುಬರುತ್ತವೆ. ಆದರೆ ಹೊಸ ಭಾವನೆಗಳಿಂದ ಕೂಡಿದ, ಸ್ವನಿಷ್ಠವಾದ ಕವಿತೆ ಜನ್ಮ ತಾಳಿರಲಿಲ್ಲ.

ಇಬ್ಬರು ಮಾತ್ರ ಇದಕ್ಕೆ ಅಪವಾದವಾಗಿದ್ದರು. ಅವರೇ ಬಾಸೆಲ್ ಮಿಶನ್ನಿನ ಮೊವ್‌ಗ್ಲಿಂಗ್ ಮತ್ತು ಕಿಟೆಲ್ಲರು(೧೮೪೫; ೧೮೬೨). ಅವು ಕ್ರೈಸ್ತ ಧರ್ಮೇತರ ಪದ್ಯರಚನೆಗಳಾಗಿದ್ದು ೩ನೆಯ ವಾಚನ ಪುಸ್ತಕ ಮತ್ತು ಬಾಲಕರ ಗೀತೆಗಳು ಕೃತಿಗಳಲ್ಲಿ ಬಂದಿವೆ. ಇವು ಲಭ್ಯವಿಲ್ಲದ್ದರಿಂದ ವಿಮರ್ಶಕರ ಕಣ್ಣಿಗೆ ಬಿದ್ದಿಲ್ಲ. ಕ್ರಿ.ಶ. ೧೮೯೦ರಿಂದ ಸುಲಲಿತವಾದ ಹಾಗೂ ಸರಳ ಶೈಲಿಯಲ್ಲಿ ಹೇಳಿದ ಪದ್ಯಗಳು ಕ್ರಮೇಣ ತಲೆದೋರಿದುವು. ಅವು ಆಗಿನ ಪ್ರಾಥಮಿಕ ಮಟ್ಟದ ಪಠ್ಯಪುಸ್ತಕಗಳಿಗಾಗಿ ರಚಿತವಾಗಿದ್ದುವು. ಜೊತೆಗೆ ಇಂಗ್ಲೀಷ್‌ನಿಂದ ಅನುವಾದಗೊಂಡ ಕವಿತೆಗಳೂ ಬರಲಾರಂಭಿಸಿದವು. ಕ್ರಿ.ಶ. ೧೯೦೦ಕ್ಕೆ ಮುಂಚೆ ಹಾಗೆ ರಚನೆ ಮಾಡತೊಡಗಿದವರಲ್ಲಿ ಮೂವರ ಹೆಸರು ಕೇಳಿಬಂದಿತು - ಮೈಸೂರಲ್ಲಿ ಎಸ್. ಜಿ. ನರಸಿಂಹಾಚಾರ್ಯರು; ಧಾರವಾಡದಲ್ಲಿ ಶಾಂತ ಕವಿಗಳು; ಹಾಗೂ ಮಂಗಳೂರಲ್ಲಿ ಪಂಜೆ ಮಂಗೇಶರಾಯರು. ಇವರೆಲ್ಲ ಸೇರಿ ರಚಿಸಿದ ಕವನಗಳು ಒಟ್ಟಿಗೆ ೧೫-೨೦ ಮಾತ್ರವೆ ಇದ್ದಾವು. ಆದರೆ ಸ್ವತಂತ್ರವಾದ ಭಾವಗೀತೆಗಳು ಇದ್ದೇ ಇರಲಿಲ್ಲವೆನ್ನುವಷ್ಟು ವಿರಳವಾಗಿದ್ದುವು. ಅಷ್ಟನ್ನೇ ಆಗಲಿ ಕಂಡುಕೊಳ್ಳಲು, ೧೯೦೦ಕ್ಕಿಂತ ಮುಂಚಿನ ಹಳೆಯ ಪತ್ರಿಕೆಗಳ ಸಂದು-ಮೂಲೆಗಳನ್ನು ತಡಕಾಡಿದರೆ ಮಾತ್ರ ಸಿಕ್ಕಬಹುದೇನೋ. ಇಂಥ ಸ್ಥಿತಿಯಲ್ಲಿ ಈ 'ಸುವಾಸಿನಿ' ಕವನ ಒಡಮೂಡಿತು. ಹೊಸಗನ್ನಡ ಕಾವ್ಯಾರಾಮದಲ್ಲಿ ಸುರುವಿಗೆ ಕೇಳಿಬಂದ ಕೂಜನವಿದು. ಶುದ್ಧಾಂಗವಾಗಿ ಇದು ಸ್ವತಂತ್ರ ಭಾವಗೀತೆಯೇ ಸೈ. ಅದರ ನಾವೀನ್ಯಕ್ಕೆ, ಭಾವಸನ್ನಿಕರ್ಷತೆಗೆ ಅಡೆ-ತಡೆಯಾಗಬಹುದಾದ ಅಂಶವೆಂದರೆ - ಇದು ಕಂದಪದ್ಯದಲ್ಲಿರುವುದು. ಪೈ ಅವರ

ವಿದ್ಯಾಗುರುಗಳಾದ ಪಂಜೆಯವರು ಕಾವ್ಯಗುರುಗಳೂ ಹೌದು. ಅವರಿಗೆ ಪೈಗಳು ತಮ್ಮ ಕವನಗಳನ್ನು ತೋರಿಸುತ್ತಿದ್ದರು. (ಗಮನಿಸಿರಿ : ದ್ವಿತೀಯ ಪ್ರಾಸವನ್ನು ಬಿಟ್ಟು ಬರೆಯುವ ವಿಚಾರದಲ್ಲಿ ಪಂಜೆಯವರಿಗೆ ಕೇಳಿದುದನ್ನು) ಆದ್ದರಿಂದ ಪಂಜೆಯವರ ಕಣ್ಣಿಗೆ ಹಾಕಿಯೇ ಅವರ ಪ್ರೋತ್ಸಾಹದಿಂದಲೇ ಈ ಪದ್ಯವನ್ನು ಪೈಗಳು ಸ್ಪರ್ಧೆಗೆ ಪ್ರಕಟನೆಗೆ ಕಳಿಸಿರಬೇಕು. ಆದ್ದರಿಂದ ಅವರ ಈ ಮೊತ್ತ ಮೊದಲಿನ ಕವಿತೆಯನ್ನು ನೆನೆವಾಗ ಪಂಜೆಯವರನ್ನೂ ನೆನೆದಿರಬೇಕು.

'ಸುವಾಸಿನಿ'ಯನ್ನು ಬರೆಯುವುದಕ್ಕೆ ಮುಂಚೆ ೧೮೯೨-೯೩ರಿಂದಲೇ ಪೈ ಅವರು ಪದ್ಯರೂಪೀ ನಾಟಕಗಳನ್ನು, ಪದ್ಯಗಳನ್ನೂ ಗೀಚಿ ಹರಿದು ಹಾಕಿದ್ದರು. ಹರಿದು ಹಾಕುತ್ತಿದ್ದುದರ ಮುಖ್ಯ ಕಾರಣ ತಾಯಿಯ ಸಖತ್ ಪ್ರತಿಬಂಧ! ಕೊನೆಗೆ ಇದೊಂದು ಕವಿತೆ ಹರಿದು ತುಂಡಾಗದೇ, ಪೈ ಅವರ ಪ್ರಪ್ರಥಮ ಕವಿತೆ ಎಂಬ ಮನ್ನಣೆಗೆ ಪಾತ್ರವಾಗಿ, ಹೊಸಗನ್ನಡದ ಸುರುವಾತಿನ ಸ್ವತಂತ್ರ ಭಾವಗೀತೆಯೆಂಬ ಅಭಿದಾನವನ್ನು ಹೊತ್ತು ಸಲೆನಿಂತಿದೆ.

ಆಗ ಪೈ ಅವರಿಗೆ ಕೇವಲ ೧೬ ವರ್ಷ; ಗವರ್ನಮೆಂಟ್ ಶಾಲೆಯಲ್ಲಿ ಆನೆಯ ತರಗತಿಯ ವಿದ್ಯಾರ್ಥಿ. ಆ ಎಳೆಯ ವಯಸ್ಸಿನಲ್ಲಿಯೇ ಅದೆಂಥ ಕಾವ್ಯಾಂಶವನ್ನು ಇದರಲ್ಲಿ ಅರಳಿಸಿದ್ದಾರೆನ್ನುವುದನ್ನು ನೋಡೋಣ:

ಮೊದಲ ಪದ್ಯದಲ್ಲಿ, 'ಸುವಾಸಿನಿ' ಪತ್ರಿಕೆಯನ್ನು ಸಾಗರದ ಮೇಲೆ ಪ್ರಕಾಶವನ್ನು ಚೆಲ್ಲುವ ಧ್ರುವನಕ್ಷತ್ರಕ್ಕೆ ಹೋಲಿಸಿದ್ದಾರೆ. ನೌಕೆ ಇದ್ದವರು ಸಾಗರವನ್ನು ಹೇಗೂ ದಾಟಬಲ್ಲರು. ನೌಕಾಸನ್ನು ತರಲಿಲ್ಲದವರು? ಅಜ್ಞರಾದವರು? ಅವರಿಗೆ ಈ ಪತ್ರಿಕೆಯೇ ನೆರವಾಗಬಲ್ಲುದು. ಒಂದು ನಕ್ಷತ್ರ ಅದೆಷ್ಟು ಬೆಳಕನ್ನು ಚೆಲ್ಲೀತು? ಹಾಗೆಯೇ ಒಂದು ಸಣ್ಣ ಪತ್ರಿಕೆಯ ಸಹಾಯ. ಆದರೆ ಧ್ರುವ ತಾರಗೆಯಂತೆ ದೃಢವಾದುದು ಎಂಬ ಉಪಮೆ ಈ ಮೊದಲ ಪದ್ಯದಲ್ಲಿದೆ.

ಎರಡನೆಯ ಪದ್ಯದಲ್ಲಿ ಪತ್ರಿಕೆಯನ್ನು ಭಾಸ್ಕರನ ಕಿರಣಗಳಿಂದ ಅರಳುವ ಕಮಲಕ್ಕೆ ಹೋಲಿಸಿದ್ದಾಗಿದೆ. ಪತ್ರಿಕೆಯಲ್ಲಿರುವ ಜ್ಞಾನ-ವಿಜ್ಞಾನದ ವಿಚಾರಗಳೆಂದರೆ, ಕಮಲವು ಸ್ವೀಕರಿಸಿರುವ ಸೂರ್ಯಕಿರಣಗಳು. ಅಂತೂ ಪತ್ರಿಕೆಯು ಜ್ಞಾನಬೋಧಕ ವಿಚಾರಗಳನ್ನು ಒಳಗೊಂಡಿರಬೇಕೆಂಬುದು ಕವಿಯ ಆಶಯ.

ಮೂರನೆಯದರ ಭಾವವು ಆಗಿನ ಕಾಲಕ್ಕೆ ಅತಿ ವಿನೂತನವೆನಿಸುವಂತಹದು. ಎಳೆಯ ಮಕ್ಕಳಿಗೆ ಶೋಭೆ ಎಲ್ಲಿಂದ ಬರುತ್ತದೆ? ತಾಯಂದಿರ ಕಳೆಯನ್ನು ಹೀರಿಕೊಂಡೇ ಅಲ್ಲವೆ. ತಾಯಿಯಾದವಳು ಮಮತೆಯಿಂದ, ಸದ್ದಿಲ್ಲದಂತೆ ಅದನ್ನು ಮಕ್ಕಳಿಗೆ ನೀಡುತ್ತಾಳೆ. ಹಾಗೆಯೇ ಸುವಾಸಿನಿ. ಅದರಲ್ಲಿಯ ಸುವಾಸಿತ, ಸುಶೋಭಿತ ಸತ್ವವನ್ನು ಎಳೆಯ ಮಕ್ಕಳ ತೆರದಿ, ವಾಚಕರು ಹೀರಿಕೊಳ್ಳುವಂತಾಗಬೇಕು. ತಿಳುವಳಿಕೆಯ ಕಳೆಯಿಂದ ಅವರು ಬೆಳಗಬೇಕು. ಮುಂದಿನ ಶಬ್ದಗುಚ್ಛವಾದ 'ಕಲಿಪೊಲು ನಿನ್ನ(ನ್ನಿಂ?)ದನಿಶಂ ನೆಲದೆ (ಸೆ?) ಸುವಾಸಿನಿ' ಎಂಬುದರ ಭಾವ ಸ್ಪಷ್ಟವಾಗಿಲ್ಲ. ಇಲ್ಲಿ ಅಚ್ಚಿನ ದೋಷವಾದರೂ ಇರಬಹುದು. ಮೂಲದ ರಚನೆಯೇ ಹಾಗೆ

ಕ್ಲಿಷ್ಟವಿದ್ದಿರಬಹುದು. ಆದರಂತೆ ಇಡೀ ಪದ್ಯದಲ್ಲಿ ಅನಗತ್ಯ ಶಬ್ದಗಳು ಹಲವಾರು ಇವೆ. ಕವಿತೆಯೊಂದನ್ನು 'ಹೆಣೆಯುವ' ಎತ್ತುಗಡೆಯನ್ನು ನಾವು ಅದರಲ್ಲಿ ಕಂಡುಕೊಳ್ಳಬಹುದು. ಮತ್ತಲ್ಲದೆ ದ್ವಿತೀಯ ಪ್ರಾಸವು ಇದ್ದರೂ ಕಂದದ ೬ನೆಯ ಮಾತ್ರಾಗಣದಲ್ಲಿ ಜಗಣ (ಲಘು-ಗುರು-ಲಘು) ಬರಬಾರದೆನ್ನುವ ನಿಯಮವನ್ನು ಪೈ ಅವರು ಎರಡು ಪದ್ಯಗಳಲ್ಲಿ ಗಮನಿಸಿಲ್ಲ. ಏನಿದ್ದರೂ ಹೊಸ ಕವಿತೆ ರೂಢಗೊಳ್ಳದೇ ಇದ್ದಾಗ, ಕವಿ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ರಚಿಸಿದ ಈ ಕವಿತೆ ಮೇಲ್ಮಟ್ಟದ್ದೆ ಆಗಿದೆ. ಈ ಎಳೆಯ ಹೀಚಿನಲ್ಲಿಯೇ ಮುಂದಿನ ಫಲದ ರುಚಿಯನ್ನು ಕಾಣಬಹುದಾಗಿದೆ.



# ೯ ಪತ್ರಗಳು ಚಿತ್ರಿಸಿದ ಗೋವಿಂದ ಪೈ

## ಪತ್ರ ಸಾಹಿತ್ಯ

ಸಾಹಿತಿಗಳ ಅಭಿವ್ಯಕ್ತಿಗೆ ಐದು ಮುಖ್ಯ ಸಾಧನಗಳು: ಪುಸ್ತಕ - ಪತ್ರಿಕಾ ಲೇಖನ, ಉಪನ್ಯಾಸ, ಸಂವಾದ, ದಿನಚರಿ ಹಾಗೂ ಪತ್ರೋತ್ತರ. ಇವುಗಳಲ್ಲಿ ಕೊನೆಯ ಮೂರರ ವಿಶಿಷ್ಟತೆ ಹಾಗೂ ಪ್ರಯೋಜನದ ಬಗ್ಗೆ ನಮ್ಮಲ್ಲಿ ಅನೇಕರಿಗೆ ಸರಿಯಾದ ಕಲ್ಪನೆ ಇಲ್ಲ. ಆಪ್ತವೂ ಅಪ್ರಯತ್ನಿತವೂ ಆದ ಅಭಿವ್ಯಕ್ತಿಗಳಿವು. ಮೊದಲಿನ ಎರಡಕ್ಕಾದರೆ 'ಸಾರ್ವಜನಿಕರು ಗಮನಿಸುತ್ತಾರೆ' ಎಂಬ ಪ್ರಜ್ಞೆ ಸದಾ ಮನದಲ್ಲಿರುತ್ತದೆ. ಸಂವಾದ ಹಾಗೂ ಪತ್ರೋತ್ತರದ ಕೇಳುಗ| ಓದುಗರು ಕೆಲವೇ ಜನ; ಅಲ್ಲದೆ ಹತ್ತಿರದವರು - ಆದ್ದರಿಂದ ತನಗೆ ಅನಿಸಿದ್ದನ್ನು ಸಾಕಷ್ಟು ಮುಕ್ತ ಮನಸ್ಸಿನಿಂದ ಸಾಹಿತಿಯಾದವನು ವ್ಯಕ್ತಪಡಿಸಬಲ್ಲನು. ಅಥವಾ ಹೀಗೆ ವ್ಯಕ್ತಪಡಿಸಬೇಕೆನ್ನುವ ತುಡಿತವಿದ್ದಾಗ ಸಾಹಿತಿಯು ಇಂಥ ಮಾಧ್ಯಮವನ್ನು ತಾನಾಗಿ ಆಯ್ದುಕೊಳ್ಳುವನು. ಅಂತೂ ಇಲ್ಲಿ ಕೃತ್ರಿಮತೆಯ ಅಂಶವಿರುವುದಿಲ್ಲ. ಇನ್ನೊಬ್ಬರನ್ನು ಮೆಚ್ಚಿಸುವ ಮನೋಧರ್ಮವೂ ಕಂಡುಬಾರದು.

ಸಾಹಿತಿಯಾದವನಿಗೆ ಅನೇಕ ಸಣ್ಣ ಪುಟ್ಟ ಅಂಶಗಳು ಆಗೀಗ ಸ್ಫುರಿಸುತ್ತಲೇ ಇರುತ್ತವೆ. ಅವು ಲೇಖನವೊಂದರಲ್ಲಿ ಹಿಡಿದಿಡುವಷ್ಟು ಪೂರ್ಣರೂಪದವಲ್ಲ. ಆದರೆ ಪ್ರತಿಭಾವಂತರಲ್ಲಿ ಆ ಅಂಶಗಳು ಅನುಪಮವಾಗಿರುವಾಗ, ಅವನ್ನು ಆ ಸಮಯದಲ್ಲಿ ಹಿಡಿದಿಡದಿದ್ದರೆ ಅವಕ್ಕೆ ಗರ್ಭಸ್ರಾವೇ ಗತಿ. ಆದ್ದರಿಂದ ಅವನ್ನು ಹಿಡಿದಿಡಲು, ದಿನಚರಿ ಇಲ್ಲವೆ ಪತ್ರಗಳೇ ಅನುಕೂಲವಾದ ಸಾಧನಗಳು. ಇಂಥ ಆಪ್ತ ಬರಹದಲ್ಲಿ, ಈಗಾಗಲೇ ಪ್ರಕಟಿತವಾದ ಲೇಖನದಲ್ಲಿಯ ಸಂದಿಗ್ಧ ವಿಚಾರಗಳಿಗೆ ವಿವರಣೆ ದೊರೆಯಬಹುದು. ಆ ಸಾಹಿತಿಯ ಜೀವನ ದೃಷ್ಟಿ ಹಾಗೂ ಕೃತಿರಚನೆಯ ಹಿನ್ನೆಲೆ ಪ್ರೇರಣೆಗಳು ಹೆಚ್ಚು ವಿಶ್ವಸನೀಯವಾಗಿ ತಿಳಿದು ಬರುವುವು. ಅದರಂತೆ ಅವನ ಬದುಕಿನ ಓರೆಕೋರೆಗಳೂ ತಿಳಿದು ಬಂದಾವು (ಇವು ಕೂಡ, ಅವನ ಕೃತಿರಚನೆಯ ವ್ಯಾಸಂಗಕ್ಕೆ ಸಹಾಯಕಗಳೇ!)

---

ಈ ಲೇಖನದಲ್ಲಿ, ರಾಜರತ್ನಂ ಸಂಪಾದಿಸಿದ ಪತ್ರಗಳನ್ನೂ ಬಳಸಿಕೊಂಡು ಅಲ್ಲಲ್ಲಿ ಉಲ್ಲೇಖಿಸಲಾಗಿದೆ.

ಸಾಹಿತಿಗಳು ಬಹುಮಟ್ಟಿಗೆ ದ್ವೈತಿಗಳು! ಎಂದರೆ ತಾವು ಹೊರಗೆ ತೋರ್ಪಡಿಸಿಕೊಂಡ ರೀತಿಯಲ್ಲಿಯೇ ಅವರ ವಿಚಾರ ಸರಣಿಯು ಇರಲಿಕ್ಕಿಲ್ಲ. (ಈ 'ಒಳಗೊಂದು ಹೊರಗೊಂದು' ರೀತಿಯು ಕೆಲವೊಮ್ಮೆ ಅನಿವಾರ್ಯವೂ ಇದ್ದೀತು.) ಆಗ ಅವನ ನಿಜಸ್ವರೂಪವನ್ನು ತಿಳಿಯಲು ಪತ್ರ - ದಿನಚರಿಗಳೇ ಹೆಚ್ಚು ಪ್ರಾಮಾಣ್ಯವೆನಿಸುತ್ತದೆ. ಪತ್ರೋತ್ತರದ ಇನ್ನೊಂದು ಪ್ರಯೋಜನವೆಂದರೆ, ಸಂಬಂಧಪಟ್ಟ ಸಾಹಿತಿಯು ಯಾರಿಗೆ ಪತ್ರ ಬರೆದಿರುತ್ತಾನೆಯೋ ಆ ವ್ಯಕ್ತಿಯ ಬಗ್ಗೆಯೂ ಹೊಸ ಮಾತು ತಿಳಿದು ಬರುತ್ತದೆ. ಹಾಗೇನೆ ಪತ್ರೋತ್ತರ ನಡೆಸಿದ ಆ ಇಬ್ಬರನ್ನುಳಿದು, ಪತ್ರಗಳಲ್ಲಿ ಪ್ರಸ್ತಾಪಿತಗೊಂಡಿರಬಹುದಾದ ತೃತೀಯರನ್ನು ಅರಿಯುವುದಕ್ಕೂ ಪತ್ರಗಳು ನೆರವಾಗಬಲ್ಲವು.

ಆದರೆ ಎಲ್ಲ ಸಾಹಿತಿಗಳ ಪತ್ರಗಳು ಸಾಹಿತ್ಯವಾಗುವುದಿಲ್ಲ! ಇದರರ್ಥ ಆ ಪತ್ರಗಳ ವಿಷಯ ಸಾಮಾನ್ಯವಾಗಿರಬಹುದೆಂಬ ಕಾರಣದಿಂದಲ್ಲ. ಅವರಲ್ಲಿಯ ದ್ವೈತಭಾವದಿಂದಾಗಿ, ಪತ್ರಗಳಲ್ಲಿಯೂ ಸಹ ಅವರ ವಿಚಾರಸರಣಿ ನೈಜವಾಗಿ ಹೊರಡಲಿಕ್ಕಿಲ್ಲ. ಬರವಣಿಗೆಯು ಅವರ ರಕ್ತಗುಣವೇ ಆದ್ದರಿಂದ ಸಲೀಸಾಗಿ, ಪುಂಖಾನುಪುಂಖವಾಗಿ ವಿವರಿಸುತ್ತ ಹೋಗಬಲ್ಲರು. ಅವರು ಪತ್ರೋತ್ತರವನ್ನು ಕೈಕೊಳ್ಳುವುದೆಂದರೆ ಮೀನು ನೀರಿನಲ್ಲಿ ಈಜಿದಂತೆ. (ಪತ್ರವ್ಯವಹಾರದ ನಿಯಮಿತತನದಲ್ಲಿ ಅವರು ನಿರ್ಲಕ್ಷ್ಯವನ್ನು ತೋರುವ ಸಂದರ್ಭಗಳೂ ಇರುತ್ತವೆ. ಅದು ಬೇರೆ ವಿಷಯ.) ಆದರೆ ಪತ್ರ ಪ್ರಕಾರದಲ್ಲಿಯೂ, ನಿಜಸಂಗತಿಯನ್ನು ಮರೆಮಾಚುವ ಇಲ್ಲವೆ ತೇಲಿಸಿ ಹೇಳುವ ಬಗೆಯ ಕಂಡು ಬಂದೀತು. ತನ್ನ ನಿಲುಮೆಯನ್ನು ಸಮರ್ಥಿಸಿಕೊಳ್ಳುವ ಧಾಟಿಯೂ ಕಾಣಿಸೀತು. ಆದ್ದರಿಂದ ಬರೆಯುವ ವ್ಯಕ್ತಿಯಲ್ಲಿ ಪ್ರಾಮಾಣಿಕತೆ. ಅದ್ವೈತಭಾವ ಇದ್ದಷ್ಟೂ ಪತ್ರಗಳ ಮೌಲಿಕತೆ ಹೆಚ್ಚುತ್ತದೆ.

ಗೋವಿಂದ ಪೈಗಳ ಪತ್ರಗಳಲ್ಲಿ ಮೇಲ್ಕಾಣಿಸಿದ ಪತ್ರ ಸಾಹಿತ್ಯದ ವಿಶೇಷತೆ ಹಾಗೂ ಪ್ರಯೋಜನಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಅವರ ಪ್ರಾಮಾಣಿಕತೆಯು ನಿರ್ವಿವಾದದ್ದು; ಆದ್ದರಿಂದ ಅವರ ಒಂದು 'ಸಾದಾ' ಎನಿಸುವ ಪತ್ರವೂ ಗಣನೀಯವಾಗುತ್ತದೆ - ಅವರ ಸೀದಾತನದಿಂದಾಗಿ. ಇತ್ತ ಅವರ ಪ್ರಕಟಿತ ಲೇಖನಗಳಿಗೆ ಪೂರಕವಾಗಿ ಬಿಡಿ ಅಂಶಗಳು ದೊರೆಯುತ್ತವೆ. ಬೇರೆ ಕೆಲವು ವ್ಯಕ್ತಿಗಳ ಬಗ್ಗೆ, ಇತರ ಸಾಹಿತಿಗಳೊಡನೆ ಪೈಗಳ ಸಂಬಂಧದ ಬಗ್ಗೆ ಹೆಚ್ಚಿನ ಮಾಹಿತಿ ತಿಳಿದು ಬರುತ್ತದೆ. ಅವರ ಬದುಕು, ಬರಹ, ಸ್ವಭಾವಗಳಿಗೆ ಸಂಬಂಧಿಸಿದ ಅನೇಕ ವಿಷಯಗಳು ಬೆಳಕಿಗೆ ಬಂದಿದ್ದರೂ, ಬೇರೆ ಹಲವು ಅಂಶಗಳು ಮೊದಲ ಬಾರಿಗೆ ಪತ್ರ ಮೂಲಕ ಹೊರಪಟ್ಟಿವೆ. ಮತ್ತೆ ಕೆಲವು ಪತ್ರಾಂಶಗಳು ಈಗಾಗಲೇ ತಿಳಿದು ಬಂದವುಗಳಿಗೆ ಹಿನ್ನೆಲೆಯನ್ನು ಒದಗಿಸುವಂತಿದೆ. ಮತ್ತೂ ಹಲವು, ಗೊತ್ತಿರುವ ಅಂಶಗಳಿಗೆ ಒತ್ತುಕೊಡುವಂತಹವಿವೆ.

## ಪತ್ರಗಳ ಬಾಹ್ಯಸ್ವರೂಪ

ಇಲ್ಲಿ ಸಂಕಲನಗೊಂಡ ಪತ್ರಗಳಲ್ಲಿ, ಕಾರ್ಡಿನಲ್ಲಿ ಬರೆದವುಗಳೇ ಹೆಚ್ಚು. ಅಲ್ಲದೆ, ೫ - ೬ ನ್ನು ಬಿಟ್ಟರೆ, ಪತ್ರಗಳೆಲ್ಲವೂ ಉತ್ತರರೂಪವಾಗಿ ಇವೆ. ಮೊದಲಿಗೆ ಪತ್ರ ಬರೆದವರು ಕೇಳಿದ ಪ್ರಶ್ನೆ - ವಿಚಾರಗಳಿಗೂ, ಕಳಿಸಿದ ಪುಸ್ತಕದ ಬಗ್ಗೆ ಬರೆಯಬೇಕಾದ ಅಭಿಪ್ರಾಯಕ್ಕೂ ಹಾಗೂ ಈ ಶುಭಾಶಂಸನೆಗೂ ಅಷ್ಟು ಮಜಕೂರು ಸಾಕಾಗುತ್ತಿತ್ತು. ಕಾಡಿನಲ್ಲಿ ಜಾಗ ಕಡಮೆ ಎಂಬ ಕಾರಣದಿಂದ ಅದರಲ್ಲಿ ಒತ್ತಾಗಿ ಸಾಲನ್ನು ಬರೆಯಲು ಪ್ರಯತ್ನವನ್ನು ಅವರು ಯಾವಾಗಲೂ ಮಾಡಿಲ್ಲ. ಎಂದರೆ ಅವರ ಅಕ್ಷರಗಳ ಗಾತ್ರ ಚಿಕ್ಕದಾಗಿಲ್ಲ. ಕಾರ್ಡಿನ ಅನಂತರ ಆಯ್ಕೆ ಅಂತರ್ದೇಶೀಯದು. ಪತ್ರದ ಜೊತೆಗೆ ಬೇರೆ ಕಾಗದವನ್ನು ಅಡಕಗೊಳಿಸುವುದಿದ್ದರೆ ಮಾತ್ರ ಕವರುಗಳ ಬಳಕೆ. ಅಂಥವೂ ಎಲ್ಲೋ ಐದಾರು ಮಾತ್ರ. ತಾತ್ಪರ್ಯ - ಅವರ ಪತ್ರಗಳಲ್ಲಿ ಎಷ್ಟು ಅಗತ್ಯವೊ ಅಷ್ಟೊ ವಿಷಯ ಇರ್ತಿತ್ತು.

ಯಾವದೇ ಪತ್ರದ ಆರಂಭದಲ್ಲಿ ಮಂಜೇಶ್ವರದ ಹೆಸರು ಇರಬೇಕು. ಮಂಜೇಶ್ವರದಲ್ಲಿ ಇರದಿದ್ದಾಗ ಉತ್ತರ ಹಾಕುವುದು ತಡವಾಗುತ್ತಿತ್ತು. ಹಾಗೆಂದು ಬೇರೆ ಊರಿನಿಂದ ಪತ್ರ ಬರೆದದ್ದೇ ಇಲ್ಲ. ಅಂತೂ ಮಂಜೇಶ್ವರದ ಅಂಚೆ ಪೆಟ್ಟಿಗೆಯಲ್ಲಿ - ಅವರೇ ಸ್ವತಹ ಹಾಕಿದ ಮೇಲೆಯೇ ಅವುಗಳ take off!

ಎಲ್ಲ ಕನ್ನಡ ಪತ್ರಗಳು 'ಗೋವಿಂದ ಪೈ ಮಾಡುವ ನಮಸ್ಕಾರ' ದಿಂದ ಆರಂಭವಾಗುತ್ತವೆ. ಪತ್ರ ಬರೆದ ಕೆಲವರು ವಯಸ್ಸಿನಲ್ಲಿ ತೀರ ಚಿಕ್ಕವರು. ಆದರೂ ಈ 'ನಮಸ್ಕಾರ'. ಅದರೊಂದಿಗೆ ಬಹುವಚನದ ಸಂಬೋಧನೆ. ಆದರೆ ಪೊಳಲಿ ಬಾಲಕೃಷ್ಣ ಶೆಟ್ಟಿಯವರಿಗೆ ಬರೆದದ್ದರಲ್ಲಿ 'ಆಶೀರ್ವಾದ'ವಿದೆ. ಈ ಆಶೀರ್ವಾದವನ್ನು ಪಡೆದ ಇನ್ನೊಬ್ಬರು ಆರ್. ಎಸ್. ಮೂರ್ತಿಯವರು. ಅದೂ ಒಮ್ಮೆಯೇ (ದಿ. ೬-೨-೧೯೫೪ರ ಪತ್ರ). ಆದರೆ ಅದರ ಒಳಗಡೆ ಒಮ್ಮೆ ಏಕವಚನದ, ಇನ್ನೊಮ್ಮೆ ಬಹುವಚನದ ಸಂಬೋಧನೆಯನ್ನು ನೋಡಿದರೆ, ಅವರಿಗೆ ಸಂದಿಗ್ಧ - ಸಂಕೋಚ ಉಂಟಾಗಿರಬೇಕು. ಕೊನೆಗೆ, 'ನಮಸ್ಕಾರ'ಕ್ಕೇ ಜಯವಾಗಿ, ಆ ಮುಂದೆ ಎಲ್ಲರಿಗೂ - ಮೂರ್ತಿಯವರಿಗೂ ಸೇರಿದಂತೆ - ಬಹುವಚನದ ಸಂಬೋಧನೆ ದೊರೆತಿದೆ. ಅವರ ದಾಕ್ಷಿಣ್ಯಪರತೆಗೆ, ಬಹು ಸಂಖ್ಯೆಯ ಪತ್ರಗಳಲ್ಲಿ ಕಂಡುಬರುವ 'ದಯಮಾಡಿ ಕ್ಷಮಿಸುವುದು' 'ಬಹಳ ಉಪಕಾರ' ಎಂಬುದನ್ನೂ ಗಣನೆಗೆ ತಂದುಕೊಳ್ಳಬಹುದು.

ಇಲ್ಲಿ ದಾಖಲಿಸಲಾದ ಮೊದಲ ಪತ್ರದ ವರ್ಷ ೧೯೩೦. ಆವಾಗ ಅವರಿಗೆ ೫೦ ವರ್ಷ ಸಮೀಪಿಸಲಿತ್ತು. ಇಳಿಮುಖದ ಆಯುರ್ಮಾನ ಆ ಪೂರ್ವದ ಎಂದರೆ ಅವರ ಮಧ್ಯ ಹಾಗೂ ತರುಣ ವಯಸ್ಸಿನ ಕಾಲಕ್ಕೆ, ಅವರ ಬೌದ್ಧಿಕ ಚಿಂತನೆಗಳೂ, ಆಸೆ ಆಕಾಂಕ್ಷೆಗಳೂ, ಲೇಖನ ಕಾರ್ಯದ ಹಿನ್ನೆಲೆ - ಹೊಳಹುಗಳೂ ದೇದೀಪ್ಯಮಾನವಾಗಿ ಇದ್ದಿರಲು ಸಾಕು. ಅವುಗಳ ಅಭಿವ್ಯಕ್ತಿಗೆ ಸುರುವಿಗೆ ಹೇಳಿದಂತೆ, ದಿನಚರಿ, ಪತ್ರೋತ್ತರಗಳೇ. ಆದರೆ ಅವರು ದಿನಚರಿಯನ್ನು

ಬರೀತಿದ್ದ ಹಾಗೆ ತೋರಲಿಲ್ಲ; ಪತ್ರಗಳೇ ಅವುಗಳಿಗೆ ವಾಹಕವಾಗಿದ್ದಿರಬೇಕು. ದುರ್ದೈವಕ್ಕೆ ಅಂಥ ಪತ್ರಗಳೊಂದೂ ದೊರೆತಿಲ್ಲ*

ದೊರೆತ ಪತ್ರಗಳ ಸಂಖ್ಯೆ ೧೭೫. ಅವು ಉತ್ತರ ರೂಪದಲ್ಲಿದ್ದುವುಗಳೇ - ಎಂದಿದ್ದರೂ ಅವರ ತರುಣ ಮಧ್ಯ ವಯಸ್ಸಿನಲ್ಲಿ ಇದಕ್ಕೂ ಎಷ್ಟೋ ಮಿಗಿಲಾದ ದೊಡ್ಡ ಸಂಖ್ಯೆಯಲ್ಲಿ - ಅನೇಕ ಸಂದರ್ಭಗಳಲ್ಲಿ ತಾವಾಗಿ - ಬರೆಯುತ್ತಿದ್ದರು ಎಂಬುದರಲ್ಲಿ ಸಂದೇಹವಿಲ್ಲ. ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಸಂಬಂಧಿಸಿ ರಾಜರತ್ನಂ ಅವರಿಗೆ ಬರೆದ (ದಿ. ೨೦- ೧-೧೯೫೭) ಪತ್ರದಲ್ಲಿಯ ಈ ಮಾತನ್ನು ಗಮನಿಸತಕ್ಕುದು.

> ಅವರಿಗೂ ನನಗೂ ಮುಖಾಮುಖಿಯಾದ ಪರಿಚಯವಾದುದು ೧೯೨೮ರ ಸೆಪ್ಟಂಬರದಲ್ಲಿ.... ಆದರೆ ಅದಕ್ಕೆ ಹಿಂದಿನಿಂದಲೇ ನಮ್ಮೊಳಗೆ ಪತ್ರ ವ್ಯವಹಾರವಿದ್ದಿತು. ಅಲ್ಲಿಂದ ಮೇಲೆ ಈವರೆಗೆ ಮತ್ತೆ ಒಂದೆರಡು ಸಲ ಕಂಡಿರುತ್ತೇವೆ. ಅಲ್ಲಿಂದ ಇಲ್ಲಿಗೂ ನಮ್ಮೊಳಗಣ ಮೈತ್ರಿ, ಕಂದು - ಕುಂದಿಲ್ಲದೇ ಒಂದೇ ಪ್ರಕಾರ ಬೆಳೆಯುತ್ತ ಬಂದಿದೆ. ಈ ಮಧ್ಯೆ ನಾನು ಎಷ್ಟೋ ಸಲ ಪತ್ರಮುಖೇನ ಅವರನ್ನು ಕಾಡಿರುವೆನಾದರೂ ಅವರು ಅದೆಲ್ಲವನ್ನು ತಮಗೆ ಸಹಜವಾದ ಔದಾರ್ಯದಿಂದ ತಾಳಿಕೊಂಡು ನಾನು ವಾಂಛಿಸಿದ ಆಯಾ ನೆರವನ್ನು ನನಗೆ ಅಕ್ಕರೆಯಿಂದ ನೀಡಿರುತ್ತಾರೆ.

ಇಲ್ಲಿಯ ಪತ್ರಗಳು ಹೆಚ್ಚಾಗಿ ಉತ್ತರ ರೂಪದವಷ್ಟೆ. ಕನ್ನಡದಲ್ಲಿ ಬಂದ ಪತ್ರವಿದ್ದರೆ ಕನ್ನಡದಲ್ಲೇ ಉತ್ತರ. ಇಂಗ್ಲಿಶಿನದಿದ್ದರೆ ಆ ಭಾಷೆಯಲ್ಲಿ. ಆದರೆ ಪೈಗಳು ತಾವಾಗಿ ಬರೆಯುತ್ತಿರುವಾಗ ಇಂಗ್ಲಿಶ್‌ನಲ್ಲಿ ಬರೆಯುವತ್ತ ಮನಸ್ಸು ಮಾಡಿದ್ದಾರೆ. ವಿದ್ಯಾವಂತರಿಗೆ ಅತ್ಯಂತ ಸಹಜವಾಗಿ ಮೂಡಿಬರುವ ಭಾಷಾ ಮಾಧ್ಯಮವೆಂದರೆ, ಇಂಗ್ಲಿಶೇ - ಮಾತಿನಲ್ಲಿ; ಅದರಂತೆ ಪತ್ರದಲ್ಲಿ. ಅನೇಕ ಕನ್ನಡ ಲೇಖಕೋದ್ದಾಮರಿಗೂ ಇದು ಅನ್ವಯಿಸುವುದು. ಅದೇಕೆ, ಇತರ ವಿದ್ಯಾವಂತರಿಗಿಂತ ಒಂದು ತೂಕ ಹೆಚ್ಚೇ! ಯಾಕೆ ಹೀಗೆ? ಇದು ಕನ್ನಡ ಪ್ರೇಮ - ಅಭಿಮಾನಗಳ ಅಭಾವದ ಲಕ್ಷಣವೇನಲ್ಲ. ಅತ್ತ ಕಡೆ ಅಲಕ್ಷ್ಯವೂ ಅಲ್ಲ. ಅವರ ನಿತ್ಯದ ಹೊರೆಯಲ್ಲಿ, ಪುಸ್ತಕ - ಪತ್ರಿಕಾ ವಾಚನದಲ್ಲಿ, ಅಥವಾ ಬೇರೆಯವರೊಡನೆಯ ವ್ಯವಹಾರದಲ್ಲಿ ಇಂಗ್ಲಿಶ್ ಭಾಷೆಯೇ ರಾರಾಜಿಸುವುದರಿಂದ, ಪತ್ರದಂತಹ ಆಪ್ತ ಅಭಿವ್ಯಕ್ತಿಯಲ್ಲಿ ಅದೇ ಧಾವಿಸುತ್ತದೆ.

---

* ಅವರ ಪತ್ರಗಳಲ್ಲಿ ೧೯೩೦-೧೯೪೫ರ ಅವಧಿಯಲ್ಲಿ ದೊರೆತುವಾದರೂ ಕೇವಲ ೯! (೨ ರಾಜರತ್ನಂರವು). ಎಂದರೆ ಹೆಚ್ಚಿನ ಪತ್ರಗಳು, ಅವರು ೬೦ನ್ನು ದಾಟಿದ ಅನಂತರದವೇ ಆಗಿವೆ. ಆ ಮುನ್ನಿನ ೪೦ ವರ್ಷಗಳಲ್ಲಿ ಬರೆದ ಪತ್ರಗಳು ಸಿಕ್ಕದೆ ಇರುವುದರಿಂದ ಈ ಪತ್ರ ಸಂಕಲನಕ್ಕೆ ಅದೆಂಥ ಕೊರತೆಯೆಂಬುದನ್ನು ಊಹಿಸಬಹುದು.

ಪೈಯವರು ಒಮ್ಮೆ ಮಾತ್ರ ಇಂಗ್ಲಿಶ್‌ನಲ್ಲಿದ್ದ ಒಂದು ಪತ್ರಕ್ಕೆ ಕನ್ನಡದಲ್ಲಿ ಉತ್ತರಿಸಿದ್ದಾರೆ. ಅದಕ್ಕೆ ಕಾರಣ ಕೊಟ್ಟಿದ್ದಾರೆ;

> ನಿಮ್ಮ ನಿನ್ನೆಯ ತಾರೀಕಿನ ಆಂಗ್ಲ ಪತ್ರ ಇಲ್ಲಿಗೆ ಇವತ್ತು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನಿಮ್ಮ ಪತ್ರವೆಂದರೆ ಹತ್ತು ಮಂದಿಗೆ ತಿಳಿದು ಕೊಳ್ಳಬೇಕೆಂಬ ಕುತೂಹಲದ ವಿಷಯವನ್ನು* ಕುರಿತಿದೆ ಎಂಬುದರಿಂದ ನಾನದಕ್ಕೆ ಕನ್ನಡದಲ್ಲಿ ಪ್ರತ್ಯುತ್ತರಿಸುವುದೇ ಲೇಸೆಂದು ನಿಶ್ಚಯಿಸಿ ಹಾಗೆ ಮಾಡಿರುತ್ತೇನೆ. ನಿರುಪಾಯವಾಗಿ ಹಾಗೆ ಮಾಡಬೇಕಾಗಿರುವ ಬಗ್ಗೆ ಕ್ಷಮಿಸುವುದು. (ದಿ. ೨೯ - ೩ - ೧೯೬೨ರ ಪತ್ರ)

ಸಾಮಾನ್ಯವಾಗಿ ಪತ್ರಗಳು ಖಾಸಗಿ ಇದ್ದು, ಅದನ್ನು ಪಡೆದವರಷ್ಟೇ ಓದುವರೆಂಬ ಭಾವನೆ ಇರುವುದರಿಂದ, ನಾವು ಎಷ್ಟೋ ಬಾರಿ, ಸುಸಂಬದ್ಧವಾಗಿ, ಸ್ಪಷ್ಟವಾಗಿ - ಒಂದು ಪ್ರಬಂಧದಲ್ಲಿಯಂತೆ - ಬರೆಯುವುದಿಲ್ಲ. ಪೈಗಳ ಪತ್ರಗಳಲ್ಲಿ ಈ ಬಗೆಯ ಅಸ್ಪಷ್ಟತೆ ಒಟ್ಟಿನಲ್ಲಿ ತೋರಿಬಂದುದಿಲ್ಲ. ತಾವು ಯಾಕೆ ಆ ಪತ್ರ ಬರೆಯುತ್ತಿದ್ದೇನೆನ್ನುವುದರ ಹಿನ್ನೆಲೆಯನ್ನು ಕೊಟ್ಟೇ ಅವರು ಮುಂದೆ ಸಾಗುತ್ತಾರೆ. ಆದ್ದರಿಂದ ಪ್ರತಿಯೊಂದು ಪತ್ರವೂ ತನ್ನಷ್ಟಕ್ಕೆ ಪೂರ್ಣವಿರುತ್ತದೆ. ಸಂದರ್ಭಾದಿ ಹೇಳಬೇಕಾದ ಅಗತ್ಯ ಅಷ್ಟಾಗಿ ಇಲ್ಲ. ಆದರೆ ಸಂಶೋಧನಾ ವಿಚಾರಗಳಿರುವ ಪತ್ರೋತ್ತರದಲ್ಲಿ ಮಾತ್ರ ಅದರ ಹಿಂದಿನ ಪತ್ರ ವಿವರ ತಿಳಿದಿದ್ದರೆ ನೆಟ್ಟಗಿತ್ತು ಎನಿಸುವುದು (ಪತ್ರ. ನಂ. ೮ ರಿಂದ ೧೧ರವರೆಗಿನವು.)

ಇನ್ನೀಗ ಇಲ್ಲಿಯ ಪತ್ರಾಂತರ್ಗತವಾದ ಕೆಲವು ವಿಷಯಗಳನ್ನು ಗಮನಿಸೋಣ.

## ಶುಭ ಹಾರೈಕೆ

ಬಹ್ವಂಶದ ಪತ್ರಗಳು ಶುಭಾಶಂಸನಕ್ಕಾಗೇ ಬರೆದವುಗಳು - ಮೊದಲ ಹಾಗೂ ಕೊನೆಯ ಪತ್ರಗಳೂ ಸೇರಿದಂತೆ. ಈ ಹಾರೈಕೆಯ ಒಂದು ನಿಮಿತ್ತವೆಂದರೆ ಯಾವುದೊಂದು ಸಮಾರಂಭದ ಕರೆಯೋಲೆ. ಅದಕ್ಕೆ ಬರೆದ ಉತ್ತರ ರೂಪೀ ಪತ್ರಗಳನ್ನು ಈಗ ಓದಿದೆವೆಂದರೆ ಅದೊಂದು ಮಾಮೂಲಿಯ ಔಪಚಾರಿಕವಾದ ಒಕ್ಕಣಿಕೆ ಎಂದು ಕಂಡೀತು. ಆದರೆ ಪೈಯವರ ಸ್ವಭಾವವನ್ನು ಬಲ್ಲ ನಮಗೆ ಅವುಗಳಲ್ಲಿ ಹೆಚ್ಚಿನವು ಹೃತ್ಪೂರ್ವಕವಾದುವೆಂದೇ ಭಾಸವಾಗುತ್ತದೆ. ಕೆಲವು ಕಡೆಗಳಲ್ಲಿ ಮಾತ್ರ ಔಪಚಾರಿಕತೆ ಸ್ಪಷ್ಟವಾಗಿ ಕಂಡು ಬಂದೀತು! ಅಂಥದೊಂದು ಸಂದರ್ಭ ಹೀಗಿದೆ:

ಬಹ್ಮಾವರದ ಕರ್ನಾಟಕ ಸಂಘದವರು ಮಾಸ್ತಿಯವರನ್ನು ಸನ್ಮಾನಿಸುವ ಕಾರ್ಯಕ್ರಮವನ್ನಿಟ್ಟುಕೊಂಡಿದ್ದರು. ಆ ಕಾರ್ಯಕ್ರಮದ ದಿನವೇ ಪೈ ಅವರಿಗೆ ಆ ಪತ್ರ ತಲುಪಿದ್ದಿತು. ಇವರ ಹಾರೈಕೆ ತಲುಪುವಷ್ಟರಲ್ಲಿ ಕಾರ್ಯಕ್ರಮ ಮುಗಿದು ಮಾಸ್ತಿಯವರು ತಮ್ಮ ಊರಿಗೆ ಹೊರಟು ಹೋಗಿರಬಹುದಾಗಿದ್ದರೂ ಪೈಗಳು ಬರೀತಾರೆ:

---

*ಎಂದರೆ ಸಂಗೀತದ ವಿಚಾರ

ಸಮಾರಂಭವು ಇವತ್ತು ಬಹಳ ಯಶಸ್ವಿಯಾಗಿ ನೆರವೇರುವಂತೆ ಶ್ರೀ ದೇವರು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ. ಶ್ರೀ ಅಯ್ಯಂಗಾರರಿಗೂ ನಿಮಗೂ ನನ್ನ ನಮಸ್ಕಾರಗಳು (ದಿ. ೧೮-೧೨-೬೧).

ಹೀಗೆ ಬರೆಯುವಲ್ಲಿ, ತಮ್ಮಿಂದ ಕರ್ತವ್ಯ ಲೋಪವಾಗಬಾರದೆಂಬ ಭಾವನೆ ಇದ್ದಿರಲೂ ಸಾಕು.

ಅಶಕ್ತತೆ ಹೆಚ್ಚಿದಂತೆಲ್ಲ ಪೈಗಳಿಗೆ ಈ ಹಾರೈಕೆಯ ಬರಹವು ಸಾಕೆನಿಸಿಬಿಟ್ಟಿತ್ತು! 'ವಯೋಮಾನಕ್ಕೆ ಮೀರಿದ ಪತ್ರವ್ಯವಹಾರವಿದು. ಪ್ರತಿಯೊಂದನ್ನೂ ನಾನೇ ಆಲೋಚಿಸಬೇಕು. ನಾನೇ ಪ್ರತ್ಯುತ್ತರಿಸಬೇಕು' ಎಂಬುದಾಗಿ ೪ - ೩- ೧೯೬೨ರ ಪತ್ರದಲ್ಲಿ ತಮ್ಮ ಅಳಲನ್ನ ತೋಡಿಕೊಂಡಿದ್ದಾರೆ.

ಯಾವೊಂದು ಹೊಸ ಪುಸ್ತಕದ ಬಗ್ಗೆ ಬರೆದ ಅಭಿಪ್ರಾಯವು ಶುಭ ಹಾರೈಕೆಯ ಇನ್ನೊಂದು ಪರಿಯಾಗಿದೆ. ಆ ಪುಸ್ತಕವು ಕಳಪೆಯದು ಅಥವಾ ದೋಷಯುಕ್ತವಾದುದು ಆಗಿದ್ದರೂ ಪೈಗಳ ಮೆಚ್ಚಿಕೆ ಅನೂಚಾನವಾಗಿ ವ್ಯಕ್ತವಾಗಿದೆ. 'ಇವರಿಗೆ ಎಲ್ಲವೂ ಚಲೋದಾಗಿಯೇ ಕಾಣುತ್ತದಲ್ಲ? ವಿಮರ್ಶನ ಶಕ್ತಿ ಪೈಗಳಿಗೆ ಇರಲೇ ಇಲ್ಲವೆ?' ಎಂದು ಹಲವಾರು ಜನರಿಗೆ ಅನಿಸಿದೆ. ಈ ಬಗೆಯ ಅವರ ಎಲ್ಲ ಪತ್ರಗಳನ್ನು ವೀಕ್ಷಿಸಿದಾಗ ಕೆಳಗಿನ ಅಂಶಗಳು ನಿಷ್ಪನ್ನವಾಗುತ್ತವೆ:

ಒಂದನೆಯದಾಗಿ, ಹೊಸ (ತರುಣ) ಬರಹಗಾರರಿದ್ದರೆ ಅವರಿಗೆ ಪ್ರೋತ್ಸಾಹಯುಕ್ತವಾಗಿ ಎರಡು ಮಾತನ್ನು ಹೇಳಬೇಕೆಂಬ ಪೈಗಳ ಸ್ಪಷ್ಟವಾದ ನಿಲುಮೆ. ಇನ್ನೊಂದೆಂದರೆ, ಸಾಹಿತ್ಯ ಸೃಷ್ಟಿಯ ಕೆಲಸದ ಬಗ್ಗೆ ಅವರಿಗಿದ್ದ ಗೌರವಪೂರ್ಣವಾದ ಸದ್ಭಾವ; ಹಾಗೂ ಆ ಮೂಲಕ ಕೃತಿ ರಚನೆಯಲ್ಲಿ ಹುಟ್ಟಿಬಂದ ಆಸಕ್ತಿ.

ಅಂತೆಯೇ ಅವರು ಎಂಥ ಅಗಣ್ಯ ಕೃತಿಯನ್ನಾದರೂ ಕುತೂಹಲದಿಂದ ಓದುತ್ತಿದ್ದರು. ವಿಶೇಷತಃ ಹೊಸಗನ್ನಡ ಸಾಹಿತ್ಯದ ನಿರ್ಮಿತಿಯನ್ನು ಅದರ ಒಟ್ಟಂದದಲ್ಲಿ ಮೆಚ್ಚಿಕೊಂಡಿದ್ದರೆನ್ನಬಹುದು. ಬಿ. ಶ್ರೀನಿವಾಸ ಅಯ್ಯಂಗಾರರಿಗೆ ಬರೆದ ಪತ್ರದಲ್ಲಿಯ ಈ ಹೇಳಿಕೆ ಅದಕ್ಕೆ ಸಾಕ್ಷಿ:

'With all the love which I so madly have for Kannada literature, especially for modern literature.' (ರಾಜರತ್ನಂ ಸಂಗ್ರಹದ ಪತ್ರ ನಂ. ೪೩)

Love! ಪ್ರೇಮಿಗಳಿಗೆ ತಾವು ಪ್ರೀತಿಸುವ ವ್ಯಕ್ತಿಯಲ್ಲಿ ದೋಷವು ಸುಲಭವಾಗಿ ಕಾಣಿಸುವುದುಂಟೆ!

ರಾಜರತ್ನಂ ಸಂಪಾದಿಸಿದ 'ಕಾಲೇಜ್ ಬರವಣಿಗೆ'ಯ ಲೇಖನಗಳ ಬಗ್ಗೆ "ತುಂಬಾ ಚೆನ್ನಾಗಿವೆ. ನಿಜವಾಗಿಯೂ ಬಹಳ ಚೆನ್ನಾಗಿವೆ. ಇದು ಬಾಯಿಯ ಮಾತಲ್ಲ. ಮನಸ್ಸಿನ ಮಾತು" ಎಂಬಲ್ಲಿ ಪ್ರೋತ್ಸಾಹದ ಜೊತೆಗೆ ಸಾಹಿತ್ಯ ನಿರ್ಮಿತಿಯನ್ನು ಮನಸಾರೆ ನೆಟ್ಟಿದ್ದರ ಸುಳಿವೂ ನಮಗೆ ಸಿಕ್ಕುತ್ತದೆ. ಹಾಗಿದ್ದರೆ, ವಿದ್ಯಾರ್ಥಿಗಳ ಬರವಣಿಗೆಯಲ್ಲಿ ಹೆಚ್ಚು ಕಡಿಮೆಗಳು

ಇದ್ದೇ ಇರುತ್ತವಲ್ಲ. ಅಷ್ಟು ಕೂಡಾ ಪೈಗಳ ಗಮನಕ್ಕೆ ಬರಲಿಲ್ಲವೆ? ಎಂದು ನಮಗನಿಸಬಹುದು. ಅದಕ್ಕೆ ಅವರೇ ಉತ್ತರಿಸಿದ್ದಾರೆ:

ಅವರಲ್ಲಿ ಈ ಲೇಖ ಉತ್ತಮ, ಅದಕ್ಕಿಂತ ಆ ಲೇಖ ಕೊಂಚ ಎಡತರ - ಎಂದು ಮೊದಲಾಗಿ ಹೇಳಹೋದರೆ ಲೇಖಕರ ಮನಸ್ಸಿನಲ್ಲಿ ತಂತಮ್ಮ ಬಗ್ಗೆ ಹಿಗ್ಗು - ಕುಗ್ಗುಗಳನ್ನು ಕಲ್ಪಿಸಿಕೊಳ್ಳಲಿಕ್ಕೆ ಎಡೆಮಾಡಿ ಕೊಟ್ಟಂತಾಗಬಹುದು ಎಂದಿದ್ದಾರೆ. (ರಾಜರತ್ನಂ ಸಂಗ್ರಹದ ೧೫-೧-೧೯೫೪ ರ ಪತ್ರ)

ಅಲ್ಲದೆ ಹೊಸ ಬರಹಗಾರರು ತಮ್ಮ ಕೃತಿಗಳನ್ನು ಕಳಿಸುವಲ್ಲಿ ಪೈಗಳು ಆಶೀರ್ವಾದರೂಪಿಯಾಗಿ ಎರಡು ಮಾತು ಹೇಳಬೇಕು; ಅದನ್ನು ತಾವು ಮತ್ತೆಲ್ಲಿಯಾದರೂ ಉದ್ಧರಿಸಬೇಕು ಎಂಬ ದೃಷ್ಟಿಯಿಂದ ಕಳಿಸುತ್ತಾರೆಂಬುದು ಪೈ ಅವರಿಗೆ ಚೆನ್ನಾಗಿ ವೇದ್ಯವಾಗಿತ್ತು. ಹೀಗಿರುತ್ತ ಸಹೃದಯತೆಯ ಸಾಕಾರ ಮೂರ್ತಿಯಂತಿದ್ದ ಪೈಗಳು, ತಮ್ಮ ಅಭಿಪ್ರಾಯದಲ್ಲಿ ಬಿರುಸಾದ ಇಲ್ಲವೆ ಕಟುವಾದ ಯಾವ ಮಾತನ್ನೂ ಸೇರಿಸುತ್ತಿದ್ದಿಲ್ಲ.

'ಇದರಲ್ಲಿಯ ಕವಿತೆಗಳು ಇನಿದಾಗಿವೆ' 'ಓದತಕ್ಕ ಕವಿತೆ, ಓದಿ ಮೆಚ್ಚತಕ್ಕ ಕವಿತೆ. ಮೆಚ್ಚಿ ಓದತಕ್ಕ ಕವಿತೆ.'

- ಇಂಥ ಹುರಿದುಂಬಿಸುವಿಕೆಯ ಪ್ರಶಂಸಾ ವಾಕ್ಯಗಳು ಪಡಿಯಚ್ಚಿನ ಸಾಲುಗಳಂತೆ ಒಂದೇ ರೀತಿಯವಿರುತ್ತಿದ್ದಿಲ್ಲ. ಅವೆಲ್ಲ ಪ್ರಾಮಾಣಿಕ ಹೇಳಿಕೆಗಳು ಎಂಬುದಕ್ಕೆ ಇದೂ ಒಂದು ನಿದರ್ಶನ.

ಇದೊಂದು ಪ್ರಶಂಸೆಯ ರೀತಿ: "ಕಥೆ ಬಹಳ ಚೆನ್ನಾಗಿದೆ. ಓದಬೇಕು ಎನಿಸುತ್ತದೆ. ತೋಳುಗಳಲ್ಲಿ ಶೌರ್ಯ ಮಸೆಯುತ್ತದೆ. ಆ ಪ್ರತ್ಯಕ್ಷ ರಾಕ್ಷಸರಾದ ಪೋರ್ತುಗೀಸರನ್ನು ಒಮ್ಮೆ ನಿರ್ನಾಮ ಮಾಡಬೇಕೆನಿಸುತ್ತದೆ." ಈ ತರತಮಭಾವದ ಉದ್ಗಾರ ಪೈಗಳಿಗೆ ವಿಶಿಷ್ಟವಾದುದು. 'ಕೈಲಾಸಂ ನೆನಪು ಬಗ್ಗೆ ಅವರು ಹೊಗಳಿದ ರೀತಿ ಇದು : I tell you I am fascinated with it. It is a very Excellent work, no less Excellently written. It is a very intimate book, an 'a toi' - ಇಲ್ಲಿಯ ದೊಡ್ಡಕ್ಕರದ E ಪೈಗಳದ್ದೇ. (ರಾಜರತ್ನಂ ಸಂಗ್ರಹದ ದಿ. ೨೯. ೧೧. ೧೯೪೮ ರ ಪತ್ರ)

ದಿ. ೩೧.೧೨.೧೯೬೧ರ ಪತ್ರವು ಅವರ ಇಳಿವಯದಲ್ಲಿ ವ್ಯಕ್ತವಾದ ಅಭಿಪ್ರಾಯ. ತುಸು ಬಾಲಿಶವೆಂದು ತೋರಿದರೂ. ಪೈಗಳ ನಿರ್ಮಲ - ನಿಷ್ಕಲ್ಮಷ ಭಾವನೆಯಿಂದ ಹೊರಹೊಮ್ಮಿದ್ದೆಂದು ತಿಳಿಯತಕ್ಕುದು. ಹಾಗೆ ಹೊಗಳಿ ಆ ಕೃತಿ ರಚಯಿತರನ್ನು ಬುದ್ಧಿಪೂರ್ವಕವಾಗಿ ಮೆಚ್ಚಿಸಬೇಕೆಂಬ ಮಾತೇ ಇಲ್ಲಿ ಇಲ್ಲ.

ಅವರ ಮೆಚ್ಚಿಕೆಯು ಪ್ರಾಮಾಣಿಕವೆಂಬುದಂತೂ ಸರಿಯೇ. ಪ್ರಸಂಗತ್ವೇನ ಅದು ಆಳವಾಗಿಯೂ ಇರುತ್ತಿತ್ತು. 'ಮಧುರಯಾನ' ವೆಂಬ, ಕ. ಮು. ಚಂದ್ರಶೇಖರಯ್ಯನವರ

ಕವನ ಸಂಗ್ರಹವನ್ನು ಅವರು ಮೆಚ್ಚಿಕೊಂಡ ರೀತಿ ಇದಕ್ಕೆ ಉತ್ತಮ ನಿದರ್ಶನವಾಗಬಲ್ಲುದು. ಅದರಲ್ಲಿ ಕವಿತೆಗಳೆಲ್ಲಾ ಚೆನ್ನಾಗಿವೆ ಎಂದು ಯಥಾಪ್ರಕಾರ ಹೇಳಿಯಾದ ಮೇಲೆ, ಅವುಗಳಲ್ಲಿಯೇ ೧೩ ಕವನಗಳು ಇನ್ನೂ ಅಷ್ಟು ಚೆನ್ನಾಗಿವೆ ಎಂಬುದಾಗಿ ಅವನ್ನು ಹೆಸರಿಸಿದ್ದಾರೆ. ಅಷ್ಟೇ ಅಲ್ಲ; ಆ ಕವನಗಳಿಂದ ಕೆಲವು ಕಾವ್ಯಾಂಶಗಳನ್ನು ಉದಾಹರಿಸಿದ್ದಾರೆ. 'ಮೌನಮಂಟಪದಲ್ಲಿ ಮನವು ಮಲಗಿರುವಾಗ ಬೆಳಕಿನಾ ಜನ್ಮಕ್ಕೆ ಕತ್ತಲೆಯು ಮೂಲವೊ' ಎಂಬುದು ಇಂಥ ಉದಾಹೃತ ಪದ್ಯಭಾಗದಲ್ಲಿ ಒಂದು. ಅದರಂತೆ 'ಎಣ್ಣೆ ಇಲ್ಲದ ಕಡು ಬಡತನದ ಮನೆಯಲ್ಲಿ ಕಗ್ಗತ್ತಲೆ ದೀಪ' ಎಂಬುದನ್ನು ಉದಾಹರಿಸಿ, "ಬಹಳ ಚಲೋದಿದೆ ಈ ರೂಪಕೋಕ್ತಿ!" ಎಂದು ಉದ್ಗಾರವೆತ್ತಿದ್ದಾರೆ.

ಅಲ್ಲಿಗೆ - 'ಇತಿ - ನಮಸ್ಕಾರಗಳು' ಎಂದು ಬರೆದು ಪತ್ರವನ್ನು ಮುಗಿಸಿದ್ದರು. ಆವಾಗ ಅಲ್ಲಿಯ ಮತ್ತೊಂದು ರೂಪಕವು ನೆನಪಾಯ್ತು. ಅದನ್ನು "P.S." ಆಗಿ ಸೇರಿಸಿ ಪತ್ರವನ್ನು ಮುಂದುವರಿಸಿದ್ದಾರೆ:

"ನೀರಿನಲ್ಲಿ ನೆನೆದಿರುವ ಬೆಂಕಿಪೊಟ್ಟಣದಂತೆ... ನೆನೆದಿರುವ ಪೊಟ್ಟಣವು ಬಿಸಿಲಿನಲಿ ಒಣಗಿದರೆ ಸುಡುವ ಶಕ್ತಿಯನೆಲ್ಲಿ ಗಳಿಸುವುದು?.... ಇದು ಅಪ್ಪಟ ಇತ್ತೀಮಂದಿನ ರೂಪಕೋಕ್ತಿ. ನಮ್ಮ ಹಳೆಯ ಕವಿಗಳು ಸರ್ವಥಾ ಮನವರಿಸಿಲ್ಲದ ರೂಪಲಂಕಾರವಿದು. ನಮ್ಮ ಇಂದಿನವರೂ ನಾನು ಬಲ್ಲಷ್ಟರವರೆಗಾದರೂ ಯಾರೂ ಈವರೆಗೆ ಬಳಸಿಲ್ಲ. ಬಹಳ ಚಲೋದಾದ ಅಗ್ಗಳೆಯದೆನಿಸುವ ರೂಪಕೋಕ್ತಿ."

With all the love - for modern Kannada literature ಎಂದು ಅವರ ಹೇಳಿದ್ದರ ಇಂಗಿತ ಇದೇ ತಾನೇ.

ಇತರರ ಸಾಹಿತ್ಯ ಸೃಷ್ಟಿಯ ಬಗ್ಗೆ ಪೈಯವರು, ಅದು ಎಷ್ಟೆಂದರೂ ಪರರ ವಸ್ತು. ಅದನ್ನು ವಿಮರ್ಶೆ ಅಥವಾ ಟೀಕೆಗೆ ಗುರಿಪಡಿಸುವ ಹಕ್ಕು ತನಗಿಲ್ಲ - ಎಂಬ ನಿಲುಮೆಯನ್ನು ತಳೆದಂತೆ ಈ ಪತ್ರಗಳಿಂದ ಧ್ವನಿತವಾಗುವುದು. ನೆರೆ ಮನೆಯ ಮಗುವಿನ ವಿಚಾರದಲ್ಲಿ ಯಾರಾದರೂ 'ಕುರೂಪಿ, ಇದೆ. ಅದರ ಕಣ್ಣು ಚಿಕ್ಕದು. ಮೂಗು ಅಸಹ್ಯ...' ಎಂದೆಲ್ಲ ಅದರ ತಾಯಿಯೆದುರು ಹೇಳಲಿಕ್ಕಿದೆಯೆ? ಅವರ ಒಂದು ಪತ್ರದಲ್ಲಿ "ನನಗೆ ತೋರಿದುದನ್ನು ಹೇಳಿರುವೆನಷ್ಟೆ. ಸ್ವೀಕರಬೇಕೆಂದೇನೂ ಇಲ್ಲ" ಎಂಬ ಮಾತಿದೆ. ಮತ್ತೊಂದರಲ್ಲಿ 'ಇದು ನನ್ನ ಸೂಚನೆ ಮಾತ್ರ. ನಾನು ಹೇಳಿದೆನೆಂದು ತಾವು ಹೀಗೆ ಮಾಡಲಾಗದು. ತಮ್ಮ ಸಾಹಿತ್ಯ ದೃಷ್ಟಿಗೂ ಸರಿ ಎನಿಸಿದರೆ ಮಾಡಬಹುದು' ಎಂದು ಹೇಳಿದ್ದಾರೆ. ಪರರ ವಸ್ತು! ಆದ್ದರಿಂದಲೇ ತಮ್ಮ ಸೂಚನೆಯು ಆದೇಶವಾಗದಂತೆ ಮುಂಜಾಗ್ರತೆ ವಹಿಸುತ್ತಿದ್ದರು. ಪ್ರಸಿದ್ಧ ವ್ಯಕ್ತಿಗಳ ಕೃತಿ ಇದ್ದರಂತೂ ಪೈಗಳು ತಮ್ಮ ಅಭಿಪ್ರಾಯವನ್ನು ಇನ್ನಷ್ಟು ದೂರದಲ್ಲಿ ನಿಂತು ಹೇಳಬಯಸಿದ್ದರು. ಎ.ಆರ್. ಕೃಷ್ಣಶಾಸ್ತ್ರಿಗಳ 'ಕಥಾಮೃತ'ವು ಅವರಿಗೆ ತುಂಬ ಮೆಚ್ಚಿಕೆಯಾಯಿತು. ಆದರೆ ಶಾಸ್ತ್ರಿಗಳು ಅದರ ಪೀಠಿಕೆಯಲ್ಲಿ ಹೇಳಿದ ಕೆಲವು ಐತಿಹಾಸಿಕ ಸಂಗತಿಗಳ ಸತ್ಯತೆ ಪೈಗಳಿಗೆ

ಸರಿಯೆಂದು ಅನಿಸಲಿಲ್ಲ. ಅದನ್ನು ತೋರಿಸಿಕೊಟ್ಟು 'But of course it is likely that I may be wrong' ಎಂಬ ಮಾತನ್ನು ಸೇರಿಸಿದರು. (ರಾಜರತ್ನಂ ಸಂಗ್ರಹದ ೪೪ನೆಯ ಪತ್ರ. ದಿ. ೧೩-೭-೧೯೫೨). ಅದು ಅಶೋಕನ ಶಾಸನದ 'ಸಾತಿಯ ಪುತ'ಕ್ಕೂ ಸಾತವಾಹನ ರಾಜನಿಗೂ ಇದ್ದಿರಬಹುದಾದ ಅನ್ಯೋನ್ಯತೆ. ಈ ಬಗ್ಗೆ ಕಂಡಿತರೂಪದ ಲೇಖವೊಂದನ್ನು ಪೈಗಳು ಬರೆದು ಸಾತಿಯ ಎಂದರೆ ಸಾಂತಿಕ ( = ತುಳುನಾಡು) ಪ್ರಾಂತ ಎಂಬುದಾಗಿ ತೋರಿಸಿದ್ದಾರೆ. ಆ ಊಹೆ ಅಂತಿಮವಾಗಿ ಸರಿಯಾದದ್ದೇ ಅಲ್ಲವೆ - ಎಂಬ ಮಾತು ಬೇರೆ. ಆದರೆ ತಮ್ಮ ವಿಚಾರದಲ್ಲಿಯೆ I may be wrong ಎಂಬ ದಾಕ್ಷಿಣ್ಯಪರತೆಯನ್ನು ತೋರಿಸಿದುದೇಕೊ?

ಅಭಿಪ್ರಾಯಾರ್ಥವಾಗಿ ಬಂದ ಪುಸ್ತಕಗಳಲ್ಲಿಯ ಅಕ್ಷರಿಕೆಯ ತಪ್ಪುಗಳು, ಕೆಲವು ಶಬ್ದಗಳ ಅರ್ಥಭೇದದ ಅಜ್ಞಾನ - ಇವನ್ನು ತೋರಿಸುವಲ್ಲಿ ಮಾತ್ರ ಅವರು ಯಾವ ಸಂಕೋಚವನ್ನೂ ಇಟ್ಟುಕೊಂಡಿರಲಿಲ್ಲ. ನಗಾಡು, ಮಧ್ಯಾನ್ನ ಎಂಬೀ ತಪ್ಪುಗಳು; ಬುರುಡಿ ಮತ್ತು ಬುರುಡೆ, ಅದರಂತೆ ಪರಿವರ್ತನೆ ಮತ್ತು ದಂಡಾನ್ವಯ - (translation and paraphrase) - ಮುಂತಾದ ಶಬ್ದದ್ವಯದ ಅರ್ಥಭೇದ - ಇವನ್ನು ಎತ್ತಿ ತೋರಿಸುವಲ್ಲಿ ಅವರಿಗೆ ಯಾವ ಅಳುಕೂ ಇರಲಿಲ್ಲ. 'ಹೊತ್ತಗೆ,' 'ಹೊತ್ತಿಗೆ' ಇವುಗಳಲ್ಲಿ ಯಾವುದು ಸರಿ? ಎರಡೂ ಸರಿಯೇ! ಒಂದು 'ಪುಸ್ತಕ' ಶಬ್ದದ ತದ್ಭವವಾದರೆ ಇನ್ನೊಂದು 'ಪುಸ್ತಿಕೆ' ಎಂಬುದರದ್ದು. (ಈ ಅಂತರವನ್ನು ಅನೇಕರು ಗಮನಿಸದೇ ಅವನ್ನು ಬಳಸುತ್ತಾರಲ್ಲವೆ). ಹಾಗೇನೆ 'ಅಹಂಭಾವ' 'ಅಹಂಕಾರ'ಗಳಲ್ಲಿಯ ಅಂತರವನ್ನು 'ಆನ್ಮೆ' ಎಂಬ ಶಬ್ದ ವಿವರಣೆಯ ಮೂಲಕ ತೋರಿಸಿದ್ದಾರೆ. ಆಗೀಗ ಅಪರಿಚಿತ ಶಬ್ದಗಳನ್ನು ಸೃಷ್ಟಿಸಿದ್ದಾರೆ. (ಉದಾ. ಗೆ ಸೂಜಿಮುತ್ತು)

ಬೈಕಾಡಿ ವೆಂಕಟಕೃಷ್ಣರಾಯರು 'ಉಗಾದಿ' ಎಂಬ ಶಬ್ದವನ್ನು ತಮ್ಮೊಂದು ಪತ್ರದಲ್ಲಿ ಬಳಸಿದ್ದರು. ಕೂಡಲೇ ಬಂತು ಪೈಗಳ ಪ್ರತಿಕ್ರಿಯೆ; "ನಮ್ಮತ್ತಣ ಇಲ್ಲಿಯೂ ಬಳಕೆಯಲ್ಲಿ ಕಂಡಿರಾ?" ಅಂತೂ ಪೈಯವರ ಶಬ್ದ ಪ್ರಜ್ಞೆ ಸದೈವ ಜಾಗೃತ ಸ್ವರೂಪದ್ದಾಗಿತ್ತೆಂಬು ದರಲ್ಲಿ ಸಂದೇಹವಿಲ್ಲ.

ಆದರೆ ಅನ್ಯರ ಕೃತಿಯ ಅಂತರ್ಯದ ಬಗ್ಗೆ ದೋಷಗಳನ್ನು ಹೇಳದಿರುವ ಪೈಗಳು ಈ ವಿಚಾರದಲ್ಲೇಕೆ ಕಟ್ಟುನಿಟ್ಟಿನವರಾಗಿದ್ದರು; ಪ್ರಾಯಶಃ ಹೀಗಿರಬಹುದೆ? ಕೃತಿಯ ಅಂತರ್ಯ ಇಲ್ಲವೆ ಅಂತಸ್ಸತ್ವ ಆ ಕೃತಿಕಾರನ ಸ್ವಂತದ ಸೃಷ್ಟಿ ತಾನೇ. ನಮ್ಮ ಪಾಲಿಗೆ ಹೆರವರ ಸೊತ್ತು. ಆದರೆ ಕನ್ನಡ ಭಾಷೆ ಎಲ್ಲರ ಸೊತ್ತು! ಆ ವಿಷಯದಲ್ಲಿ ಯಾರೇ ತಪ್ಪು ಮಾಡಿದರೂ, ಅವರಿಗೆ ಹೇಳುವ ಅಧಿಕಾರ ಎಲ್ಲರಿಗೂ ಮುಕ್ತವೆಂದು ತಿಳಿಯೋಣವೆ?

ಅಕ್ಷರಿಕೆಯ ವಿಷಯದಲ್ಲಿ ಸ್ವತಹ ಒಮ್ಮೆ ತಪ್ಪು ಮಾಡಿದ್ದರು. ಅದು ತಿಳಿದೊಡನೆಯೆ ಒಪ್ಪಿ, ಸಂಬಂಧಪಟ್ಟವರ ಕ್ಷಮೆ ಕೇಳಿದ್ದಾರೆ. ಅಮ್ಮೆಂಬಳ ಶಂಕರ ನಾರಾಯಣ ನಾವಡರ ಒಂದು ಕವನ ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ ಪೈಯವರು 'ಅನುಷ್ಟುಭ್' ಎಂಬ ಶಬ್ದವನ್ನು

ಬಳಸಿದ್ದರು. ಅದು 'ಅನುಷ್ಟುಪ್' ಇರಬೇಕು ಎಂದು ನಾವಡರು ಸೂಚಿಸಿದಾಗ, 'ಇಲ್ಲ. ತಾನು ಬರೆದದ್ದೇ ಸರಿಯಾದ ಪ್ರಯೋಗ' ಎಂದು ಸಾಧಿಸಿಕೊಂಡರು. ಆಮೇಲೆ ಅವರಿಗೇ ಸಂಶಯ ಬಂದು ಮರು ಪರಿಶೀಲಿಸಿರಬೇಕು. ಆ ಕೂಡಲೇ ಬರೆದರು:

> ತಾವು ಸೂಚಿಸಿದುದನ್ನು ಏನೊ ಮರವೆಯಿಂದ ಒಪ್ಪದೇ, 'ಅನುಷ್ಟುಭ್' ಎಂದೇ ಆಗಬೇಕೆಂದು ನನ್ನ ಪ್ರತ್ಯುತ್ತರದಲ್ಲಿ ಬರೆದುದು ತಪ್ಪೆಂದು ಮನವರಿಕೆಯಾಗಿ ಈ ಕಾರ್ಡನ್ನು ತಮಗೆ ಈಗಲೇ ಮರಳಿ ಬರೆದಿರುತ್ತೇನೆ. 'ಅನುಷ್ಟುಭೇ + ಛಂದಸ್ಸು' ಎಂಬ ಸಂಸ್ಕೃತ ಸಮಾಸಪದವು ಸಂಸ್ಕೃತ ಸಂಧಿಯ ನಿಯಮಗಳ ಮೇರೆಗೆ 'ಅನುಷ್ಟುಪ್ ಛಂದಸ್ಸು' ಎಂದೇ ಆಗಬೇಕು. ತಮ್ಮ ಸೂಚನೆಯೇ ನೇರಾಗಿದೆ, ..... [ಅದನ್ನು] ತಪ್ಪೆಂದು ಬಗ್ಗೆ ನನ್ನನ್ನು ಕ್ಷಮಿಸಿರಿ. (ದಿ. ೧೩ - ೪- ೪೭)

ಛಂದಸ್ಸಿನ ವಿಷಯದಲ್ಲಿಯೂ ಪೈಯವರದು ಜಾಗೃತ ಪ್ರಜ್ಞೆ. ಅಲ್ಲಿಯ ತಪ್ಪುತಡೆಗಳನ್ನೂ ಅವರು ಸಹಿಸರು. ಇದೇ ಅಮ್ಮೆಂಬಳ ಶಂಕರನಾಯಣ ನಾವಡರ 'ಸರ'ದಲ್ಲಿಯ ಪದ್ಯಗಳಲ್ಲಿ... 'ಒಂದೂ ಕ್ರಮಬದ್ಧವಾಗಿಲ್ಲ. ಅಂತ್ಯಪ್ರಾಸಗಳೂ ನೇರವಾಗಿಲ್ಲ. ಕೊನೆಯ ಎರಡು ಬಂತಿಗಳ ವಿರಾಮವೂ ಇಲ್ಲ. ಅತ ಏವ ಅವುಗಳ ಬಗ್ಗೆ ಇನ್ನು ಮುಂದೆ ಹೆಚ್ಚಿಗೆ ಎಚ್ಚರಗೊಂಡಿದ್ದರೆ ಲೇಸೆನಿಸುತ್ತದೆ' ಎಂಬ ಎಚ್ಚರವನ್ನು ಜಾಗರಿಸಿದ್ದಾರೆ.

### ವ್ಯಾಸಂಗ ಸಹಾಯ

ಪೈಗಳು ಇತರರ ವ್ಯಾಸಂಗ ಪ್ರವೃತ್ತಿಗೆ ಸಕ್ರಿಯವಾಗಿ ನೆರವಾಗುವ ಮನೋಭಾವವನ್ನು ಹೊಂದಿದ್ದರೆಂಬುದು, ಅವರ ಹಲವು ಪತ್ರಗಳಿಂದಾಗಿ ತಿಳಿದು ಬರುತ್ತದೆ. ಬೇರೆಯವರಿಗೆ ಬೇಕಾದ ಪುಸ್ತಕಗಳನ್ನು ಎರವಲಾಗಿ ಕೊಡುವುದು ಈ ಸಹಾಯದ ಒಂದು ಕ್ರಮ. ತಮ್ಮ ಖಾಸಾ ಗ್ರಂಥಸಂಗ್ರಹದಿಂದ ಅನೇಕ ಪುಸ್ತಕಗಳನ್ನು ಅವರು ಕೊಟ್ಟಿರಲು ಸಾಕು. ಬಹು ದೊಡ್ಡ ಗ್ರಂಥ ಸಂಗ್ರಹವದು. ಅನೇಕ ಪುಸ್ತಕಗಳ ಎರಡೆರಡು ಪ್ರತಿಗಳೂ ಇದ್ದುದಾಗಿ ತಿಳಿಯುತ್ತದೆ. ಆದರೆ A book lent is book lost - ಎಂದು ಕ್ರಮೇಣ ಅವರಿಗೆ ಅರಿವಾಗಿರಬೇಕು. ಬಿ. ವೆಂಕಟಾಚಾರ್ಯರ ಕಾದಂಬರಿಗಳ ಎರಡೆರಡು ಪ್ರತಿಗಳಿದ್ದುವಾದರೂ, ಒಯ್ದವರು ತಂದು ಕೊಡಲಿಲ್ಲವಾದ್ದರಿಂದ "ಈಗ ಒಂದೂ ಇಲ್ಲ" ಎಂಬ ಮಾತು ದಿ. ೧೦-೭-೧೯೪೪ರ ಪತ್ರದಲ್ಲಿ ಬರುತ್ತದೆ.

ಆದರೂ ಬೇರೆಯವರಿಗೆ ಪುಸ್ತಕ ಕೊಡುವುದನ್ನು ಒಮ್ಮೆಲೇ ನಿಲ್ಲಿಸಲಿಲ್ಲ. 'ನನ್ನಲ್ಲಿರುವುದು ಒಂದೇ ಪ್ರತಿ. ನೀವು ಕಂಡಿತವಾಗಿ ಮರಳಿ ಕೊಡುವುದಾದಲ್ಲಿ' ಎಂಬ ಕರಾರು ಹಾಕಿ, ಜೊತೆಗೆ ಆ ವ್ಯಕ್ತಿಗಳೊಡನೆಯ ತಮ್ಮ ಸಂಬಂಧವನ್ನು ಗಣಿಸಿ, ಪುಸ್ತಕಗಳನ್ನು ಕಳಿಸಿಕೊಟ್ಟ ಸಂದರ್ಭಗಳೂ ಇವೆ. ಇನ್ನು ಕೆಲವರಿಗೆ, ತಮ್ಮಲ್ಲಿಯ ಒಂದೇ ಪ್ರತಿಯ ಕಾರಣವನ್ನು ಕೊಟ್ಟು 'ಎರವಲಾಗಿ ಕೊಡಲಾಗುವುದಿಲ್ಲ. ಕ್ಷಮಿಸುವುದು' ಎಂದೂ ಹೇಳಿದ್ದಿದೆ.

ಅದೇನೇ ಇದ್ದರೂ, ಈ ಗ್ರಂಥ ಸಹಾಯದ ವಿಷಯದಲ್ಲಿ ಅವರು ಒಟ್ಟಿನಲ್ಲಿ ಉತ್ಸುಕರಿದ್ದರೆಂದೇ ಹೇಳಬೇಕು. ಶಿರಾಡಿಪಾಲದ ಕೆ. ಎನ್. ಭಟ್ಟರು ಭರ್ತೃಹರಿಯ ನೀತಿಶತಕ ಎಂಬ ಸಂಸ್ಕೃತ ಪುಸ್ತಕವನ್ನು ಕೇಳಿದಾಗ, ಪೈಯವರು ತೋರಿದ ಪ್ರತಿಕ್ರಿಯೆ (೧೬. ೫. ೧೯೫೬) ಅವರಿಗೇನೆ ವಿಶಿಷ್ಟವಾದದ್ದು;

ಆ ಗ್ರಂಥದ ಒಂದು ಪ್ರತಿ ನನ್ನ ತಾಯಿಯವರ ಚಿಕ್ಕಪ್ಪರಾದ ಮಂಜೇಶ್ವರದ ವ್ಯ.ವಾ. ನರಸಯ್ಯ ಶಾನಭಾಗರೆಂಬ ಶ್ರೀಮಂತರ ಪುಸ್ತಕ ಭಂಡಾರದಲ್ಲಿತ್ತು. ಅದನ್ನೋದಿದ ನೆನಪು ನನಗೆ ಚೆನ್ನಾಗಿದೆ. ಆ ಪುಸ್ತಕ ಭಂಡಾರದ ಪುಸ್ತಕಗಳೆಲ್ಲವೂ ಕಳೆದ ೧೯೨೬ ನೆಯ ಇಸವಿಯಲ್ಲಿ ಅವರು ದಿವಂಗತರಾದ ಮೇಲೆ ದಿಕ್ಕುಪಾಲಾಗಿವೆ.

ಇದನ್ನು ಹೇಳುವುದರಿಂದ ಕೆ. ಎನ್. ಭಟ್ಟರಿಗೆ ಏನು ಪ್ರಯೋಜನವಾದ ಹಾಗಾಯಿತು? ಪೈಗಳು ಆ ಪುಸ್ತಕದ ಪ್ರಕಟನ ವಿವರಗಳನ್ನೂ ಬೆಲೆಯನ್ನೂ ಆ ಪತ್ರದಲ್ಲಿ ಕೊಟ್ಟಿದ್ದಾರೆ - ಭಟ್ಟರು ಬೇಕಿದ್ದರೆ ಕೊಳ್ಳಲಿ, ಎಂದು. ಹೋಗಲಿ ಅದು ಸಾಧ್ಯವಿಲ್ಲವೆಂದಾದರೆ, ನೆರೆಯ ಮಂಗಳೂರಿನ ಗವರ್ನ್‌ಮೆಂಟ್ ಕಾಲೇಜಿನ ಲೈಬ್ರರಿಯಲ್ಲಿ ಇದೆಯೆಂದೂ ತಿಳಿಸಿ, ಅಲ್ಲಿನ ಕೆಟಲಾಗಿನ ನಂಬರನ್ನೂ (೮೭೩) ತಿಳಿಸಿದ್ದಾರೆ!

ಪುಸ್ತಕ ಸಹಾಯವಲ್ಲದೆ, ವ್ಯಾಸಂಗ ವಿಷಯದ ಮಾಹಿತಿ ರೂಪದ ಸಹಾಯವೂ ಈ ತತ್ಪರತೆಯ ಇನ್ನೊಂದು ಪರಿಯಾಗಿದೆ. ಆ ಮೂಲಕ ಕೆಲವು ಮೌಲಿಕವಾದ ಅಂಶಗಳನ್ನೂ - ಅವು ಬಿಡಿಬಿಡಿಯಾಗೇ ಇರಲಿ - ವ್ಯಕ್ತಪಡಿಸಿದ್ದಾರೆ. ಅಂಥ ಒಂದು ಸಂದರ್ಭದತ್ತ ಓದುಗರ ಗಮನವನ್ನು ಸೆಳೆಯಬೇಕೆನಿಸುವುದು.

ಎಸ್. ವೆಂಕಟಾಚಲಪತಿ ಎಂಬವರಿಗೆ ಬರೆದ ಮೂರು ಪತ್ರಗಳಲ್ಲಿ 'ಸಾಕೇತ'ದ (ಅಯೋಧ್ಯೆಯ ಪರ್ಯಾಯ ನಾಮ) ಬಗ್ಗೆ ಕೂಲಂಕಷವಾದ ಜಿಜ್ಞಾಸೆ ಇದೆ. (ನೋಡಿರಿ - ರಾಜರತ್ನಂ ಸಂಗ್ರಹದ ಅನುಬಂಧರೂಪೀ ಪತ್ರಗಳು). ಮೊದಲ ಪತ್ರದಲ್ಲಿ, ಆ ಕುರಿತು, ಅಲ್ಲಿ ಇಲ್ಲಿ ಹುಡುಕಲು ಸೂಚಿಸಿ "ನಿಮ್ಮ ನೆರವಿಗೆ ನಾನು ಬರಲಾರೆನಾದ ನನ್ನ ದುರದೃಷ್ಟದ ಬಗ್ಗೆ ತುಂಬ ವ್ಯಸನಪಡುತ್ತೇನೆ" ಎಂದು ಬರೆದರು. ಪತ್ರವನ್ನು ರವಾನಿಸಿದ ಮೇಲೆಯೂ ಚಿಂತನೆ ನಡೆದೇ ಇತ್ತು. 'ಹಾಂ, ಹೇಮಚಂದ್ರನ ಅಭಿಧಾನಚಿಂತಾಮಣಿಯಲ್ಲಿ ಬಂದಿರಬಹುದೆ?' ಎಂದು ಯೋಚಿಸಿ, ಅದನ್ನು ಸ್ವತಹ ಪರಿಶೀಲಿಸಿ ವಿವರವಾಗಿ ಮತ್ತೆ ಬರೆದರು. ಆದರೂ ತಾವು ಕೊಟ್ಟ ಮಾಹಿತಿ ಅಪೂರ್ವವೆಂಬ ಬೇಸರ ಇದ್ದೇ ಇತ್ತು.

ಇದಕ್ಕಿಂತ ಹೆಚ್ಚಿಗೆ ಬರೆಯಲಿಕ್ಕೆ ನನಗೇನೂ ಸೂಚಿಸುವುದಿಲ್ಲ. ಆದರೂ ಇನ್ನೆಲ್ಲಿಯಾದರೂ ಶ್ರೀದೇವರು ಸತ್ಯ ಸಂಗತಿಯ ಕುರುಹುಗಳನ್ನು ತೋರಿಸುವನೋ ಎಂದು ಹೊಂಚು ಹಾಕುತಲಿದ್ದೇನೆ.

ಹೌದು; ಶ್ರೀ ದೇವರು ಕರುಣೆಯಿಟ್ಟು ಒಂದಷ್ಟು ಕುರುಹುಗಳನ್ನು ತೋರಿಸಿದ! ಮರುದಿನವೇ 'ಸಾಕೇತ'ದ ಬಗ್ಗೆ ಇನ್ನಷ್ಟು ಮಾಹಿತಿಗಳನ್ನು ಒದಗಿಸಿದರು. (ದಿ. ೧೬-೮- ೧೯೬೧ರ ಪತ್ರ)

ಈ ಪತ್ರವನ್ನು ಬರೆಯುವಾಗ ಅವರ ವಯಸ್ಸು ೭೮. ಅವರ ಸಾವಿನ ವರ್ಷಕ್ಕೆ ಸಮೀಪದ್ದು. ಅಲ್ಲದೆ (ಅದೇ ಪತ್ರದಲ್ಲಿ ಕಾಣಿಸಿದ್ದಂತೆ ಬಲ ತೋಳಿನಲ್ಲಿ ಉಂಟಾಗಿರುವ ತೀಕ್ಷ್ಣ ವೇದನೆ ಇದ್ದ ಕಾಲವದು. ಹಾಗಾಗಿ ಅತೀ ಅನಿವಾರ್ಯವಿದ್ದಾಗ ಮಾತ್ರ ಪತ್ರಲೇಖನ ಕೈಕೊಳ್ಳುತ್ತಿದ್ದ ಅಂಥ ಸ್ಥಿತಿಯಲ್ಲಿಯೂ, ತಮ್ಮ ವ್ಯಾಸಂಗದ ಪ್ರಯೋಜನವನ್ನು ಇತರರಿಗೆ ಮಾಡಿಕೊಡುವಲ್ಲಿ ಹಿಂಜರಿದವರಲ್ಲ ಪೈಗಳು.

## ಸ್ವಕೃತಿ ವಿಚಾರ

ಸಾಹಿತಿಯ ಪ್ರಕಟಿತ ಕೃತಿಗಳ ಪೂರ್ವಾಪರ, ಆ ಕೃತಿಗಳಲ್ಲಿಯ ಸಂದಿಗ್ಧ ಅಂಶಗಳ ಬಗ್ಗೆ ವಿವರಣೆ, ಇಲ್ಲವೆ ಅಪ್ರಕಟಿತ ಕೃತಿಗಳ ಸುಳಿವು, ಬರೆಯಬೇಕೆಂದಿರುವ ಕೃತಿಗಳ ಹೊಳಹು - ಇವೇ ಮುಂತಾದ್ದನ್ನು ತಿಳಿಯುವುದಕ್ಕೆ ಪತ್ರಲೇಖನವು ತುಂಬಾ ಪ್ರಯೋಜನಕಾರಿ. ಪೈಗಳ ಪತ್ರಗಳಿಂದಲೂ ಇಂಥ ಕೆಲವು ಅಂಶಗಳು ಹೊರಪಟ್ಟಿವೆ.

ರಮಣ ಮಹರ್ಷಿಗಳ ಸುಪ್ರಸಿದ್ಧ 'ಉಪದೇಶ ಸಾರ'ವನ್ನು ಕ್ರಿ.ಶ. ೧೯೩೯ ರ ಸುಮಾರಿಗೆ ಪೈಗಳು ಅನುವಾದಿಸಿದರು. ಮಹರ್ಷಿಗಳ ಆದೇಶದ ಮೇರೆಗೆ ಅದನ್ನು ಅವರ ಆಶ್ರಮಕ್ಕೆ ಕಳಿಸಲಾಯಿತು. ಅದು ಮರಳಿ ಬರಲೇ ಇಲ್ಲ. (ದಿನಾಂಕ ೨೧ - ೬- ೧೯೫೫ ರಂದು ಜಿ. ಎನ್ ಲಕ್ಷ್ಮಣ ಪೈಗಳಿಗೆ ಬರೆಧ ಪತ್ರ). ಮೂಲ ಕೃತಿಯ ಬೇರೆ ಅನುವಾದ ವ್ಯಾಖ್ಯೆಗಳನ್ನು ಗಮನಿಸಿ, ಸ್ವತಂತ್ರವೇ ಏನ್ನುವ ರೀತಿಯಲ್ಲಿ ಪೈಗಳು ಪದ್ಯರೂಪದಲ್ಲಿ ಇದನ್ನು ಪರಿವರ್ತಿಸಿದ್ದರು. ಪೈಯವರ ತಕ್ಕ ಮಟ್ಟಿಗೆ ವಿಸ್ತಾರದೆನ್ನಬಹುದಾದ ಈ ಪದ್ಯರಚನೆ ಕಳೆದುಹೋದಂತಾಗಿದೆ.

ಅದರಂತೆ ರವೀಂದ್ರರ ಗೀತಾಂಜಲಿಯ ಸುಮಾರು ೬೦ ಮುಕ್ತಕಗಳನ್ನು ಗದ್ಯದಲ್ಲಿ ಅನುವಾದಿಸಿದ್ದ ವಿಷಯ. ಅವುಗಳಲ್ಲಿ ೩೬ ಮಾತ್ರ. 'ಕನ್ನಡ ಸಹಕಾರಿ' ಪತ್ರಿಕೆಯಲ್ಲಿ ಪ್ರಕಟವಾಗಿ, ಅರ್ಧಕ್ಕೆ ನಿಂತುಬಿಟ್ಟಿದ್ದಿತು. ಕಾರಣ ತಿಳಿದಿರಲಿಲ್ಲ. ದಿ. ೨೬ - ೧೦ - ೫೮ ರ ಪತ್ರದಿಂದ, ಅದರ ಕಾರಣ ಸ್ಪಷ್ಟವಾಗುತ್ತದೆ : ಅದುವೆ ಕಾಪಿರೈಟ್ ಸಮಸ್ಯೆ. ಆ ಉಳಿದ 'ಪದ್ಯ'ಗಳು ಎಲ್ಲಿ ಸಿಕ್ಕಿಬಿದ್ದಿವೆಯೋ ತಿಳಿಯದು. ಪೈಯವರು ಬಂಗಾಲಿಯನ್ನು ಚೆನ್ನಾಗಿ ಬಲ್ಲವರಾದ್ದರಿಂದ ಮೂಲ ಬಂಗಾಲಿಯಿಂದಲೇ ಅನುವಾದಿಸಿದ್ದರಂತೆ. ಅಚ್ಚರಿಯ ಸಂಗತಿಯೆಂದರೆ, ಪೈಯವರ ಅಭಿಪ್ರಾಯದ ಪ್ರಕಾರ ಮೂಲಕ್ಕಿಂತ ಇಂಗ್ಲಿಷ್ ರೂಪಾಂತರವೇ ಹೆಚ್ಚು ಸೊಗಸಾಗಿದೆಯಂತೆ.

ಅವರ 'ಕನ್ನಡಿಗರ ತಾಯಿ' ಕವನದಲ್ಲಿಯ ಕೆಲ ಶಬ್ದಗಳಿಗೆ ಒಂದು ಪತ್ರದಲ್ಲಿ ಅರ್ಥ ವಿವರಣೆ ಇದೆ. (ಅವರ ಕವನಗಳಿಗೆ ಎಂತಿದ್ದರೂ ಟಿಪ್ಪಣಿಗಳು ಬೇಕೇ ಆಗುತ್ತದೆ! ಇದಂತೂ ಪಠ್ಯಪುಸ್ತಕಗಳಲ್ಲಿ ಆಗೀಗ ಸೇರಿಕೊಳ್ಳುವ ಕವಿತೆ..) ಅದರಲ್ಲಿ `ಶರ್ವ'(ನೃಪತುಂಗನ ಪರ್ಯಾಯ ನಾಮ) ಮತ್ತು 'ನಲ್ವ' (೪೦೦ ಮೊಳದ ಅಳತೆ) ಎಂಬ ಗತಬಳಕೆಯ ಅರ್ಥವನ್ನು ಕೊಟ್ಟಿದ್ದಾರೆ.

ಬೇರೆಡೆ ಕಂಡು ಬರುವ ಅಕ್ಷರಿಕೆಯ ತಪ್ಪುಗಳನ್ನು ತಪ್ಪದೇ ಎತ್ತಿ ತೋರಿಸುತ್ತಿದ್ದರಲ್ಲವೆ. ಅದೇ ಎಚ್ಚರದಿಂದ, ತಮ್ಮವೇ ಕೃತಿಗಳ ಮುದ್ರಣ ಕಾಲದಲ್ಲಿ ತಪ್ಪುಗಳಿರಕೂಡದೆನ್ನುವ

ಬಗ್ಗೆ ತುಂಬಾ - ಅತಿ ಎನಿಸುವಷ್ಟು - ಮುಂಜಾಗ್ರತೆ ವಹಿಸುತ್ತಿದ್ದರು. ಸಂಬಂಧಪಟ್ಟವರನ್ನು ಎಚ್ಚರಿಸುತ್ತಿದ್ದರು. ಇತರ ಅನೇಕ ಲೇಖಕರಲ್ಲಿ ಈ ಪ್ರವೃತ್ತಿ ಇದ್ದಿರಲು ಸಾಕು. ಆದರೆ ಪೈಗಳು ಮುದ್ರಣ ಕಾಲದಲ್ಲಿ ಆಗಬಹುದಾದ ತಪ್ಪುಗಳನ್ನು ಮುಂಚಿತವಾಗಿ ತಾವೇ ಊಹಿಸಿ ಹಾಗೆ ಮಾಡಬಾರದೆಂದು ತಿಳಿಸುವಷ್ಟು ತಮ್ಮ ಶಬ್ದ ಪ್ರಜ್ಞೆಯನ್ನು ತೋರಿಸಿದ್ದಾರೆ. (ಉದಾ.ಗೆ ಬುರುಡಿ ಶಬ್ದವನ್ನು 'ಬುರುಡೆ' ಮಾಡಲಾಗದೆಂಬ ಸೂಚನೆ). 'ಗಿಳಿವಿಂಡು' ಕೃತಿಯ ದ್ವಿತೀಯ ಮುದ್ರಣ ವಿಚಾರದಲ್ಲಂತೂ ರಾಜರತ್ನಂರಿಗೆ ಸೂಚನೆಗಳ ಮೇಲೆ ಸೂಚನೆ ಇತ್ತಿದ್ದಾರೆ. ಆ ಪತ್ರಗಳನ್ನು ನೋಡಿದಾಗ, ತಮ್ಮ ಚೊಚ್ಚಿಲು ಕೃತಿಯಾದ ಆ ಕವನ ಸಂಗ್ರಹದ ಬಗೆಗಿನ ಅವರ ಅಚ್ಚುಮೆಚ್ಚು ಒಡೆದು ತೋರುವಂತಿದೆ. ಇತರ ಯಾವುದೇ ಬರಹದ ಬಗ್ಗೆ ಅವರು ಇಷ್ಟೊಂದು ಮಮತೆಯನ್ನು ಸುರಿಸಿದವರಲ್ಲ.

ಅವರ ಸ್ವಂತದ ಕೃತಿಗಳ ಬಗ್ಗೆ ತಿಳಿದು ಬರುವ ಅಂಶಗಳು ಇಷ್ಟೇನೇ. ಅದೂ ಅವುಗಳ ಹೊರಮೈಗೆ ಸಂಬಂಧಿಸಿದುವು. ಅವುಗಳ ಆಂತರ್ಯವಾಗಲೀ, ಅವು ಸೃಷ್ಟಿಗೊಂಡದ್ದರ ಹಿನ್ನೆಲೆ - ಪ್ರೇರಣೆ ಗಳು ತಿಳಿದು ಬರುವುದೇ ಇಲ್ಲ. ಸ್ವಂತದ ಬಗ್ಗೆ. ಸ್ವಕೃತಿಗಳ ಬಗ್ಗೆ ಹೇಳುವ ಜಾಯಮಾನವೇ ಅವರದಲ್ಲ. ಕನ್ನಡಿಗರ ಪುಣ್ಯವಶಾತ್ 'ಸಾಹಿತ್ಯಜ್ಞರ ಆತ್ಮಕಥನ'ದಲ್ಲಿ (ಅದೂ ಸಂಪಾದಕ ಬುರ್ಲಿ ಬಿಂದುಮಾಧವರ ಒತ್ತಾಯಕ್ಕೆ ಮಣಿದು) ಒಂದಷ್ಟು ಸ್ವವಿಷಯವನ್ನು ಹೇಳಿದ್ದಾರಲ್ಲವೆ. ಅದೊಂದು ತಪ್ಪು ಮಾಡಿದವರಂತೆ ಅವರ ಭಾವನೆಯಾಗಿತ್ತೆಂದರೂ ಸರಿ. ಅದಾದ ಮೇಲೆ ಬೇರೆ ಕೆಲವರು ಅವರ ಜೀವನ ಪರಿಚಯ ಮುಂತಾಗಿ ಕೇಳಿದರೆ, "ಅಕೋ, ಅಲ್ಲಿ ಬಂದಷ್ಟೇನೆ. ಅದಕ್ಕೂ ಹೆಚ್ಚಿಗೆ ಹೇಳಲು ಇನ್ನೇನೂ ಇಲ್ಲ" ಎಂದು ಉತ್ತರಿಸುತ್ತಿದ್ದರು.

ಆದಾಗ್ಯೂ ಅವರ ಬರವಣಿಗೆಯ ರೀತಿಯ ಬಗ್ಗೆ ಒಂದೆರಡು ಅಂಶಗಳು ಆಕಸ್ಮಿಕವೆಂಬಂತೆ ಪತ್ರಗಳಲ್ಲಿ ನುಸುಳಿಕೊಂಡಿವೆ:

> ನಾನು ಮಾಡಿರುವ, ಇನ್ನೂ ಅಲ್ಲಿಷ್ಟು ಇಲ್ಲಿಷ್ಟು ಮಾಡುತ್ತಿರುವ ಇತಿಹಾಸ ಸಂಶೋಧನದಲ್ಲಿ ಹೆಚ್ಚಾಗಿ ಕಾಲನಿರ್ಣಯದ ಸಮಸ್ಯೆಗಳನ್ನು ಎತ್ತಿಕೊಂಡು ಅವನ್ನು ಬಗೆಹರಿಸಲಿಕ್ಕೆ ತಾನೆ ಯತ್ನಿಸಿರುವೆನಲ್ಲದೆ ಐತಿಹಾಸಿಕ ಕಥಾಭಾಗದ ಕಡೆಗೆ ಮನಸ್ಸನ್ನು ಹಾಯಿಸಲಿಲ್ಲ. (ದಿ. ೪. ೨. ೫೫೮ ಪತ್ರ)

> ..... ತಾವು ಉಪಯೋಗಿಸಿದ ಬಗೆಯ ತಿರುವು ಮುರುವಿನ ಭಾಷೆಯನ್ನು (ಉದಾ: ಅಂತ್ಯರಹಿತನಾಗಿಸಿದೆ ನೀನೆನ್ನನ್ನು) ಗದ್ಯದಲ್ಲಿ ನಾನೊಪ್ಪುವುದಿಲ್ಲ. ನಾನು ಒಪ್ಪುವ ಗದ್ಯಶೈಲಿ ಎಂದರೆ ಬಾಣದ ಗತಿಯಂತೆ ತೀರಾ ನೆಟ್ಟಗಾಗಿರಬೇಕು. ಇದೇ ನನ್ನ ಗದ್ಯಶೈಲಿಯ ಮೂಲ ಸೂತ್ರ. (ದಿ. ೨೬ . ೧೦ . ೫೮೮ ಪತ್ರ)

## ಸಮಕಾಲೀನರ ವಿಚಾರ

ಪತ್ರಸಾಹಿತ್ಯದಲ್ಲಿ, ಕೆಲವು ಸಮಕಾಲೀನರ ಪ್ರಸ್ತಾಪವೂ, ಪತ್ರ ಪಡೆದ ವ್ಯಕ್ತಿಗಳ ಹಾಗೂ ಪತ್ರ ವ್ಯಕ್ತಿಯ ನಡುವಣ ಪರಸ್ಪರ ಸಂಬಂಧವೂ ವ್ಯಕ್ತವಾಗಿರುತ್ತದೆ. ಆ ದೃಷ್ಟಿಯಿಂದ ಗೋವಿಂದ ಪೈಗಳ ಪರಿಚಯದವರನ್ನು ಗುರುತಿಸೋಣ.

ಮೊದಲಿಗೆ ಮುದ್ದಣ. ಅವರಿಗೂ ಮುದ್ದಣನಿಗೂ ಕೇವಲ ೧೨ - ೧೪ ವರ್ಷಗಳ ಅಂತರ. ಕ್ರಿ.ಶ. ೧೯೪೦ ರ ದಶಕದಲ್ಲಿ ಎಸ್. ವಿ. ರಂಗಣ್ಣನವರು ರಾಮಾಶ್ವಮೇಧವನ್ನು ನಗಣ್ಯವಾಗಿ ಕಂಡದ್ದು ('ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು') ಪೈಗಳಿಗೆ ಒಪ್ಪಿಗೆಯಾಗಿದ್ದಿಲ್ಲವೆನ್ನುವುದಕ್ಕೆ , ಏರ್ಯ ಲಕ್ಷ್ಮೀನಾರಾಯಣ ಆಳ್ವರಿಗೆ ಬರೆದ ಪತ್ರದಲ್ಲಿ ಸುಳಿವು ದೊರೆಯುತ್ತದೆ.

> ನೀವು ಆ ಗ್ರಂಥದಲ್ಲಿ (ರಾಮಾಶ್ವಮೇಧದ ರಸತರಂಗಗಳು) ನಮ್ಮ ಮುದ್ದಣನ ಕೀರ್ತಿಯ ಅಸಾಮಾನ್ಯವಾದ ಸುವರ್ಣದ ಚೌಕಟ್ಟಿಗೆ ಒಪ್ಪುವಂಥಾ ಕೆಲವು ಸುವರ್ಣದ ಹೂಗಳನ್ನು ಕೀಲಿಸಿರುತ್ತೀರಿ ಎಂದು ನನಗನಿಸಿತು. ಈ ಮಾತನ್ನು ಒಪ್ಪುವವರು ಒಪ್ಪಿಕೊಳ್ಳಲಿ, ಒಲ್ಲದವರು ಒಲ್ಲದಿರಲಿ, ಅದು ನನ್ನ ಗೊಡವೆಯಲ್ಲ....ನನಗಾದರೊ ನಮ್ಮ ಮುದ್ದಣನು ಆದಿಪಂಪನ ಪೀಳಿಗೆಯಲ್ಲಿ, ಕನ್ನಡ ಸಾಹಿತ್ಯದ ಗದ್ಯ ಮಹಾಕವಿ ಎನಿಸುತ್ತದೆ ಅಷ್ಟು ಸಾಕು. (ದಿ. ೧೫-೧- ೧೯೬೦)

ಧರ್ಮಸ್ಥಳದ ಹಿಂದಿನ ಧರ್ಮದರ್ಶಿಗಳಾದ ಮಂಜಯ್ಯ ಹೆಗ್ಗಡೆಯವರೂ ಪೈಗಳ ಸಮಕಾಲೀನವರು. ಅವರು ಮರಣವನ್ನಪ್ಪಿದ ಸುದ್ದಿಯನ್ನು ಪೇಪರಿನಲ್ಲಿ ಓದಿ, ಅವರ ತಮ್ಮ ಡಿ. ಪುಟ್ಟಸ್ವಾಮಯ್ಯನವರಿಗೆ ಈ ರೀತಿ ಬರೆದಿದ್ದಾರೆ:

> ತಮ್ಮ ಅಕ್ಕರೆಯ ಬಂಧುವರ್ಯರೂ ನನ್ನ ಮಾನ್ಯ ಮಿತ್ರವರ್ಯರೂ ಆದ ಶ್ರೀ ಶ್ರೀ ಮಂಜಯ್ಯ ಹೆಗ್ಗಡೆಯವರು ಮೊನ್ನೆ ೩೧ನೆಯ ತಾರೀಕಿನಂದು (ಆಗಸ್ಟ್ ೧೯೫೫) ಪರಂಧಾಮವನ್ನೈದಿದರೆಂದು ಪತ್ರಿಕೆಯಲ್ಲಿ ಕಂಡು ವಿಷಣ್ಣನಾದೆ... ಕೆನರಾ ಹೈಸ್ಕೂಲನ್ನು ಅಸ್ತಿತ್ವಕ್ಕೆ ತಂದು ಆದರ್ಶಪುರುಷರಾದ (ಶ್ರೀ ಶ್ರೀ ಮಂಜಯ್ಯ ಹೆಗ್ಗಡೆಯವರನ್ನು ಬಿಟ್ಟು) ನಮ್ಮ ನಾಡಿನಲ್ಲಿ ಬೇರೊಬ್ಬ ಆದರ್ಶ ಪುರುಷರನ್ನು ನಾನು ಕಂಡಿಲ್ಲ .... ಅವರ ಸೌಶೀಲ್ಯವನ್ನು ಹೊಗಳಲಿಕ್ಕೆ ಒಂದು ಬಾಯಿ ಸಾಲದು. ಅವರ ಸತ್ಕಾರ್ಯಗಳನ್ನು ಎಣಿಸಲಿಕ್ಕೆ ಎರಡು ಕೈಗಳು ಸಾಲವು. ಅವರನ್ನು ಕೊಂಡಾಡಿದಷ್ಟು ಮಾತುಗಳೇ ಸೋಲುತ್ತವಲ್ಲದೆ ಅವರ ಸದ್ಗುಣಗಳು ಬಡವಾಗುವಂತಿಲ್ಲ.

ಎಷ್ಟೊಂದು ಮುಕ್ತಮನದ ಮೆಚ್ಚಿಕೆ! ನಿಷ್ಕಲ್ಮಷವಾದ ಹೊಗಳಿಕೆ! ಇನ್ನೊಂದು ಮಾತು. ಅಮ್ಮೆಂಬಳ ಸುಬ್ರಾಯ ಪೈಗಳು ಓರ್ವ ಗಣ್ಯ ವ್ಯಕ್ತಿಯೆಂದು ಮಾತ್ರ ಗೊತ್ತಿದ್ದವರಿಗೆ, ಅವರು ಒಬ್ಬ ಮಹಾನ್ ವ್ಯಕ್ತಿಯೆಂದೂ ಈ ಮೂಲಕ ಪರಿಚಯಿಸಿದಂತಾಗಿದೆಯಲ್ಲವೆ?

ಇಂಥದೇ ಬಾಯ್ತುಂಬಿದ ಮಾತುಗಳು ಬೇರೆ ಕೆಲವರ ಬಗ್ಗೆಯೂ ಬಂದಿವೆ. ಅವನ್ನು ಮೆಲುಕು ಹಾಕುವುದೂ ಒಂದು ಖುಶಿ ಸಂಗತಿಯೇ.

ಕೈಲಾಸಂ ಕುರಿತು : He was undoubtedly one of the few genuine of modern Kannada. His was original way of looking at things. When and where again shall we find a like of him? (ರಾಜರತ್ನಂಗೆ ಬರೆದ ಪತ್ರ. ದಿ. ೨೮ - ೧೧ - ೪೬)

ಎ. ಆರ್. ಕೃಷ್ಣಶಾಸ್ತ್ರಿಗಳ ಬಗ್ಗೆ : ಅವರನ್ನು ಕುರಿತು ನನಗೆ ಹೊಳೆದ ಮಟ್ಟಿಗೆ ಒಂದೇ ಮಾತಿನಲ್ಲಿ ಹೇಳುವುದಾದರೆ ಅದೊಂದು ಪೂರ್ಣಕುಂಭ. ತುಂಬಿದ ಕೊಡಕ್ಕೆ ತುಳುಕಾಟವಿಲ್ಲ. ಅವರಲ್ಲಿ ಮಾತಾಟವಿಲ್ಲ. (ರಾಜರತ್ನಂಗೆ. ದಿ. ೨೦ - ೧- ೧೯೫೩ರಂದು ಬರೆದ ಪತ್ರ).

ಹೀಗೆ ಮಾಸ್ತಿ, ಕಾರಂತ, ಬೇಂದ್ರೆ, ಆಲೂರು ವೆಂಕಟರಾವ ಇವರುಗಳ ಬಗ್ಗೆಯೂ ಪ್ರಶಂಸಾತ್ಮಕ ಉದ್ಗಾರಗಳಿವೆ. ಆಲೂರವರಿಗೆ ಸಂಬಂಧಿಸಿದ ಒಂದು ಪ್ರಸಂಗವನ್ನು ಪೈಯವರು ಒಂದು ಪತ್ರದಲ್ಲಿ ಕಾಣಿಸಿದ್ದು ಇಲ್ಲಿ ಮರು - ದಾಖಲೆಗೆ ಸೂಕ್ತವಾದುದು:

ಡಿಸೆಂಬರ್ ೧೯೫೦ ರಲ್ಲಿ ಮುಂಬಯಿಯಲ್ಲಿ ಅಖಿಲ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತಷ್ಟೆ. ಅಧ್ಯಕ್ಷರೆಂದು ನಿಯೋಜಿತರಾದ ಪೈಗಳು ಸಭಾಭವನಕ್ಕೆ ಆಗಮಿಸಿದರು. ಎಲ್ಲರ ಮನದಲ್ಲಿ ಸಂಭ್ರಮ. ವೇದಿಕೆಯಲ್ಲಿ ತಮ್ಮ ಆಸನದತ್ತ ಪೈಗಳು ಹೋಗಬೇಕು. ಆಗ ಆಲೂರ ವೆಂಕಟರಾಯರು ಕಣ್ಣಿಗೆ ಬಿದ್ದರು. ಪೈಗಳು ತಮ್ಮ ಬದಿಯಲ್ಲಿದ್ದವರನ್ನು ಸರಿಸಿಕೊಂಡು ಅತ್ತ ಧಾವಿಸಿದರು. ಬಾಗಿ, ಆಲೂರವರ ಪಾದಗಳನ್ನು ಎರಡೂ ಕೈಗಳಿಂದ ಹಿಡಿದುಕೊಂಡರು. ಆಲೂರರು ಅವರ ಮೈದಡವಿ ಕುಶಲವನ್ನು ವಿಚಾರಿಸಿದರು. ಅದೊಂದು ಹೃದಯಸ್ಪರ್ಶಿಯಾದ ಸನ್ನಿವೇಶ . (ಅದನ್ನು ಕಣ್ಣಾರೆ ನೋಡಿದವರಲ್ಲಿ ನಾನೂ ಒಬ್ಬ).

ಅದಾಗಿ ಐದು ವರ್ಷಗಳ ಅನಂತರ ಪೈಯವರು ವರದರಾಜ ಹುಯಿಲಗೋಳರಿಗೆ ಪತ್ರ ಬರೆದಾಗ, ( ದಿ. ೮ . ೮. ೫೫) ಆಲೂರರ ಆರೋಗ್ಯವನ್ನು ವಿಚಾರಿಸುವ ನಿಮಿತ್ತದಿಂದ ಆ ಸನ್ನಿವೇಶವನ್ನು ನೆನೆದುಕೊಂಡಿದ್ದಾರೆ. ಮತ್ತು "ಪೂಜ್ಯ ಹಿರಿಯರಾದ ಶ್ರೀ ಆಲೂರ ವೆಂಕಟರಾಯರನ್ನು ಅವರ ಕಾಲುಗಳನ್ನು ಮನಸ್ಸಿನಲ್ಲಿ ಹಿಡಿದು ವಂದಿಸಿರುತ್ತೇನೆ, ಎಂದು ದಯಮಾಡಿ ತಿಳಿಸುವ ಉಪಕಾರವನ್ನು ಮಾಡಬೇಕಾಗಿ" ಬಿನ್ನವಿಸಿದ್ದಾರೆ.

ಹೀಗೆ ತನಗಿಂತ ಹಿರಿಯರಾದವರ ಬಗ್ಗೆ ಪೂಜ್ಯಾತಿಪೂಜ್ಯ ಭಾವನೆ, ಸಮಕಾಲೀನರ ಬಗ್ಗೆ ಆದರಾಭಿಮಾನ, ಅದರಂತೆ ಕಿರಿಯರ ಬಗ್ಗೆ ಸಹಜ ವಾತ್ಸಲ್ಯ - ಇವು ವ್ಯಕ್ತಿಗತ ಸಂಬಂಧವನ್ನು ತಿಳಿಸುವ ಪತ್ರಗಳಲ್ಲಿ ಚೆನ್ನಾಗಿ ಒಡಮೂಡಿವೆ. ಹಲವರು ಕಿರಿಯರ ಬಗ್ಗೆಯಂತೂ, ಅವರು ಅಪೇಕ್ಷಿಸಿದ್ದನ್ನೆಲ್ಲ - ಅದು ತಮ್ಮ ಜಾಯಮಾನಕ್ಕೆ ಒಗ್ಗದಿದ್ದರೂ - ಪೂರೈಸಿಕೊಡುತ್ತಿದ್ದರೆಂದು ಕಾಣುತ್ತದೆ. ಅಂಥ ಕೆಲವರಲ್ಲಿ ಬೈಕಾಡಿ ವೆಂಕಟಕೃಷ್ಣರಾಯರು ಒಬ್ಬರಾಗಿದ್ದರು.

ಪೈಗಳ ಸ್ನೇಹಪರತೆಯೂ, ಉದಾರಮತವಾದಿತ್ವವೂ ಇತರರ ವೈಗುಣ್ಯಗಳನ್ನು ಗಣಿಸುತ್ತಿದ್ದಿಲ್ಲವಾದರೂ ಕೆಲವರಿಗೆ ಘಟನೆಗಳಿಂದಾಗಿ, ಆ ಜನರ ಬಗ್ಗೆ ತುಸು ಬೇಸರ ಮೂಡಿರಲು ಸಾಕು. ಉದಾ.ಗೆ ಸಂಸರ ಬಗ್ಗೆ ಬಿ. ಶ್ರೀನಿವಾಸ ಅಯ್ಯಂಗಾರರಿಗೆ ಬರೆದ ಪತ್ರದಲ್ಲಿ (ರಾಜರತ್ನಂ ಸಂಗ್ರಹದ್ದು) ಪೈಗಳ ಬೇಸರದ ಸೂಕ್ಷ್ಮತೆಯನ್ನು ಗಮನಿಸಬಹುದಾಗಿದೆ.

ಸುರತ್ಕಲ್ಲಿನ ಕೆ. ವೆಂಕಟ್ರಾಯಾಚಾರ್ಯರೊಡನೆಯ ಪತ್ರವ್ಯವಹಾರದಲ್ಲಿ ಬಂದ ವಿರಸ ಪ್ರಸಂಗವನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಬೇಕೆನಿಸುವುದು. ಏಕೆಂದರೆ ಪೈಗಳ ಸಾವಿಗೆ ಒಂದೆರಡು ವರ್ಷಗಳ ಹಿಂದೆ ಮಾತ್ರ ನಡೆದ ಈ ಪ್ರಸಂಗವು ಅವರ ಮನಸ್ಸನ್ನು ಸಾಕಷ್ಟು ತ್ರಸ್ತಗೊಳಿಸಿತ್ತು. ಆ ತ್ರಸ್ತ ಭಾವನೆ ಬೇರೆ ಯಾರೊಟ್ಟಿಗೂ ನಡೆದ ಹಾಗೆ, ಪತ್ರಗಳಲ್ಲಾಗಲೀ, ತಿಳಿದು ಬಂದ ಘಟನೆಗಳಲ್ಲಾಗಲೀ ವ್ಯಕ್ತವಾಗಿಲ್ಲ.

ಪೈಯವರು ಸೃಷ್ಟಿಸಿದ ಒಂದು ಶಬ್ದ 'ಕನ್ಯಾಕವಿತೆ' ಅದನ್ನು ಸರಿಯಾಗಿ ಅರ್ಥ ಮಾಡಲಾಗದೇ ವೆಂಕಟ್ರಾಯಾಚಾರ್ಯರು 'ಹಾಗಂದರೇನು? ನವ್ಯ ಕವಿತೆಯೇ?' ಎಂದು ಕೇಳಿದ್ದರು. ಅಲ್ಲಿಂದಲೇ ಬೇಸರದ ಆರಂಭವೇನೋ! ವೆಂಕಟ್ರಾಯಾಚಾರ್ಯರು ಸಂಪಾದಿಸಲಿದ್ದ 'ಉತ್ತರರಾಮ ಕಥೆ'ಗೆ ಶುಭಾಶಯದ 'ನಾಲ್ಕು ಮಾತು' ಬರೆಯಬೇಕಿತ್ತು, ಪೈಗಳು. ಹಾಗೆ ಬರೆದು ಕೊಟ್ಟಿದ್ದರು. ಅಲ್ಲಿಂದ ಈ ಪತ್ರೋತ್ತರ ಮೊದಲಾಯಿತು.

> ನಾನು ನಿಮಗೆ ಬರೆದಿರುವ ಎರಡು ಪತ್ರಗಳಲ್ಲಿ ಎರಡು ವಿಧವಾಗಿ ಬೇರೆ ಬೇರೆಯಾಗಿ ಬರೆದಿರುತ್ತೇನೆ; ಅದರಿಂದ ಅವುಗಳಲ್ಲಿ ಯಾವುದನ್ನು ಒಪ್ಪಿಕೊಳ್ಳಬೇಕು, ಯಾವುದನ್ನು ಬಿಟ್ಟುಬಿಡಬೇಕೆಂದು ತಿಳಿಯದೆ ಬಹಳ ಗಲಿಬಿಲಿಗೆ ಕಾರಣವಾಗಿದೆಯೆಂದು ಬರೆದಿರುತ್ತೀರಿ. ನನಗಾದರೆ ಈಗ ನೆನಪು ಬಹಳ ಕಡಿಮೆಯಾಗಿ ಬರುತ್ತಿರುವುದರಿಂದ ಆ ಪತ್ರಗಳಲ್ಲಿ ನಾನು ಏನೇನು ಬರೆದಿರುತ್ತೇನೆ ಎಂದು ನೆನಪಿಗೆ ಬಾರದು. ಆದಕಾರಣ ಅವನ್ನು ಒಮ್ಮೆ ನನಗೆ ಕಳುಹಿಸಿಕೊಡುವಿರಾದರೆ.... ಮರಳಿ ಬರೆದು ಕಳುಹಿಸುವೆನು. (ಪೈಗಳ ೪- ೩- ೬೨ ರ ಪತ್ರ).

ಪರಸ್ಪರ ವಿರೋಧಿಯಾದ ಅಭಿಪ್ರಾಯಗಳನ್ನು ಆಯುಷ್ಯದುದ್ದಕ್ಕೂ ಒಮ್ಮೆಯೂ ತಾನು ವ್ಯಕ್ತಪಡಿಸಿದವನಲ್ಲ ಎಂಬ ದೃಢ ನಂಬುಗೆ ಪೈಗಳದು. ಆದ್ದರಿಂದ ವೆಂಕಟ್ರಾಯಾಚಾರ್ಯರ ಪತ್ರ ಒಂದು ಬಗೆಯ 'ಶಾಕ್' ಆಗಿ ಪರಿಣಮಿಸಿರಬೇಕು. ಜೊತೆಗೆ 'ಅಯ್ಯೋ, ನನ್ನ ನೆನಪು ಕೈಕೊಡುತ್ತಿದೆಯಲ್ಲಾ' ಎಂಬ ಕೊರಗು ತಮ್ಮ ಇಳಿವಯದ ಹತ್ತಾರು ವರ್ಷಗಳಲ್ಲಿ ಅನಿಸಿದುದೇ ಇತ್ತು.

ಇತ್ತ ವೆಂಕಟ್ರಾಯಾಚಾರ್ಯರಿಂದ ಉತ್ತರ ಬರಲಿಲ್ಲ. ದಿ. ೧೨-೩-೬೨ ರ ವರೆಗೆ! ಪೈ ಮತ್ತೆ ಬರೀತಿದ್ದಾರೆ:

ಇಷ್ಟು ದಿವಸಗಳಾದರೂ ಪ್ರತ್ಯುತ್ತರವೂ ಇಲ್ಲ. ನನ್ನ ಪತ್ರಗಳನ್ನೆಲ್ಲ ನನಗೆ ಮರಳಿ ಕೊಟ್ಟುದೂ ಇಲ್ಲ. ನೀವೇನು ಅಸೌಖ್ಯದಿಂದ ಇದ್ದಿರುವಿರಾದರೆ ಇತರರಿಂದಲಾದರೂ ಹಾಗೆ ಬರೆಯಿಸಿ ತಿಳಿಸುವ ಉಪಕಾರ ಮಾಡಿರಿ. ನನ್ನ ಈಗಣ ಅಶಕ್ತತೆಯಿಂದ ನನಗೆ ಪತ್ರಗಳನ್ನು ಪದೇ ಪದೇ ಬರೆಯಲು ಸಾಧ್ಯವಿಲ್ಲ. ಉದ್ದುದ್ದ ಪತ್ರಗಳನ್ನು ಬರೆಯಲು ಶಕ್ಯವೂ ಅಲ್ಲ. ಆದುದರಿಂದ ನಮ್ಮ ಈ ಪ್ರಕರಣದಲ್ಲಿ ನಿಮಗೆ ನಾನು ಬರೆಯುವ (ಪತ್ರ) ಪ್ರಾಯಶಃ ಕೊನೆಯದೇನೊ. ಈ ಪತ್ರಕ್ಕೆ ಜವಾಬನ್ನು ಬರೆಯಿರಿ ಅಥವಾ ಇಲ್ಲದಿರಿ. ನನ್ನ ಅವೆರಡೂ ಪತ್ರಗಳನ್ನು ನನಗೆ ಮರಳಿ ಕಳುಹಿಸಿಕೊಡಬೇಕು. ಇದಕ್ಕೆ ತಪ್ಪಲೇಬಾರದು. ಸರ್ವಥಾ ತಪ್ಪಬಾರದು..... ಈ ಮಾರ್ಚ್ ತಿಂಗಳ ಅಂತ್ಯದೊಳಗೆ ನನ್ನ ಆ ಪತ್ರಗಳು ನನ್ನ ಕೈ ಸೇರಲೇ ಬೇಕು. ಆ ಬಗ್ಗೆ ನೀವೇ ಖುದ್ದಾಗಿ ಇಲ್ಲಿಗೆ ಬರಬಾರದು. ಸರ್ವಥಾ ಬರಬಾರದು..... ಹಾಗೆ ಮಾಡಲಿಕ್ಕೆ ತಪ್ಪಿದರೆ ನಿಮಗೆ ಯಾವುದಾದರೊಂದು ದೇವರಲ್ಲಿ ವಿಶ್ವಾಸವಿದ್ದರೆ, ನಿಮಗೆ ಆ ದೇವರ ಆಣೆಯನ್ನು ಹಾಕುತ್ತೇನೆ. ಇದೂ ಫಲಿಸದೇ ಹೋದರೆ ನನಗೆ ಏನು ಮಾಡಬೇಕೆಂದು ಆ ಶ್ರೀದೇವರು ಬುದ್ಧಿಕೊಡುವನೋ ಆ ರೀತಿಯಲ್ಲಿ ವರ್ತಿಸುತ್ತೇನೆ.

ವಿರೋಧಾಭಿಪ್ರಾಯದ ಹೇಳಿಕೆಯನ್ನು ಸರಿಪಡಿಸುವಲ್ಲಿ ಆ ಪತ್ರಗಳು ದೊರೆಯದೆ ಹೋದ ಅಸಹಾಯಕತೆ;ಮತ್ತು ಆ ಕಾರಣದ ಪೈಗಳ ಮನೋವ್ಯಾಕುಲತೆ ಯಾರಿಗೂ ಅನುತಾಪ ಹುಟ್ಟಿಸುವಂತಹುದು. ಅಂತೂ ಎರಡೂ ಕಡೆಯ ದೇವರುಗಳು ಒಲಿದರೆನ್ನಿರಿ. ಆ ಪ್ರಕರಣ ಮುಂದೆ ಸರಿಹೋಯಿತಾದರೂ, ಪೈಗಳ ಈ ವಿಷಯಕವಾದ ಅಸವಸತನವು ಪೂರ್ಣ ಹೋಗಿರಲಿಲ್ಲ. ತಾವು ನವೀಕರಿಸಿ ಬರೆದ ಶುಭಾಶಯದ 'ಆ ನಾಲ್ಕು ಮಾತು'ಗಳಲ್ಲಿ ಒಂದಕ್ಷರವನ್ನೂ ಬದಲಿಸಕೂಡದೆಂದೂ, ಹಾಗೆ ಲಿಖಿತ ಭರವಸೆಯನ್ನು ಕೊಡಬೇಕೆಂದೂ ಕರಾರು ಹಾಕಿದರು! (ಅವರ ಈ ಶುಭಾಶಯವು ದಿ. ೨೭-೩- ೬೨ರ ದಿನಾಂಕವನ್ನು ಹೊತ್ತು ಆ ಗ್ರಂಥದ ಕೊನೆಯಲ್ಲಿ ಪ್ರಕಟವಾಗಿದೆ.)

## ಸಮಕಾಲೀನ ಘಟನೆಗಳು

ಬುದ್ಧಿಜೀವಿಗಳ ದೀರ್ಘಕಾಲೀನ ಪತ್ರವ್ಯವಹಾರದಲ್ಲಿ ಸಮಕಾಲೀನ ಘಟನೆಗಳ ಪ್ರಸ್ತಾಪ ಮತ್ತು ಅವರ ಪ್ರತಿಕ್ರಿಯೆ ಬಂದೇ ಇರುತ್ತದೆ - ಸಾಕಷ್ಟು. ಪೈಗಳ ಪತ್ರಸಮುದಾಯದಲ್ಲಿ ಮಾತ್ರ ನಮಗೆ ಅದರ ಹೊಳಹು ಸಹಿತ ಇಲ್ಲವೆನ್ನುವಷ್ಟು ಕಡಿಮೆ ಇದೆ. ಭಾರತದ ಸ್ವಾತಂತ್ರ್ಯ. ಗಾಂಧೀಜಿಯ ಕಗ್ಗೊಲೆ - ಈ ಅಂಶಗಳು ಅವರ ಕವನಗಳಲ್ಲೇನೋ ಮರುಕಳಿಸಿವೆ. ಪತ್ರಗಳಲ್ಲಿ ಕಾಣಿಸಿಕೊಂಡಿರುವುದು - ಕರ್ನಾಟಕ ಪ್ರಾಂತರಚನೆಯ ೧೯೫೬ರ ಸಂದರ್ಭವೊಂದೇ.

ಪೈಗಳದು ತುಸು ಮುಂಗೋಪದ ಸ್ವಭಾವವು ವೆಂಕಟ್ರಾಯಾಚಾರ್ಯರಿಗೆ ಬರೆದ ಕೊನೆಯ ಪತ್ರದಲ್ಲಿ ಕಾಣಿಸಿಕೊಂಡದ್ದನ್ನು ನೋಡಿದ್ದೇವೆ. ನಮ್ಮ ಏಕೀಕರಣದ ಸಂದರ್ಭದಲ್ಲಿ ಮಾತ್ರ ಅವರಿಗೆ ಅಖಂಡ ಸಾತ್ವಿಕ ಸಂತಾಪವೇ ಉಕ್ಕಿ ಹರಿದಿದೆ:

All the world knows that the forthcoming new state of Karnataka has been most mercillessly deprived of the only name

ಕರ್ನಾಟಕ, which it should have rightly and rightfully had and has now been christened ಮಹಾ ಮೈಸೂರ್(!!!). I for one, however, refuse to accept this unseemly and unbecoming name and accordingly I shall deem it my conscious duty to refrain from associating with it that pertains to the new state or its new name. (೧೫ - ೯ - ೫೭ರ ಪತ್ರ).

ಹೊಸ ಪ್ರಾಂತನಿರ್ಮಾಣವು ಆದ ದಿನವೇ ಅವರು ಬರೆದ ಒಂದು ಪತ್ರದಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಲ್ಲದೆ, ಕಾಸರಗೋಡು ಕೈ ಬಿಟ್ಟದ್ದನ್ನು ಜ್ಞಾಪಿಸಿಕೊಂಡು "ನಮ್ಮ ತಾಯಿಜಿಲ್ಲೆಯ ಜೀವಮಾನದಲ್ಲಿ ಇದೊಂದು ಘೋರವಾದ ದುರ್ದಿನ" ಎಂದು ಪರಿತಪಿಸಿದ್ದಾರೆ.

ನಾಡಿನ ಏಕೀಕರಣವಾಯಿತೆಂದ ಮೇಲೆ ಅದಕ್ಕೊಂದು ನಾಡಗೀತೆ ಬೇಕಲ್ಲವೆ. ಜಿ. ಎನ್. ಲಕ್ಷ್ಮಣ ಪೈಗಳು ಅಂಥ ಗೀತೆಯೊಂದನ್ನು ರಚಿಸಿ, ಅದನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಶಿಫಾರಸು ಮಾಡಲು ಗೋವಿಂದ ಪೈಗಳನ್ನು ಕೇಳಿಕೊಂಡಾಗ, ಮೇಲಿನ ಅದೇ ಪತ್ರದಲ್ಲಿಯ ಅವರ ಪ್ರತಿಕ್ರಿಯೆ ಇದು:

Any such poem or any similar work of anyone else than a citizen of the Mysore State is never likely to have any chance of being adopted by the Parishat as its anthem.

ಆಗಿನ ಮೈಸೂರಿಗರ ಇಂಥ ಮನೋಭಾವದ ಬಗ್ಗೆ ಪೈಗಳಿಗೆ ಸಾಕಷ್ಟು ಬೇಸರ ಇದ್ದಿತು. ಹಾಗೂ ಹಳೆಯ ಮೈಸೂರಿನ ಸಾಹಿತಿಗಳಲ್ಲಿ ಮಾಸ್ತಿ, ವಿ. ಸೀ., ಎ. ಆರ್. ಕೃ., ರಾಜರತ್ನಂ ಮುಂತಾದ ಕೆಲವರನ್ನು ಬಿಟ್ಟರೆ ಅನೇಕರು ತಾವೇ ಶ್ರೇಷ್ಠರೆಂದು ಬೀಗುತ್ತಿದ್ದುದು ಪೈಗಳ, ಅದರಂತೆ ದ. ಕ. ಜಿಲ್ಲೆಯ ಇನ್ನೂ ಹತ್ತಾರು ಸಾಹಿತ್ಯಕರ ಗಮನಕ್ಕೆ ಬಂದುದೇ ಆಗಿತ್ತು.

**ಸಂಶೋಧನೆಯ ಅಂಶಗಳು**

ಅಭಿಪ್ರಾಯ, ಆಶೀರ್ವಾದಗಳೇ ಹೆಚ್ಚಾಗಿ ಇರುವ ಇಲ್ಲಿಯ ಪತ್ರಗಳಲ್ಲಿ ಕೆಲವಾದರೂ ಸಂಶೋಧನೆಯ ವಿಚಾರಗಳನ್ನು ಒಳಗೊಂಡಿದ್ದುದು ಈ ಸಂಕಲನದ ಮೌಲಿಕತೆಯನ್ನು ಹೆಚ್ಚಿಸುವುದಕ್ಕೆ ಕಾರಣವಾಗಿದೆ. ಈ ಅಂಶಗಳು ಬಿಡಿಬಿಡಿಯಾಗಿ ಕಂಡರೂ, ಸಂಶೋಧನ ಕ್ಷೇತ್ರದಲ್ಲಿ ಅವುಗಳಿಗೂ ಪ್ರಾಧಾನ್ಯವಿದೆ. ಮೊದಲ ಬಾರಿಗೆ ಸ್ಫುರಿಸಿದ ಯಾವುದೊಂದು ವಿಚಾರವಾಗಲಿ (Idea) ಬೇರೊಬ್ಬರು ಅಭಿಪ್ರಾಯಿಸಿದ್ದಕ್ಕೆ ತೋರಿದ ಪ್ರತಿಕ್ರಿಯೆಯಾಗಲಿ, ತನ್ನ ಅಂತಸ್ಸತ್ವದಲ್ಲಿ ಕಡಿಮೆ ಮಟ್ಟದ್ದೇನೂ ಅಲ್ಲ.

ಇನ್ನೊಂದು ಗಣನೀಯ ಅಂಶವೆಂದರೆ ಪತ್ರಗಳಲ್ಲಿ ಊಹನೆಯ ಕುದುರೆಯನ್ನು ಓಡಿಸುವುದಕ್ಕೆ ಹೆಚ್ಚು ಮುಕ್ತತೆ ಇರುತ್ತದೆ. ಸಾರ್ವಜನಿಕರಿಗೆ ಮುಕ್ತವಾದ ಸಂಶೋಧನ

ಲೇಖನಕ್ಕಾದರೋ ಆಧಾರ - ಪುರಾವೆಗಳು ಬೇಕು. ಇಲ್ಲಿ ಅವು ಇರಲೇಬೇಕೆಂದಿಲ್ಲ. ಆದರೆ ಈ ಊಹನಾತ್ಮಕ ನಿಲುಮೆಯೇ ಎಷ್ಟೋ ಸಲ ಸಂಶೋಧನೆಯತ್ತ ಕೊಂಡೊಯ್ಯುವುದು. ಹಾಗಲ್ಲದಿದ್ದರೂ, ಪತ್ರಾಂತರ್ಗತ ಸಂಶೋಧನ ವಿಚಾರಗಳು ಈಗಾಗಲೇ ಪ್ರಕಟವಾದ ತದ್ವಿಷಯಕ ಲೇಖನಗಳಿಗೆ ಪೂರಕವಾಗಿಯೂ ಪ್ರಯೋಜನಕ್ಕೆ ಬರುವುವು.

ಯಾರೊಬ್ಬ ಸಂಶೋಧಕರ ಸಂಶೋಧನಾ ವಿಧಾನ, ಅವರಿಗೆ ದೊರೆತಿರಬಹುದಾದ ಪ್ರೇರಣೆ ಮುಂತಾದ ಅಂಶಗಳೂ, ಅವರ ಪತ್ರಗಳಿಂದ ಒಮ್ಮೊಮ್ಮೆ ತಿಳಿದು ಬರುತ್ತದೆ. ಸಂಶೋಧನ ರಂಗದಲ್ಲಿ ಕೊಡು - ಪಡೆ, ಪರಸ್ಪರ ಸಹಾಯ ಸಾಕಷ್ಟು ಇರುತ್ತದೆ. ಆ ಅಂಶಗಳ ಸುಳಿವೂ ಪತ್ರ ಸಾಹಿತ್ಯದಲ್ಲಿ ಹಿನ್ನೆಲೆಯಾಗಿ ದೊರೆಯಬಲ್ಲುದು.

ಮೇಲಣ ಮಾತುಗಳು ಪೈ ಪತ್ರಗಳಿಗೆ ಹೆಚ್ಚು ಕಡಿಮೆ ಅನ್ವಯಿಸುತ್ತವೆ. ಆದರೆ ಅವಕ್ಕೆ ಇನ್ನೊಂದನ್ನು ಸೇರಿಸತಕ್ಕುದು. ಅದೆಂದರೆ ಸಂಶೋಧನ ವಿಚಾರದಲ್ಲಿ ತಮ್ಮಿಂದ ತಪ್ಪಾಗಿದ್ದರೆ, ಅದನ್ನು ಪ್ರಾಂಜಲವಾಗಿ ಒಪ್ಪಿಕೊಳ್ಳುವ ಮನೋಭಾವ ಹಾಗೂ ಅದರ ಹಿಂದಿನ ವಿನಯ. ಸಂಶೋಧಕರಲ್ಲಿ ಇರಬೇಕಾದ ಅತ್ಯವಶ್ಯಕವಾದ ಗುಣಧರ್ಮವಿದು. ಯಾವುದೇ ತಪ್ಪಾದಾಗ ಅದನ್ನು ಬಿಗುಮಾನದಿಂದ ಒಪ್ಪಿಕೊಳ್ಳುವುದೂ, ಯಾರಾದರೂ ಸಂಶೋಧನ ಸಂದೇಹವೆತ್ತಿದಾಗ, ತಮಗೆ ಅರೆಬರೆ ಗೊತ್ತಿದ್ದರೂ, ಎಲ್ಲ ಗೊತ್ತಿದ್ದವರಂತೆ ಆಢ್ಯತೆಯಿಂದ ಉತ್ತರಿಸುವುದೂ ಕೆಲವರ ಕ್ರಮ. ಇದು ಪೈಯವರ ಜಾಯಮಾನಕ್ಕೆ ಹಿಡಿಸಿದುದೇ ಅಲ್ಲ.

ಸಂಶೋಧನೆಯೆಂಬ ಅರಣ್ಯದಲ್ಲಿ ಪೈಯವರದು ಒಂಟಿ ಸಲಗದ ಸಂಚಾರ - ಎಂಬ ಶಿವರಾಮ ಕಾರಂತರ ಉಪಮೆ ಯಥಾರ್ಥವಾದದ್ದೇ. ಆದರೂ ಮೇಲೆ ಹೇಳಿದಂತೆ ಬೇರೆಯವರೊಡನೆ ವಿಚಾರ - ವಿನಿಮಯ ಮಾಡದೇ, ಮಾಹಿತಿ ಪಡೆಯದೇ ಏಕಸ್ವತಂತ್ರವಾಗಿ ಸಂಶೋಧನ ಕಾರ್ಯದಲ್ಲಿ ಮುಂದುವರಿಯುವುದು ಸಾಧ್ಯವಿಲ್ಲ. ಪೈಯವರು ಡಿ. ಎಲ್. ನರಸಿಂಹಾಚಾರ್, ಉಗ್ರಾಣ ಮಂಗೇಶರಾವ, ರಾಜರತ್ನಂ, ವೆಂ. ಭೀ. ಲೋಕಾಪೂರ, ಸದಾನಂದ ನಾಯಕ ಮೊದಲಾದವರೊಡನೆ ಹಾಗೆ ವ್ಯವಹರಿಸಿದ್ದರ ಹೊಳಹು ಪತ್ರಗಳಿಂದ ಸಿಕ್ಕುತ್ತದೆ. ಯಾವುದೊಂದು ವಿಷಯವನ್ನು ಇತರರು ಕೇಳಿದ್ದಾಗ, ತಮಗೆ ಉತ್ತರ ಗೊತ್ತಿಲ್ಲದಿದ್ದರೆ ಇನ್ನೊಬ್ಬ ವಿದ್ವಾಂಸರನ್ನು ಕೇಳಬೇಕೆಂದು ತಾವಾಗಿ ಪೈಗಳು ಸೂಚಿಸುತ್ತಾರೆ. (ಎಸ್. ಶ್ರೀಕಂಠಶಾಸ್ತ್ರಿಗಳನ್ನು ವಿಚಾರಿಸಬಹುದೆಂದು ಸಮೇತನಹಳ್ಳಿ ರಾಮರಾಯರಿಗೆ ಸೂಚಿಸಿದ್ದುದು). ಅದರಂತೆ ಉಗ್ರಾಣ ಮಂಗೇಶರಾಯರಿಗೆ, ಶಾಸನಗಳಿಗೆ ಸಂಬಂಧಿಸಿದ ಕೆಲವು ವಿವರಗಳು ಬೇಕಾದಾಗ, ಗೋವಿಂದ ಪೈಗಳು ತಾವಾಗಿ ಡಿ. ಎಲ್. ನರಸಿಂಹಾಚಾರ್ಯರಿಗೆ ಪತ್ರ ಬರೆದು ವಿವರಗಳನ್ನು ತರಿಸಿಕೊಂಡು, ಮರಳಿ ಅದನ್ನು ಉಗ್ರಾಣ ಮಂಗೇಶರಾಯರಿಗೆ ತಿಳಿಸಿದ ಬಗೆ ಗಮನಿಸುವಂತಿದೆ :

> This information I got from Mr. D. L. Narasimhacharya of Maharaja College of Mysore to whom I had referred that point when I found myself helpless as regards identifying him [ಅಂದರೆ ಬಾಹುಬಲಿಪಂಡಿತ]. (ದಿ. ೩೦. ೮. ೪೫ರ ಪತ್ರ).

ಅದೇ ಪತ್ರದಲ್ಲಿ, ಬಂದ "Mr. D. L. Narasimhacharya has promised to look up ನಯಕೀರ್ತಿ" ಎಂಬ ಮಾತೂ, "You have done well to write to Mr. D. L. Narasimhacharya" ಎಂದು ಉಗ್ರಾಣ ಮಂಗೇಶರಾಯರಿಗೆ (೨. ೯. ೪೫) ಬರೆದ ಮಾತೂ, ಪೈಗಳು ದೊ. ಲ. ನ. ಅವರ ವಿದ್ವತ್ತನ್ನು ಎಷ್ಟರ ಮಟ್ಟಿಗೆ ಆದರಿಸುತ್ತಿದ್ದರೆಂಬುದಕ್ಕೆ ಸಾಕ್ಷಿಯಾಗಿವೆ. ತಮ್ಮ ಸಂಶೋಧನದ ಹಾದಿಯಲ್ಲಿ ಸಂದೇಹ ಬಂದಾಗಲೆಲ್ಲ ಪೈಗಳು ಅವರನ್ನು ವಿಶೇಷವಾಗಿ ಕೇಳುತ್ತಿದ್ದರೆಂದು ಇದರಿಂದ ಧ್ವನಿತವಾಗುತ್ತದೆ.

ಪೈಗಳು ಈಗಾಗಲೇ ಬರೆದ, ಪ್ರಕಟಿತ ಲೇಖನಗಳಿಗೆ ಪೂರಕವಾಗಿರಬಹುದಾದ ಕೆಲವು ಅಂಶಗಳು ಈ ವರ್ಗದ ಪತ್ರಗಳಲ್ಲಿ ದೊರೆಯುತ್ತವೆ. ಉದಾ.ಗೆ ರನ್ನನನ್ನು ಕುರಿತ ಅವರ ಲೇಖನಗಳು. ಈ ಕವಿಯ ಬಗ್ಗೆ ಅವರ ಅಧ್ಯಯನ ೧೯೨೭ ರಷ್ಟು ಹಿಂದಿನದು. ಆ ವರ್ಷದ 'ಉದಯ ಭಾರತ'ದ ಎರಡು ಸಂಚಿಕೆಗಳಲ್ಲಿ ಗದಾಯುದ್ಧದ ರಚನಾಕಾಲವನ್ನು ಕ್ರಿ.ಶ. ೯೮೨ ಎಂದು ಗ್ರಹಿಸಿಕೊಂಡಿದ್ದರು. ಮುಂದೆ ೧೯೩೨ ರಲ್ಲಿ 'ದೇಶರಂಜನ' ಹಾಗೂ 'ಜಯಕರ್ನಾಟಕ'ಗಳಲ್ಲಿ ರನ್ನನ ಬಗ್ಗೆ ಇನ್ನಷ್ಟು ವಿಸ್ತಾರವಾಗಿ ವಿವೇಚನೆಮಾಡಿದ್ದರಲ್ಲಿ 'ಗದಾಯುದ್ಧ'ವು 'ಅಜಿತಪುರಾಣ'ದ ರಚನೆಯ ಎಂದರೆ ಕ್ರಿ.ಶ. ೯೯೩ರ ಅನಂತರವೇ ರಚಿತವಾಗಿರಬೇಕೆಂದು ತಮ್ಮ ನಿಲುವನ್ನು ಬದಲಿಸಿಕೊಂಡರು. ಅಲ್ಲದೆ ಅದರ ಅಂತಿಮ ಗಡುವು ೯೯೭ ಎಂದೂ (ತೈಲಪನ ಮರಣಕ್ಕಿಂತ ಮುಂಚೆ) ಗ್ರಹಿಸಿದ್ದಾರೆ. ಪುನಹ ಬದಲಾವಣೆ! ಈ ೯೯೭ಕ್ಕಿಂತಲೂ ಮುಂದೆ, ಎಂದರೆ ತೈಲಪನ ಮಗನ ಕಾಲಕ್ಕೆ 'ಗದಾಯುದ್ಧ'ವು ರಚಿತವಾಗಿಬೇಕೆಂದು ಅವರಿಗೆ ಮನವರಿಕೆಯಾಗಿದ್ದ ಕಾಲದಲ್ಲಿ ವೆಂ. ಭೀ. ಲೋಕಾಪುರರ ಇದೇ ನಿಲುಮೆ ಪ್ರಕಟವಾಯಿತು. ಅವರ ಪ್ರಕಾರ ಗದಾಯುದ್ಧದ ರಚನಾವಧಿಯ ಕಾಲ ಕ್ರಿ.ಶ. ೧೦೦೫ - ೧೦೦೮. ಆಗ ಪೈಗಳ ನಿಲುಮೆಗೆ ಗಟ್ಟಿತನ ಬಂದಂತಾಗಿ, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಇತ್ತ ಉಪನ್ಯಾಸದಲ್ಲಿ ಹಾಗೆಂದು ಅಭಿಪ್ರಾಯಿಸಿದ್ದಾರೆ.

ಲೋಕಾಪುರ - ಪೈಗಳ ಪತ್ರವ್ಯವಹಾರದ ನಿಮಿತ್ತದಿಂದ, ಕೊಂಕಣ ಶಿಲಾಹಾರ ರಾಜನಾದ ಅಪರಾದಿತ್ಯ ಹಾಗೂ ಪಶ್ಚಿಮ ಚಳುಕ್ಯ ಚಕ್ರವರ್ತಿದ್ವಯ ತೈಲಪ - ಸತ್ಯಾಶ್ರಯ ಇವರುಗಳ ನಡುವಣ ಸಂಬಂಧ ಮತ್ತು ಸಂಘರ್ಷಗಳು ಚಿತ್ರಿತವಾಗಿವೆ. ಆ ಬಗ್ಗೆ ಪೈಯವರು ಪ್ರತ್ಯೇಕ ಲೇಖನವನ್ನು ಬರೆದಿಲ್ಲ. ಶಿಲಾಹಾರರ ಇಲ್ಲವೆ ಕಲ್ಯಾಣ ಚಾಲುಕ್ಯರ ಬಗ್ಗೆ ಅಧ್ಯಯನ ನಿರತರಾದವರು ಈ ಪತ್ರಗಳಲ್ಲಿಯ ವಿಚಾರಗಳನ್ನು ಗಮನಿಸಬೇಕಾಗುವುದು.

ಹಾಗೆಯೇ 'ತೀರ್ಥಕ - ತೀರ್ಥಂಕರ' ಪದಗಳು, ಉಡುಪಿ ಶಬ್ದದ ಮೂಲ, 'ಯಕ್ಷಗಾನ'ದ ಯಕ್ಷ ಶಬ್ದದ ಜನಾಂಗವಾಚಿತ್ವ, 'ಧರ್ಮಭೂಷಣ' ಬಿರುದು, ನಾಲ್ಕನೆಯ ನಾಗವರ್ಮ ಇವೇ ಮುಂತಾದ ಬಿಡಿ ಅಂಶಗಳು ಪತ್ರಗಳಲ್ಲಿ ಪ್ರಸ್ತಾಪಗೊಂಡಿವೆ: ಈ ಬಗ್ಗೆ ಪೈಯವರ ವಿಚಾರಲಹರಿ (ನಿರ್ಣಯಗಳಲ್ಲ) ಏನೆಂಬುದನ್ನು ತಿಳಿಯುತ್ತದೆ.

ಇದೊಂದು ಬದಿಯ ಮಾತು. ಉಗ್ರಾಣ ಮಂಗೇಶರಾಯರೂ ವೆಂ.ಭೀ. ಲೋಕಾಪುರರೂ ಬರಿಯೆ ಶಾಲಾ ಮಾಸ್ತರರು. ಅವರು ತಕ್ಕ ಮಟ್ಟಿಗೆ ಸಾಹಿತ್ಯಾಭ್ಯಾಸಿಗಳೂ ಹೌದೆಂದು ಸ್ಥಳಿಕರಿಗೆ, ನೆರೆಯವರಿಗೆ ಮಾತ್ರ ಗೊತ್ತು. ಅವರುಗಳು ವಿದ್ವಾಂಸರೂ ಸಂಶೋಧಕರೂ ಆಗಿದ್ದರೆನ್ನುವುದು ಇಲ್ಲಿಯ ಪತ್ರಗಳಿಂದಲೇ ನಮಗೆ ಮನದಟ್ಟಾಗುವುದಲ್ಲವೆ.

**ಸ್ವಭಾವ ದರ್ಶನ**

ಪೈಗಳ ಸ್ವಭಾವ ವಿಶೇಷತೆಗಳಾದ ಲೆಕ್ಕಾಚಾರ, ಪ್ರಸಿದ್ಧಿ ವಿಮುಖತೆ ಮೊದಲಾದುವು ಈಗಾಗಲೇ ಪರಿಚಿತ. ಇಲ್ಲಿಯ ಪತ್ರಗಳಿಂದ ಅವಕ್ಕೆ ಪುಷ್ಟಿ ಇಲ್ಲವೆ ಹೊಸ ಅಂಶಗಳು ದೊರೆಯುವವೊ ಹೇಗೆಂಬುದನ್ನು ನೋಡೋಣ.

ಅಂಚೆ ವೆಚ್ಚದ ಲೆಕ್ಕಾಚಾರವು ಕೆಲವು ಪತ್ರಗಳಲ್ಲಿ ಕಾಣಿಸಿಕೊಂಡಿದೆ. ಅಗತ್ಯಕ್ಕಿಂತ ಹೆಚ್ಚು ಹಣವನ್ನು ಯಾರಾದರೂ ಅಂಚೆ ಚೀಟುಗಳಿಗಾಗಿ ವೆಚ್ಚ ಮಾಡಿದಲ್ಲಿ, ಪೈಗಳು ಮೊದಲಿಗೆ ಅದನ್ನೆ ಪ್ರಸ್ತಾಪಿಸುತ್ತಿದ್ದರು. ಮುನಿಪಾಲ ರಾಜು ಅವರು ಒಂದು ಪುಸ್ತಕವನ್ನು ಪೈಗಳಿಗೆ ಕಳಿಸುವಾಗ ೧೧ ಆಣೆಯ ಸ್ಟಾಂಪ್ ಹಚ್ಚಿದ್ದರಂತೆ (ಇದು ೧೯೫೨ ರಲ್ಲಿ ). ಪೈಗಳು ಆ (ಚಿಕ್ಕ ಗಾತ್ರದ?) ಪುಸ್ತಕವನ್ನು ಅಂಗೈಯಲ್ಲಿಯೆ ತೂಗಿನೋಡಿರಬೇಕು! ಮೂರು ಆಣೆಯದು ಸಾಕಿತ್ತು - ಎನಿಸಿತು. ಹಾಗೆ ಬರೆದರು. 'ಇನ್ನಾದರೂ ನೆನಪಿರಲಿ' ಎಂಬ ಎಚ್ಚರದ ನುಡಿ ಬೇರೆ! ಇದೇನೂ ಜಿಪುಣರ ಲೆಕ್ಕಾಚಾರವಲ್ಲ. ಹಣ ಯಾರದಾದರೇನಂತೆ, ಅದು ಪೋಲಾಗಬಾರದು ಎಂಬುದು ಅದರ ಆಶಯ. (ಅದನ್ನೆ ಕೆಲವರು national waste ಎಂಬ ಗಂಭೀರವಾದ ಶಬ್ದದಿಂದ ಎತ್ತಿ ತೋರಿಸುವುದುಂಟು.)

ಅದರಂತೆ ತಮ್ಮಿಂದ ಉತ್ತರವನ್ನು ಅಪೇಕ್ಷಿಸುವವರು, ಅದಕ್ಕೆಂದು ಅಂಚೆ ಚೀಟನ್ನು ಇರಿಸುವುದೂ ಅವರ ಸ್ವಭಾವಕ್ಕೆ ಒಗ್ಗದು. ಆದರೆ ಸ್ವತಹ ತಾವು ಇನ್ನೊಬ್ಬರಿಂದ ಉತ್ತರವನ್ನು ಅಪೇಕ್ಷಿಸಿದ್ದರೆ, ಒಮ್ಮೊಮ್ಮೆ ಹಾಗೆ ಮಾರುತ್ತರದ ಕಾರ್ಡನ್ನೊ, ಅಂಚೆ ಚೀಟನ್ನೊ (ಪುಸ್ತಕ ಬೇಕಿದ್ದರೆ) ಇರಿಸುತ್ತಿದ್ದರು! ಇನ್ನು ಪುಸ್ತಕವನ್ನು ತಾವೇ ಇಟ್ಟುಕೊಳ್ಳುವುದಿದ್ದರೆ, ಅದರ ಬೆಲೆಯನ್ನು ಸಂಬಂಧ ಪಟ್ಟವರಿಗೆ ಮುಟ್ಟಿಸಲು ಹಾತೊರೆಯುತ್ತಿದ್ದರು. ಕೈಲಾಸಂ ಅವರ ಮೂರು ನಾಟಕ ಪುಸ್ತಕಗಳನ್ನು ರಾಜರತ್ನಂ ಕಳಿಸಿದಾಗ "Between ourselves would you kindly permit me to remit their price to you? please do not resent." (೧೨ - ೧೨- ೧೯೪೬) ಎಂದು ಕೇಳಿಕೊಂಡರು. ರಂ.ಶ್ರೀ. ಮುಗಳಿ ಯವರ ಕನ್ನಡ ಸಾಹಿತ್ಯ ಚರಿತ್ರೆಯ ಒಂದು ಹೆಚ್ಚಿನ ಪ್ರತಿ ನನ್ನಲ್ಲಿದ್ದುದನ್ನು ಪೈಗಳಿಗೆ ನಾನಾಗಿ ಕಳುಹಿಸಿದ್ದೆ. (ಮೊದಲ ಆವೃತ್ತಿಯದು). "ಇಲ್ಲಿಯ ಬೆಲೆ ೮ ರೂ. ಈಗಣ ದಿನಗಳಲ್ಲಿ ಅದೊಂದು ಗಂಟು ತಾನೇ. ಆ ಹಣವನ್ನು ನಿಮಗೆ ಕಳಿಸಬೇಕೊ?" ತಿಳಿಸಬೇಕಾಗಿ ಬರೆದರು. ನಾನು ಅದಕ್ಕೆ ಉತ್ತರಿಸಲಿಲ್ಲ. ಈ ಎರಡು ಸಂದರ್ಭಗಳಲ್ಲಿ ನಮ್ಮವಲ್ಲದ ಪುಸ್ತಕಗಳನ್ನು ಕಳಿಸಿದ್ದರಿಂದಲೇ ಪೈಗಳು ಹಣದ ಮಾತನ್ನು ಎತ್ತಿದ್ದರೆಂಬುದನ್ನು ಗಮನಿಸಬೇಕು.

ಪೈಗಳ ಪ್ರಸಿದ್ಧಿ ವಿಮುಖತೆಯು ಹೆಚ್ಚಾಗಿ ಬೆಳಕಿಗೆ ಬಂದದ್ದು ಪತ್ರಗಳ ಮೂಲಕವೇ. ಸಭೆ-ಸಮಾರಂಭಗಳಲ್ಲಿ ಸನ್ಮಾನ ಹೊಂದುವ ಹಾಗೂ ಸ್ವಂತ ಕೃತಿಗಳನ್ನು ಪ್ರಕಟಿಸುವ ವಿಚಾರವಾಗಿ ಅವರು ಈ ಮನೋಭಾವವನ್ನು ವ್ಯಕ್ತಪಡಿಸಿದ್ದು, ಇಂಥ ಪ್ರಸಿದ್ಧಿ ವಿಮುಖತೆಯೇ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದೆ! ಆದಾಗ್ಯೂ ಅದರ ಕೆಲವು ಒಳಪದರುಗಳನ್ನು ಗಮನಿಸುವುದೊಳಿತು. ಸನ್ಮಾನಾದಿಗಳು ಅವರಿಗೆ ಜಾತ್ಯತಃ ಬೇಡಾಗಿದ್ದುವೆಂಬುದು ಶತಸ್ಸಿದ್ಧವಾದ ಮಾತು. ಈ ಬಗೆಯ ಕೇಳಿಕೆಗಳು ಮತ್ತೂ ಮತ್ತೂ ವ್ಯಕ್ತವಾದಾಗ ಅವರಿಗೆ ಜಿಗುಪ್ಸೆಯೇ ಮೂಡಿರಬೇಕು. ಅದಕ್ಕೇನೆ "ನೀವು ಕೊಡುವ ಸನ್ಮಾನ ಪತ್ರವನ್ನು ತೂಗು ಹಾಕಲಿಕ್ಕೆ ನಮ್ಮ ಮನೆಯ ಗೋಡೆಯಲ್ಲಿ ಜಾಗವೇ ಇಲ್ಲ" ಎಂಬ ಅಣಕದ ನುಡಿಯೂ ಒಂದು ಪತ್ರದಲ್ಲಿ (೨೪-೯-೫೮) ಕಾಣಿಸಿಕೊಂಡಿದೆ. (ಮೈಸೂರು ವಿಶ್ವವಿದ್ಯಾನಿಲಯದವರ ಗೌರವ ಡಾಕ್ಟರೇಟ್ ಪದವಿಯ ಸೂಚನೆ ಬಂದಾಗ ನಿರಾಸಕ್ತಿಯ ಪರಮಾವಧಿಯನ್ನು ತೋರಿಸಿದ್ದಾರೆ.). ಮಾನಪತ್ರವೆಂಬುದು ಅವರ ದೃಷ್ಟಿಯಲ್ಲಿ ಒಂದು 'ಹಳೆಯ ಉಪಚಾರ'. "ಆ ತಕ್ಕ ಪ್ರೀತಿ, ಆದರ ನಮ್ಮ ನಮ್ಮ ಮನಸ್ಸಿನಲ್ಲಿ ಇದ್ದರೇ ಅದೇ ಹೆಚ್ಚು" ಎಂದು ಸಮಾಧಾನ ಹೇಳಿದ್ದಾರೆ.

ಇದೆಲ್ಲಾ ತಮಗೆ ಸಲ್ಲ ಬಯಸಿದ್ದ ಸನ್ಮಾನಕ್ಕೆ ಸರಿಹೊಂದುತ್ತದೆ. ಅವರೆ ಬೇರೆಯವರಿಗೆ ಸನ್ಮಾನ ಮಾಡುವುದಿದ್ದಲ್ಲಿ? ಅದು ಮಾತ್ರ ಆಗತಕ್ಕದ್ದೇ, ಅಂತೆ! ಶಿವರಾಮ ಕಾರಂತರಿಗೆ ಸತ್ಕಾರ ಮಾಡುವ ಪ್ರಸ್ತಾಪ ಬಂದಾಗ ಪೈಗಳು ಬರೆಯುತ್ತಾರೆ:

> ಶ್ರೀ ಶಿವರಾಮ ಕಾರಂತರಿಗೆ ಇಂಥಾ ಗೌರವಗಳು ಬೇಕಾಗಿಲ್ಲ. ಅವರ ಕೃತಿಗಳೇ ಅವರಿಗೆ ಪ್ರತ್ಯಕ್ಷ ಗೌರವ. ಆದರೆ ಲೋಕರೂಢಿ ಎಂದು ಇದೆಯಷ್ಟೇ. ಆ ಮೇರೆಗೆ ಅವರನ್ನು ಗೌರವಿಸಬೇಕು; ಗೌರವಿಸಲೇಬೇಕು.

ಅಂತೂ ಆ ಲೋಕರೂಢಿಯನ್ನು ತಮಗೆ ಅನ್ವಯಿಸಿಕೊಳ್ಳಲು ಪೈಗಳು ಸಿದ್ಧರಿದ್ದಿಲ್ಲ! ಹಾಗೂ ಅಂಥ ಪ್ರಸಂಗಗಳನ್ನು ವಿನಯ ಮಿಶ್ರಿತ ಹಟದಿಂದ ದೂರವಿರಿಸುತ್ತಿದ್ದರು.

ಆದರೆ ಸ್ವಜನಪರವಾದ ದಾಕ್ಷಿಣ್ಯದಿಂದಾಗಿ ಇನ್ನು ಹಲವು ಪ್ರಸಂಗಗಳಲ್ಲಿ ಈ ಹಟವು ಹಿಂದೇಟು ಹಾಕಿದ್ದಿದೆ. ಅವರು 'ಆಸ್ಥಾನ ಕವಿ' ಎಂದು ಮದ್ರಾಸ ಸರಕಾರದಿಂದ ಸನ್ಮಾನಿತರಾದಾಗ, ಮುಂಬಯಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಒಪ್ಪಿಕೊಂಡಾಗ, ಈ ದಾಕ್ಷಿಣ್ಯದ್ದೇ ಮೇಲುಗೈಯಾಗಿದ್ದಿತು. ಇನ್ನೊಂದು ದಾಕ್ಷಿಣ್ಯದ ಪ್ರಸಂಗ ಇಲ್ಲಿಯ ಪತ್ರಗಳಿಂದ ಹೊರಹೊಮ್ಮಿದೆ. ಬ್ರಹ್ಮಾವರದ ಕರ್ನಾಟಕ ಸಂಘದವರು (ಬೈಕಾಡಿ ವೆಂಕಟಕೃಷ್ಣರಾಯರ ನೇತೃತ್ವದಲ್ಲಿ) 'ಅಜಪುರ'ವೆಂಬ ಪುಸ್ತಕವನ್ನು ಪೈಗಳಿಗೆ ಅರ್ಪಿಸಲು ನಿರ್ಧರಿಸಿದ್ದಲ್ಲದೆ, ಆಮಂತ್ರಣ ಪತ್ರವನ್ನು ಮುದ್ರಿಸಿಯೂ ಬಿಟ್ಟರು - ಪೈಗಳ ಪೂರ್ವಾನುಮತಿ ಪಡೆಯದೇ. ಆಗ ಪೈಗಳು ದಾಕ್ಷಿಣ್ಯಕ್ಕೆ ಒಳಗಾದ ಬಗೆ ಇಂತಿದೆ :

> ಸ್ವಾಮೀ, ಒಂದು ಕಡೆ ಯಾವ ಗೌರವವೂ ನನಗೆ ಬೇಡವೆಂದು ನನ್ನಷ್ಟಕ್ಕೆ ಸುಮ್ಮನಿರುವ ನನ್ನ ಅಪೇಕ್ಷೆ. ಮತ್ತೊಂದು ಕಡೆ, ಈ ಯೋಜನೆಯಲ್ಲಿ ಇಷ್ಟರೊಳಗೆ

ನೀವು ಎಷ್ಟು ಮುಂದೆ ಸಾಗಿರಬೇಕು? ಈಗ ನಾನು ಹಿಮ್ಮೆಟ್ಟಿಸುವೆನಾದರೆ ನೀವು ಎಷ್ಟು ತ್ರಾಸ ಹೊಂದಬೇಕು? - ಎಂದು ನನ್ನನ್ನು ಮನಗುಂದಿಸುವ ಚಿಂತೆ. ಇವೆರಡರ ಬಿಕ್ಕಟ್ಟಿನಿಂದ ಹೊರಹೊಮ್ಮುವರೆ ಬಗೆ ತೋರದೆ ನಿರುಪಾಯನಾಗಿ..... ಗ್ರಂಥಾರ್ಪಣವನ್ನು ಒಪ್ಪಿಕೊಳ್ಳುತ್ತೇನೆ. (೧೪ - ೭- ೧೯೬೧ರ ಪತ್ರ)

ಆ ನಿರುಪಾಯತೆ ಅಷ್ಟಕ್ಕೇ ಮುಗಿಯಲಿಲ್ಲ! ತಮಗೆ ಅರ್ಪಿತವಾಗಲಿರುವ ಆ ಗ್ರಂಥದಲ್ಲಿ ಅವರದೇ ಕವಿತೆಯನ್ನೂ ಪ್ರಕಟಿಸುವ ಸಂಪಾದಕರ ಸೂಚನೆಗೂ ಪೈಗಳು ತಲೆವಾಗಿ, ಕವಿತೆಯೊಂದನ್ನು ಕಳಿಸಿಕೊಟ್ಟರು. (ಜೊತೆಗೆ ಈ ಕುರಿತ ಆಭಾಸವನ್ನು ಎತ್ತಿ ತೋರಿಸಿದರು.) ಇದಲ್ಲವೆ, ದಾಕ್ಷಿಣ್ಯದ ಪರಮಾವಧಿ! ಬೈಕಾಡಿ ವೆಂಕಟಕೃಷ್ಣರಾಯರ ಬಗ್ಗೆ ಇದ್ದ ಅವರ ಅನೂನವಾದ ಸದ್ಭಾವವೇ ಈ ದಾಕ್ಷಿಣ್ಯಪರತೆಯ ಹಿನ್ನೆಲೆಯಾಗಿದೆ.

ಸನ್ಮಾನವಲ್ಲದಿದ್ದರೂ ಪೈಗಳು ಸಭೆಸಮಾರಂಭಗಳಲ್ಲಿ ಹಾಗೇನೆ ಭಾಗವಹಿಸಿದ ಪ್ರಸಂಗಗಳಾದರೂ ತೀರ ಕ್ವಚಿತ್ತಾಗಿ ಇವೆಯಷ್ಟೆ. ಅದರ ಕಾರಣಗಳು ನಮಗೆ ಒಂದು ಪತ್ರದಲ್ಲಿ ದೊರೆಯುತ್ತವೆ. ಹಾಗೆ ಭಾಗವಹಿಸಿದಾಗ, ಇಡೀ ಕಾರ್ಯಕ್ರಮ ಮುಗಿಯುವ ವರೆಗೆ ಗಂಟೆಗಟ್ಟಲೆ ಸುಮ್ಮನೆ ಕೂತಿರಬೇಕಲ್ಲವೆ. ಅದು ಅವರಿಗೆ ಒಗ್ಗದ ವಿಷಯವಾಗಿತ್ತು. ದಿ. ೮- ೧- ೫೭ರಂದು ಬರೆದ ಪತ್ರದಲ್ಲಿ "ನನ್ನ ಭಾಷಣದ ದಿನ ಬೇರೆ ಯಾವ ಕೆಲಸವನ್ನೂ ಇಟ್ಟುಕೊಳ್ಳಬಾರದು. ಯಕ್ಷಗಾನ ತಾಳ - ಮದ್ದಳೆ ಅದು ಇದು, ಏನೂ ಇರಬಾರದು. ನನ್ನ ಭಾಷಣವನ್ನು ಹೊತ್ತುಂಟೇ ಮುಗಿಸಿ ನನ್ನನ್ನು ತಮ್ಮಲ್ಲಿಂದ ಹೊರಡಿಸಬೇಕು" ಎಂದು ಕೇಳಿಕೊಂಡಿದ್ದಾರೆ. (ಇಷ್ಟಕ್ಕೂ ಅವರದ್ದು ಬರೆದು ತಂದ ಭಾಷಣವೇ ಇರುತ್ತಿತ್ತು - ಅಂಥ ಪ್ರಸಂಗಗಳಲ್ಲಿ). 'ಬಹುಜನೀನವಾದ ಸಭೆಗಳಲ್ಲಿ ಭಾಗಿಯಾದರೆ ಕೆಲ ತಾಸುಗಳ ವರೆಗೆ ಕೂತಲ್ಲೇ ಕೂರಬೇಕಾಗುವ ದಂಡನೆಯನ್ನು ಅನುಭವಿಸ ಬೇಕಾಗುವುದೆಂದು,' ಅವರು ಇನ್ನೊಂದು ಪತ್ರದಲ್ಲಿ ಹೇಳಿಬಿಟ್ಟಿದ್ದಾರೆ. (೬- ೧೧- ೫೩ರ ಪತ್ರ).

ಇಂಥ ಪ್ರಸಂಗಗಳಿಂದ ತಪ್ಪಿಸಿಕೊಳ್ಳಲು, ವೃದ್ಧಾಪ್ಯದ ಅನಾರೋಗ್ಯದ ಕಾರಣವು ಪ್ರಯೋಜನಕಾರಿಯಾಗಿದ್ದಿತು. (ಅದೇನು ನೆಪವಲ್ಲ) ಮೈಸೂರಿನ ಯಾವುದೋ ಒಂದು ಸಮ್ಮೇಳನದಲ್ಲಿ ಭಾಗವಹಿಸಲು ಕರೆ ಬಂದಾಗ, ಪೈಗಳು ಅದರಿಂದ ಜಾರಿಕೊಂಡದ್ದು ಹೀಗೆ !:

ನಿಮ್ಮ ಸಮ್ಮೇಳನದ ಅಧಿವೇಶನ ಹೊತ್ತು, ನಮ್ಮಲ್ಲಿ ಮಳೆ ಹುಯ್ಯಲು ತೊಡಗುವ ಹೊತ್ತು - ಸೂಜಿ ಮುತ್ತಾಗಿ ಒಂದೇ ಆಗುತ್ತದೆ... ಹೊರಹೊಮ್ಮಲಿಕ್ಕೆ ಈ ಪ್ರಾಯದಲ್ಲಿ ಮನಸ್ಸು ಅಳುಕುತ್ತದೆ. (೨೩ - ೫- ೫೫ ರ ಪತ್ರ)

ಇತ್ತ ತಮ್ಮ ಕೃತಿಗಳ ಮರುಪ್ರಕಟನೆಯನ್ನು ಅವರು ಉದ್ದಕ್ಕೂ ನಿರಾಕರಿಸುತ್ತ ಬಂದದ್ದರ ಹಿನ್ನೆಲೆ ಏನಿರಬಹುದೆಂಬುದನ್ನು ನೋಡೋಣ. ಸ್ವಾಂತಸ್ಸುಖಾಯ ಕವನಿಸಿದ ಮೇಲೆ ಅಥವಾ ಚಿಕಿತ್ಸಕ ಮನೋವೃತ್ತಿಯನ್ನು ಸಂಶೋಧನ ಲೇಖನಗಳ ಮೂಲಕ ತೃಪ್ತಿಪಡಿಸಿಯಾದ ಮೇಲೆ ಮುಗಿಯಿತಲ್ಲ - ಆ ಕೆಲಸ. ಮತ್ತೇಕೆ ಅದರ ಗೊಡವೆ ಎಂದು ಇರಬಹುದೆ? ಇಲ್ಲವೆ ಈ ಮರುಪ್ರಕಟನೆ ಅದೊಂದು ಬಗೆಯ ಆತ್ಮಪ್ರಶಂಸೆ ಇಲ್ಲವೆ ವ್ಯಾವಹಾರಿಕ ಕೆಲಸವಾಗುವುದೆಂದು

ಬಗೆದರೆ? 'ಗಿಳಿವಿಂಡು' ಕೃತಿಯ ಮೊದಲ ಮುದ್ರಣಕ್ಕೇನೆ ಅವರು ಹಾಕಿದ (ಅ) ಅದು ಪಠ್ಯ ಪುಸ್ತಕವಾಗಬಾರದು ಮತ್ತು (ಆ) ೨೫೦ ಕ್ಕಿಂತ ಹೆಚ್ಚು ಪ್ರತಿಗಳನ್ನು ಮುದ್ರಿಸಬಾರದು ಎಂಬ ಕರಾರುಗಳ ಹಿನ್ನೆಲೆಯನ್ನೂ ಇಲ್ಲಿ ಗಮನಿಸತಕ್ಕದು. 'ಗಿಳಿವಿಂಡು' ಇದರ ಎರಡನೆಯ ಆವೃತ್ತಿಯನ್ನು ರಾಜರತ್ನಂ ಹೊರತರಬೇಕೆಂದಿದ್ದಾಗ, ಅದರಲ್ಲಿ 'ಸಾಹಿತ್ಯಜ್ಞರ ಆತ್ಮಕಥನ' ದಲ್ಲಿಯ ಆತ್ಮವೃತ್ತಾಂತವನ್ನು ಸೇರಿಸ ಬಯಸಿದರು. ಆಗ "It is more or less a writing of self - praise. I don't like such things" ಎಂದು ಹೇಳಿ ನಿಷೇಧಿಸಿಬಿಟ್ಟರು. ಆದಾಗ್ಯೂ ಈ ಹಿಂದೆ ಹೇಳಿದ್ದಂತೆ ಅದರ ಮರುಮುದ್ರಣದ ವಿಚಾರವಾಗಿ ಅವರು ತೋರಿದ ಸಕ್ರಿಯವಾದ ಆಸ್ಥೆ, ಮುದ್ರಣಕ್ಕೆ ಸಂಬಂಧಿಸಿದ ಅತಿ ಸಣ್ಣ ಪುಟ್ಟ ಅಂಶಗಳಿಗೂ ಅವರು ಗಮನಕೊಟ್ಟು ಸೂಚನೆಗಳ ಮೇಲೆ ಸೂಚನೆಗಳನ್ನು - ಅದೂ, ಅವರು ಸಾಹಿತ್ಯಕ ಸನ್ಯಾಸವನ್ನು ತೊಡೆದಿದ್ದ ಇಳಿವಯದಲ್ಲಿ (೧೯೬೦) ರಾಜರತ್ನಂರಿಗೆ ಕೊಡ್ತಾ ಇದ್ದದ್ದು ಅಚ್ಚರಿಯ ವಿಷಯವಾಗಿದೆ. ಆ ಸೂಚನೆಗಳನ್ನು ನೋಡಿದಲ್ಲಿ, ತಮ್ಮ ನಿರೀಕ್ಷೆಯ ಮಟ್ಟಕ್ಕೆ ಇತರರು ತಮ್ಮ ಗ್ರಂಥಗಳನ್ನು ಹೊರತರಲಿಕ್ಕಿಲ್ಲ ಎಂಬ ಶಂಕೆ ಗೋವಿಂದ ಪೈಗಳಿಗೆ ಇದ್ದಿರಬೇಕು ಎನಿಸುತ್ತದೆ.

ಆದಾಗ್ಯೂ ಅಮ್ಮೆಂಬಳ ಶಂಕರನಾರಾಯಣ ನಾವಡರು, ಮುಂಬಯಿಯ ಕೆಲವರು, ಕು. ಶಿ. ಹರಿದಾಸ ಭಟ್ಟರು, ಸ್ವತಃ ಅವರ ತಮ್ಮನ ಮಗ ತುಕಾರಾಮ ಪೈಗಳು ಕೇಳಿದ್ದಾಗಲೂ ಅವರು ಒಪ್ಪಿಗೆ ಕೊಟ್ಟಿರಲಿಲ್ಲ. ಈ ಕುರಿತ ಅವರ ಒಟ್ಟಿನ ನಿಲುವು ಹೀಗಿದ್ದಿತು :

> ಅವನ್ನು ನನ್ನ ಜೀವಂತ ಕಾಲದಲ್ಲೇ ಪುಸ್ತಕರೂಪದಲ್ಲಿ ಬರಮಾಡಿಕೊಳ್ಳಬೇಕೋ ಅಥವಾ ನನ್ನ ಬಳಿಕ ಅವು ಪ್ರಕಟವಾದರೆ ಲೇಸೋ ಎಂದು ನನ್ನಲ್ಲೇ ವಿಚಾರಿಸಿ ನೋಡಿ ಯಾವೊಂದು ನಿಶ್ಚಯಕ್ಕೆ ಬಂದ ಮೇಲೆ ನೋಡೋಣ ಎಂದು ಆ ಪ್ರಸಂಗವನ್ನು ಈಗ ಅಲ್ಲಿಗಲ್ಲಿಗೆ ಮಡಗಿಸಿರುತ್ತೇನೆ.

ಕೊನೆಗೊಮ್ಮೆ ಈ ಕಿರಿಕಿರಿಗೆ ಬೇಸತ್ತೋ ಏನೊ ತಮ್ಮ ಬರಹಗಳೆಲ್ಲದರ ಸ್ವಾಮಿತ್ವವನ್ನು ಮೈಸೂರಿನ ಕಾವ್ಯಾಲಯ ಪ್ರಕಾಶಕರಿಗೆ ಒಪ್ಪಿಸಿ ಕೈತೊಳೆದುಕೊಂಡರು.*

## ಮುಪ್ಪಿನ ಕಾಲದ ಪೈಗಳು

ಮೊದಲೇ ಹೇಳಿದಂತೆ ಇಲ್ಲಿಯ ಪತ್ರಗಳಲ್ಲಿ ಹೆಚ್ಚಿನವು ಅವರ ಅಪರ ವಯಸ್ಸಿನಲ್ಲಿ ಬರೆದವುಗಳು. ಆಗಿನ ಅವರ ಅನಾರೋಗ್ಯದ ಪ್ರಸ್ತಾಪವು ಪತ್ರಗಳಲ್ಲಿ ಮೇಲಿಂದ ಮೇಲೆ ಬಂದಿದೆಯಾದ್ದರಿಂದ ಈ ಕುರಿತು ಕೆಲ ಅಂಶಗಳನ್ನು ಎತ್ತಿಕೊಳ್ಳೋಣ.

---

* ಇದಾದ ಮೇಲಿನ, ನನಗೇ ಸಂಬಂಧಿಸಿದ ಘಟನೆಯನ್ನು ಮತ್ತೆ ಇಲ್ಲಿ ಹೇಳಬೇಕು. 'ಗೋವಿಂದ ಪೈ ವಾಙ್ಮಯ ದರ್ಶನ'ಕ್ಕಾಗಿ ಅವರ ಬರಹಗಳನ್ನು ನೋಡಿ ಟಿಪ್ಪಣಿ ಮಾಡಿಕೊಳ್ಳಲೆಂದು ಅವರ ಮನೆಗೆ ಹೋದೆ (೧೯೬೧). ಅದು ತಮ್ಮ ಪ್ರಶಂಸೆ ಮಾಡುವ ಒಂದು 'ಒಳಸಂಚು' ಎಂದೇ ಬಗೆದರು! 'ಇದು ಕೇವಲ ನಿಮ್ಮ ವಾಙ್ಮಯವನ್ನು ಪರಿಚಯಿಸುವ ಕೆಲಸ' ಎಂದು ಮತ್ತೆ ಮತ್ತೆ ನಾನು ಹೇಳುತ್ತಿದ್ದಾಗ "ನಾನು ಸತ್ತ ಮೇಲೆ ಏನೂ ಮಾಡಿಕೊಳ್ಳಿ. ಈಗಂತೂ ನನ್ನಲ್ಲಿ ಏನೂ ಇಲ್ಲ. ಚೀಲದಲ್ಲಿ ತುಂಬಿ ಮೈಸೂರಿಗೆ ಸಾಗಿಸಿಬಿಟ್ಟಿದ್ದೇನೆ" ಎಂದರು!

ಕ್ರಿ.ಶ. ೧೯೫೦ರಲ್ಲಿ ಸಮ್ಮೇಳನಾಧ್ಯಕ್ಷರಾಗಿ ಮುಂಬಯಿಗೆ ಆಗಮಿಸಿದಾಗ ಅವರಿಗೆ ೭೭ನೆಯ ವಯಸ್ಸು. ಆಗ ಅವರ ಆರೋಗ್ಯ ಚೆನ್ನಾಗಿಯೇ ಇತ್ತು. ಮುಂದೆ ಕ್ರಿ.ಶ. ೧೯೫೬ರಲ್ಲಿ ಮೊದಲ ಬಾರಿಗೆ, ಅವರ ವೃದ್ಧಾಪ್ಯ ಕಾರಣದ ಜಡ್ಡಿನ ಪ್ರಸ್ತಾಪ ಬಂದಿದೆ. ಕ್ರಿ.ಶ. ೧೯೫೬ರ ಒಂದು ಪತ್ರದಲ್ಲಿ ಏಳೆಂಟು ತಿಂಗಳು ಮನೆಬಿಟ್ಟು ಹೊರಗೆ ಕಾಲಿಡಲಾರದಂತಹ ಉಬ್ಬಸ ಬೇನೆಯ ಉಲ್ಲೇಖವಿದೆ. ಅವರ ಇನ್ನೊಂದು ಬೇನೆ ನರದೌರ್ಬಲ್ಯಕ್ಕೆ ಸಂಬಂಧಿಸಿತ್ತು. ಇವೆರಡನ್ನು ಬಿಟ್ಟರೆ, ಅವರಿಗೆ ಮಧುಮೇಹ, ರಕ್ತದೊತ್ತಡ - ಎಂಬೀ ಇಳಿವಯದ ಸಾಮಾನ್ಯ ರೋಗಗಳ ತಾಪತ್ರಯವಿದ್ದಂತಿಲ್ಲ.**

ಮುಂದೆ ನರದೌರ್ಬಲ್ಯದ ಪರಿಣಾಮ ಎಷ್ಟಿತ್ತೆಂದರೆ, ಒಂದು ಸಾದಾ ಕಾರ್ಡನ್ನು ಬರೆಯುವಾಗಲೂ ಬಲದೋಳು ನೋಯಿಸುತ್ತಿತ್ತು. ಜೊತೆಗೆ ಕುಂದುತ್ತ ಸಾಗಿದ್ದ ಸ್ಮರಣಶಕ್ತಿ. ಹೀಗಾಗಿ ಯಾರಾದರೂ ಅಭ್ಯಾಸದ ವಿಷಯವಾಗಿ ಪ್ರಶ್ನೆ ಕೇಳಿದ್ದಾದರೆ, ಅವರಿಗೆ ಉತ್ತರ ಕೊಡುವುದಾಗುತ್ತಿಲ್ಲವಲ್ಲ - ಎಂಬ ವ್ಯಥೆಗೀಡಾಗುತ್ತಿದ್ದರು. ಇಷ್ಟೇ ಅಲ್ಲ, ಅದೇ ಕಾರಣ ಕೊಟ್ಟು ಮುಂದೆಯೂ ಆ ರೀತಿ ತಮ್ಮನ್ನು ಕೇಳಬಾರದಾಗಿ ವಿನಂತಿಸುತ್ತಿದ್ದರು:

> ನಿಮ್ಮ ಪತ್ರದಲ್ಲಿ ಕೇಳಿರುವಂಥಾ ಕ್ಲಿಷ್ಟವಾದ ಪ್ರಶ್ನೆಗಳನ್ನು ಉತ್ತರಿಸಲಾಗುವುದಿಲ್ಲ. ಸರ್ವಥಾ ಶಕ್ಯವಿಲ್ಲ.... ಇನ್ನು ಇಂಥಾ ವಿಷಯಗಳಲ್ಲಿ ದಯಮಾಡಿ ಬರೆಯಬಾರದೆಂದು ವಿನಂತಿಸುತ್ತೇನೆ. (ದಿ. ೧೯-೭-೬೧ರಂದು ರಾಮಚಂದ್ರ ಉಚ್ಚಿಲರಿಗೆ ಬರೆದ ಪತ್ರ)

ಈ ವಿನಂತಿಯನ್ನು ಇನ್ನೂ ಹಲವರಿಗೆ ಬರೆದ ಪತ್ರಗಳಲ್ಲಿ ಕಾಣುತ್ತೇವೆ. ಹಾಗೆ ವಿನಂತಿಸಿಯೂ, ತಮಗೆ ಗೊತ್ತಿದ್ದಷ್ಟು ಮಾಹಿತಿಯನ್ನು ಕೊಟ್ಟೇ ಇದ್ದರು, P.S. ರೂಪದಲ್ಲಿ. ಪಿ. ಗುರುರಾಜ ಭಟ್ಟರಿಗೆ ಇದೇ ರೀತಿಯಲ್ಲಿ ಪತ್ರ ಬರೆದು, ಅದರ ಕೆಳಗಡೆ, 'ಉಡುಪಿ'ಯ ವ್ಯುತ್ಪತ್ತಿ. 'ಮಂಜುಘೋಷ - ಮಂಜುಶ್ರೀ' - ಇವುಗಳ ಸಂಬಂಧದ ಬಗ್ಗೆ ವಿವರಣೆ ಕೊಟ್ಟಿದ್ದಾರೆ (೩೦-೪-೬೨). ಅದರಂತೆ ಮೇಲ್ಕಾಣಿಸಿದ ೧೯-೭-೬೧ರ ಪತ್ರದಲ್ಲಿಯೂ ಕಾಳಿದಾಸಕೃತ ವ್ಯಾಕರಣ ವಿರುದ್ಧ ಪ್ರಯೋಗಗಳನ್ನು, ಅದರ ಸಂದಿಯಲ್ಲಿಯೇ ಗೀಚಿದ್ದಾರೆ!

ಈ ದುಸ್ಥಿತಿಯ ಮುಂದಿನ ಹೆಜ್ಜೆ ಎಂದರೆ ಇತರರು ಕಳುಹಿಸಿದ ಪುಸ್ತಕಗಳನ್ನು ಓದುವುದೇ ಪ್ರಯಾಸಕರವಾಗತೊಡಗಿತು.

> ಈಗ ಯಾವುದನ್ನೂ ಓದುವುದು ಬೇಡವೆನಿಸುತ್ತದೆ.... ಏನನ್ನೂ ಓದಬೇಕೆಂಬ ಆಸೆಯಿಲ್ಲ. ಅಪೇಕ್ಷೆ ಇಲ್ಲ. ಓದತಕ್ಕ ಸಹನಶಕ್ತಿ ತೀರ ಇಲ್ಲ. ವರ್ತಮಾನ ಪತ್ರಿಕೆಗಳನ್ನು, ಕೆಲ ಕೆಲವೇನೊ ಕವಿತೆ, ನಾಟಕಗಳನ್ನು ಅಲ್ಲಲ್ಲಿ ಹೊಂಚಿ ನೋಡಿಬಿಡುತ್ತೇನಲ್ಲದೆ ಮುಂಚಿನಂತೆ ಮನಸ್ಸಿಟ್ಟು ಓದಲಾಗುವುದಿಲ್ಲ. (ಅದೇ ಪತ್ರ).

---

** ಅಂದ ಹಾಗೆ ಪೈಗಳು ತಮ್ಮ ಸಂಬಂಧಿಕರಿಗೆ ಹುಟ್ಟಿದ ಮಕ್ಕಳ ಜನ್ಮಕುಂಡಲಿ ಹಾಕಿ, ಶುಭಾಶುಭ ಫಲಗಳನ್ನು ಹೇಳುತ್ತಿದ್ದರು. ಆದರೆ ಯಾವಾಗೋ ಒಮ್ಮೆ ಈ ಲೆಕ್ಕ ತಪ್ಪಿತೋ ಅಥವಾ ಮುಪ್ಪಿನ ಕಾಲದ ಮರವೆ, ತಾನಾಗಿ ಅವರಿಗೆ ಅರಿವಾಗಿಯೋ ಏನೊ, ಬೇರೆಯವರಿಂದ ಕುಂಡಲಿ ಬರೆಯಿಸಿ ಕೊಡತೊಡಗಿದರು.

ಆಗ ಅವರಿಗೆ ಬರೆಯುವುದು, ಓದುವುದು ಇವುಗಳ ಪ್ರಯಾಸವಲ್ಲದೆ ಮಾತನಾಡುವುದೂ ಕಷ್ಟದಾಯಕವಾಗತೊಡಗಿತು. 'ಈಗ ಯಾರೊಂದಿಗಾದರೂ ಕೂತು ಮಾತಾಡುವಷ್ಟು ಕೂಡಾ ತಾಳ್ಮೆ ನನಗಿಲ್ಲ. ಆದ್ದರಿಂದ ನನ್ನಲ್ಲಿಗೆ ಬರಬೇಡಿರಿ' ಎಂದು ಕೇಳಿಕೊಂಡಿದ್ದಾರೆ.

ಇಂಥ ಸ್ಥಿತಿಯಲ್ಲಿ ಅವರು ಸಾವನ್ನು ಬರಮಾಡಿಕೊಳ್ಳುವ ಸಿದ್ಧತೆಯಲ್ಲಿ ಇದ್ದರು. 'ನನ್ನ ಆರೋಗ್ಯವೀಗ ಗಾಳಿಗೊಡ್ಡಿದ ಸೊಡರಿನಂತೆ ಅತ್ತಿತ್ತ ಅಲುಗಾಡುತ್ತಿದೆ. ಇನ್ನೆಷ್ಟು ಕಾಲ ಬದುಕಬೇಕು, ಸ್ವಾಮೀ' (೨೪-೩-೧೯೫೯ರ ಪತ್ರ). 'ಜೀವಕ್ಕೆ ಹೊರಗೆ ಹೋಗುವರೆ ಒಂದೊಂದೇ ಬಾಗಿಲು ತೆರೆಯುತ್ತಲಿದೆ.' (೮-೬-೬೨ರ ಪತ್ರ). ಇತ್ಯಾದಿ

**'ಆತನ ಇಷ್ಟ'**

'ಎಲ್ಲಾ ಆತನ ಇಷ್ಟ. ಅದನ್ನು ಎರಡು ಕೈಗಳಿಂದಲೂ ಎತ್ತಿಕೊಂಡು ಅನುಭವಿಸಬೇಕಾದುದಷ್ಟೇ ನಮ್ಮ ಕರ್ತವ್ಯ.'

ಹಣ್ಣು ಮುದುಕರು ಯಾರೂ ಹೇಳಬಹುದಾದ ಮಾತಲ್ಲವೆ, ಇದು. ಪೈಗಳ ವಿಚಾರದಲ್ಲಿ ಮಾತ್ರ ಇದು ವೃದ್ಧಕಾಲೀನ ವೈರಾಗ್ಯ ಎಂದಲ್ಲ. ಅವರು ಪ್ರತಿ ಪತ್ರದಲ್ಲಿ ಬರೀತಿದ್ದ ಶ್ರೀದೇವರೇ 'ಆತನು'; ಅವನು ನಡೆಸಿದಂತೆ ತಾನು ಎಂಬ ನಂಬುಗೆ ಅವರಲ್ಲಿ ಎಂದಿನಿಂದಲೂ ಇದ್ದಿತು. ಈ ಸಂಕಲನದಲ್ಲಿ ಮೊದಲ ಪತ್ರದಲ್ಲಿಯೇ (೧೩೦) ಅದರ ಸ್ಪಷ್ಟ ನಿದರ್ಶನವಿದೆ. "ಹರಸುವಾತನು ದೇವರಲ್ಲದೆ ನಾನಲ್ಲ."

ಶ್ರೀಕೃಷ್ಣನ ಕಡೆಗಾಲದ ಕಥೆ ಇರುವ 'ಪ್ರಭಾಸ'ವೆಂಬ ಖಂಡಕಾವ್ಯ ತಡೆದು ನಿಂತುದಕ್ಕೂ ಶ್ರೀಕೃಷ್ಣನನ್ನೇ ಹೊಣೆಯಾಗಿಸಿದ್ದರು. "ಆತನದನ್ನು ಎಂದು ಮುಗಿಸಿಕೊಳ್ಳುವನೊ ಆತನೆ ಬಲ್ಲ"! 'ನಂದಾದೀಪ'ದ ಪದ್ಯಗಳಿಗೆ ಅವರ ಪತ್ನಿ ಕೃಷ್ಣೆ ಬರಿಯ ನಿಮಿತ್ತ. ಅವಾದರೊ ದೇವರ ಮುಂದೆ ಹಚ್ಚಿದ ಹಣತೆಯ ದೀಪಗಳೇ. ಬೇರೆ ಪದ್ಯಗಳಿಗೂ ಪ್ರೇರಣೆ ಅದೇನೇ:

Most of the poems I have directed or addressed to God - ಎಂದು ರಾಜರತ್ನಂಗೆ ಬರೆದ ಪತ್ರದಲ್ಲಿ ಸ್ಪಷ್ಟಪಡಿಸಿದ್ದಾರೆ.

ಈ ಭಕ್ತಿ ಭಾವನೆಯು ತಮ್ಮ ಮಟ್ಟಿಗೆ ಇದ್ದಿರಲಿ. ಆದರೆ ಇತರರಿಗೂ ಅದರ ದೀಕ್ಷೆಯನ್ನು ಕೊಡುತ್ತಿದ್ದಾರಲ್ಲ !

ದಿ. ೪.೨.೧೯೫೫ರ ಈ ಉಲ್ಲೇಖ ಗಮನಿಸುವಂತಿದೆ. (ಸಮೇತನಹಳ್ಳಿ ರಾಮರಾಯರಿಗೆ ಬರೆದ ಪತ್ರ)

> ತಮ್ಮ ಕಾದಂಬರಿಯನ್ನು ಸುಸೂತ್ರವಾಗಿ ಕೊನೆಗಾಣಿಸುವುದೂ ಅದನ್ನು ಯಶಸ್ವಿಯಾಗಿಸುವುದೂ ತಮ್ಮದಲ್ಲ; ಆತನ ಹೊಣೆಯೆಂದೇ ಬಗೆಯಿರಿ. ಆತನು ಹಾಗೆಯೇ ತಮ್ಮ ಅಭೀಷ್ಟವನ್ನು ನೆರವೇರಿಸುವನು. ಇದೇ ಆತನ ಹೆಸರಿನಲ್ಲಿ ತಮ್ಮ ಬೆನ್ನಿನ ಮೇಲೆ ನನ್ನ ತಟ್ಟು.

ದೇವರು, ಧರ್ಮಗಳ - ವಿಷಯಕವಾದ ಶ್ರದ್ಧೆ ಅವರವರ ಅನುಭವ ಹಾಗೂ ವಿಚಾರವಾದಿತ್ವದ ಮೇಲಿಂದ ರೂಪುಗೊಳ್ಳುತ್ತದೆ. ಅಪ್ಪಟ ನಾಸ್ತಿಕರಾಗಿದ್ದ ಹಲವರು ಕಾಲಾಂತರದಲ್ಲಿ ಆಸ್ತಿಕರಾಗಬಹುದು. ಅದರಂತೆ vice versa. ಪೈಯವರಲ್ಲಿ ಮಾತ್ರ ದೈವಭಕ್ತಿ , ಶ್ರೀದೇವರಲ್ಲಿಯ ಶ್ರದ್ಧೆ ತರುಣವಯದಿಂದ ಅವರ ಕೊನೆಯ ದಿನದ ವರೆಗೂ ಇದ್ದಿತು. ಆ ನಂಬುಗೆ ಅಚಲವಾದದ್ದು, ಆತನ ಸರ್ವಶಕ್ತತೆಯಲ್ಲಿ ಅವರಿಗೆ ಶಂಕೆಯೆಂಬುದಿರದೇ, ಮರೆವು - ಉದಾಸೀನತೆ ಕಂಡು ಬರದೇ ಅನೂನವಾಗಿ ಏಕಪ್ರಕಾರವಾಗಿ ಹರಿದು ಬಂದಿದ್ದಕ್ಕೆ ಅವರ ಅನೇಕ ಪತ್ರಗಳು ಸಾಕ್ಷಿ ನುಡಿಯುತ್ತವೆ. ಶ್ರೀದೇವರ ಅನುಗ್ರಹದ ಮಾತು ಪತ್ರಗಳ ಕೊನೆಯಲ್ಲಿ ಬರುತ್ತಲೇ ಇದ್ದಾಗ, ಅದೊಂದು ಮಾಮೂಲಿಯ ವಾಕ್ಯ ಎಂದೆನಿಸಿದರೂ, ಅದನ್ನು ಅವರು ಆತ್ಮಸಾತ್ ಮಾಡಿಕೊಂಡೇ ಹಾಗೆ ಹೇಳುತ್ತಿದ್ದರು.

ಪೈಯವರ ಪತ್ರಗಳ ಒಟ್ಟಿನ ಅವಲೋಕನದಿಂದ, ಅವರ ಪ್ರಾಮಾಣಿಕತೆ, ಅಹಂಕಾರವಿಲ್ಲದ ಆತ್ಮಾಭಿಮಾನ, ಅಭಿಪ್ರಾಯ ಸ್ಪಷ್ಟತೆ, ಹಿರಿ-ಕಿರಿಯ, ಪರಿಚಿತ-ಅಪರಿಚಿತ ಎಂಬ ಭೇದವಿಲ್ಲದೆ ಸಹಾಯ ತತ್ಪರತೆ - ಈ ಗುಣಗಳು ನಿಚ್ಚಳವಾಗಿ ತೋರಿಬರುತ್ತವೆ. ಇಷ್ಟೇ; ಸಾಹಿತ್ಯಿಕರ ಇಂಥ ಪತ್ರಗಳ ಪ್ರಕಟನೆಯಲ್ಲಿ ಅವರ ವಿಚಾರಧಾರೆಯನ್ನೂ, ಬರಹದ ಪ್ರೇರಣೆಗಳನ್ನೂ ತಿಳಿಯುವ ಉದ್ದೇಶವಿರುತ್ತಿದ್ದು ಅದಿಲ್ಲಿ ಕೈಗೂಡಿಲ್ಲ. ಏನಿದ್ದರೂ ರಾಜರತ್ನಂ ಪ್ರಕಟಿತ ಹಾಗೂ ಈಗ ಪ್ರಕಟವಾಗುತ್ತಿರುವ ಸಂಕಲನಗಳು * ಪತ್ರಸಾಹಿತ್ಯದ ಪ್ರಯೋಜನದತ್ತ ಗಮನವನ್ನು ಸೆಳೆಯಬಲ್ಲ ಪ್ರಥಮ ಪ್ರಯತ್ನಗಳಾಗಿವೆ ಎಂಬುದೇ ಈ ಎತ್ತುಗಡೆಯ ಸಾರ್ಥಕ್ಯ.



* ಇಲ್ಲಿ ಉಲ್ಲೇಖಗೊಂಡ ಹೆಚ್ಚಿನ ಪತ್ರಗಳ ಪಠ್ಯಕ್ಕಾಗಿ 'ಪತ್ರಗಳು ಚಿತ್ರಿಸಿದ ಗೋವಿಂದ ಪೈ' ಎಂಬ ಪತ್ರ ಸಂಕಲನವನ್ನು ನೋಡಬಹುದು. (ಮುಂಬಯಿ ವಿಶ್ವವಿದ್ಯಾಲಯ, ೧೯೮೭)

# ೧೦ ಪೈಗಳು ಕಂಡರಿಸಿದ ದಕ್ಷಿಣ ಕನ್ನಡ

ಗೋವಿಂದ ಪೈಯವರ ಮೊತ್ತ ಮೊದಲಿನ ಬರಹವು ಕ್ರಿ.ಶ. ೧೯೦೦ರಲ್ಲಿ 'ಸುವಾಸಿನಿ' ಪತ್ರಿಕೆಯಲ್ಲಿ ಪ್ರಕಟವಾಯಿತಷ್ಟೆ. ೧೯೬೨ರಲ್ಲಿ ಪ್ರಬುದ್ಧ ಕರ್ಣಾಟಕಕ್ಕೆ ಕಳಿಸಿದ ಮಂಜೇಶ್ವರ ದೇವಸ್ಥಾನದ ಮೇಲಿನ ಲೇಖವು ಅವರ ಕೊನೆಯ ಬರಹವಾಯಿತು. ಹೀಗೆ ೬೨ ವರ್ಷಗಳ ಸುದೀರ್ಘ ಕಾಲದವರೆಗೆ ಏಕಪ್ರಕಾರವಾಗಿ ವಾಙ್ಮಯ ಸೇವೆಯಲ್ಲಿ ತೊಡಗಿದ್ದ ಕೆಲವೇ ಕನ್ನಡ ಸಾಹಿತ್ಯಿಕರಲ್ಲಿ ಪೈಗಳು ಒಬ್ಬರು.

ಅವರ ಲೇಖನ ವಾಹಿನಿಯು ಇತಿಹಾಸ ಸಂಶೋಧನ, ಪ್ರಬಂಧ - ವಿಮರ್ಶೆ, ಕವಿತೆ ಮತ್ತು ನಾಟಕ ಈ ನಾಲ್ಕು ಮಾರ್ಗಗಳಲ್ಲಿ ಪ್ರವಹಿಸಿತು.*

ತಮ್ಮ ಕಾಲೇಜ್ ಶಿಕ್ಷಣವನ್ನು ಮುಗಿಸಿ ಪೈಯವರು ಮಂಜೇಶ್ವರದಲ್ಲಿ ನೆಲೆನಿಂತ ಮೇಲೆ ಅವರ ಕವನ ನಿರ್ಮಿತಿಯೂ ಚರಿತ್ರೆಗೆ ಸಂಬಂಧಿಸಿದ ಅಧ್ಯಯನವೂ ಒಟ್ಟೊಟ್ಟಿಗೆ ಸಾಗಿದುವು. ಆ ಮುಂದೆ ಮಂಜೇಶ್ವರಕ್ಕೆ ಬರುತ್ತಿದ್ದ ಬುದ್ಧಿಜೀವಿಗಳೊಡನೆ ಪ್ರಾಕ್ತನ ವಿಷಯಗಳನ್ನು ಚರ್ಚೆ ಮತ್ತು ಮೈಸೂರು ಕಡೆಯ ವಿದ್ವಾಂಸರೊಡನೆ ಪತ್ರವ್ಯವಹಾರಗಳಲ್ಲಿ ತೊಡಗಿದ್ದರಾದರೂ ಬರವಣಿಗೆಗೆ ಇಳಿದಿರಲಿಲ್ಲ. ೧೯೨೪ರ ಬೆಳಗಾಂವಿ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಅವರು ಒಬ್ಬ ಉದಯೋನ್ಮುಖ ಕವಿ ಎಂಬ ಹೆಸರನ್ನಷ್ಟೆ ಗಳಿಸಿದ್ದರು.

ಅವರ ಐತಿಹಾಸಿಕ ಬರವಣಿಗೆಯು ಆರಂಭವಾದದ್ದು ೧೯೨೬ಕ್ಕೆ. ಮುಂದಣ ಒಂದೊಂದು ವರ್ಷದಲ್ಲಿ ಏಳೆಂಟು ಸಂಶೋಧನ ವಿಷಯಗಳನ್ನು ಆಯ್ದುಕೊಂಡು ಬರೆಯುತ್ತ ಹೋದರು. ಭಾರತೀಯ ಇತಿಹಾಸಕಾರರಿಗೆ ಹಿಡಿಸಬಹುದಾದ ಲೇಖನಗಳನ್ನು ಇಂಗ್ಲಿಶ್‌ನಲ್ಲಿ ಬರೆದರು. ಅರಸು ಮನೆತನಗಳ ವಂಶಾವಳಿ, ಕವಿ-ಕಾವ್ಯಗಳ ಕಾಲನಿರ್ಣಯ, ಏತನ್ಮಧ್ಯೆ ಕವಿತಾರಚನೆ ಮುಂದುವರಿಯಿತು.

---

* ಪೈ ಅವರ ಗದ್ಯ ಬರಹಗಳ ಸಂಖ್ಯೆ ೧೮೫. ಹಲವು ಸಂಶೋಧನ ಬರಹಗಳನ್ನು ತಿದ್ದಿ ಬೆಳೆಯಿಸಿ ಪುನಹ ಪ್ರಕಟಿಸಿದ್ದಾರೆ. ಕವಿತೆಗಳದ್ದು ೧೫೦. ಅವುಗಳಲ್ಲಿ ಅರ್ಧದಷ್ಟು ಬೇರೆ ಬೇರೆ ಪತ್ರಿಕೆಗಳಲ್ಲಿ ಪುನರ್ಮುದ್ರಣವನ್ನು ಕಂಡಿವೆ. ಅವರು ರಚಿಸಿದ ನಾಟಕಗಳು ಹನ್ನೆರಡು.

೧೯೩೦ರಲ್ಲಿ 'ಗಿಳಿವಿಂಡು' ಕವನ ಸಂಗ್ರಹವು ಪ್ರಕಟವಾದ ಮೇಲೆ ಮುಂದಿನ ಕೆಲವು ವರ್ಷ ಅವರು ಪ್ರಾಕ್ತನ ಸಂಶೋಧನೆಯಲ್ಲಿಯೆ ಮುಳುಗಿದರು. ಈ ಸಂಶೋಧನೆಯು ದಕ್ಷಿಣ ಕನ್ನಡ, ಕರ್ನಾಟಕ, ಭಾರತ ಮತ್ತು ಧಾರ್ಮಿಕ ಈ ರಂಗಗಳಲ್ಲಿ ವ್ಯಕ್ತವಾಯಿತು.

ಈ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡದ ಪರಂಪರೆಯ ದೃಷ್ಟಿಯಿಂದ ಅವರು ತಮ್ಮ ಜನ್ಮಭೂಮಿಯಾದ ತುಳುನಾಡು ಹಾಗೂ ಸ್ವಧರ್ಮೀಯರಾದ ಸಾರಸ್ವತರು ಮತ್ತು ಸ್ವಭಾಷೆಯಾದ ಕೊಂಕಣಿ - ಇವುಗಳ ವಿಷಯವಾಗಿ ಅವರು ಚಿಂತನ ಮಾಡಿ ಬರೆದದ್ದನ್ನು ಈ ಗ್ರಂಥೋದ್ದೇಶಕ್ಕೆ ಅನುಗುಣವಾಗಿ ಸಮೀಕ್ಷಿಸಬಯಸಿದೆ.

**(ಅ) ಸಾರಸ್ವತರ ಪ್ರಾಚೀನತೆ**

ಪೈ ಅವರ ಸಂಶೋಧನ ಬರವಣಿಗೆಯು ೧೯೨೬ರಿಂದ ಆರಂಭವಾಯಿತೆಂದು ಹೇಳಿದೆವಷ್ಟೆ. ಅದಕ್ಕಾಗಿ ಅವರು ಆಯ್ದುಕೊಂಡ ವಿಷಯವು, ಅವರ ಪೂರ್ವಜರಾದ (ಗೌಡ) ಸಾರಸ್ವತರ ಮೂಲೇತಿಹಾಸವನ್ನು ಕುರಿತದ್ದು. ಹಲವು ಪುರಾಣಗಳನ್ನೂ ಶಾಸನಗಳನ್ನೂ ಕೂಲಂಕಷವಾಗಿ ಪರಿಶೀಲಿಸಿ, ಸಾರಸ್ವತ ಉಲ್ಲೇಖವು ಎಲ್ಲೆಲ್ಲಿ ಬಂದಿದೆ ಎಂಬುದನ್ನು ಗುರುತಿಸಿ, Flashes from the Past ಎಂಬ ಲೇಖವನ್ನು ಅವರು ಬರೆದರು. ಅದೇ ಮುಂದೆ ಘನೀಭೂತವಾಗಿ 'ನಮ್ಮ ಹಿರಿಯರನ್ನು ಕುರಿತು' ಎಂಬ ಲೇಖದಲ್ಲಿ (ಜೀವೋತ್ತಮ, ೧೯೫೪) ನಿರ್ಣಯಾತ್ಮಕ ರೂಪವನ್ನು ತಾಳಿತು. ಇದಕ್ಕೂ ಮುಂಚೆ, ಕೊಂಕಣಿ ಪತ್ರಿಕೆಯಾದ ಸಾರಸ್ವತದಲ್ಲಿ ಈ ವಿಷಯದ ಕುರಿತು ಲೇಖವೊಂದು ಪ್ರಕಟವಾಗಿದ್ದಿತು (೧೯೪೪).

ಪೈಯವರ ಪ್ರಕಾರ, ಸಾರಸ್ವತರು ಮೂಲತಃ ಪಂಜಾಬದ ಸರಸ್ವತೀ ನದೀತೀರದವರು. ಅಲ್ಲಿಂದ ಬಿಹಾರದ ತಿರ್ಹೂತ್ ಪ್ರದೇಶದಲ್ಲಿ ನೆಲೆನಿಂತರು. ಪರಶುರಾಮನು ನಿರ್ಮಿಸಿದನೆಂದು ಹೇಳಲಾದ ಸಪ್ತ ಕೊಂಕಣಗಳಲ್ಲಿ ಒಂದಾದ ಗೋವಾ ಪ್ರದೇಶಕ್ಕೆ ಇವರನ್ನು ಕರೆತರಲಾಯಿತು. ಮೂಲತಃ ಇವರು ಶಿವೋಪಾಸಕರು. ಆದರೆ ಮಧ್ಯಕಾಲದಲ್ಲಿ, ಮಧ್ವಾಚಾರ್ಯರಿಂದಾಗಿ ಅನೇಕರು ವೈಷ್ಣವರಾದರು. ಕುಪ್ರಸಿದ್ಧ ಪೋರ್ತುಗೀಸ್ ದಬ್ಬಾಳಿಕೆಯಲ್ಲಿ, ಇವರು ಗೋವೆಯನ್ನು ತ್ಯಜಿಸಿ, ಸುತ್ತಲಿನ ಅನ್ಯ ಸೀಮೆಗಳಿಗೆ ಹೊರಟರಾದರೂ ಹೆಚ್ಚಾಗಿ ನೆಲೆನಿಂತುದು ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿಯೇ. ಬೇರೊಂದು ಲೇಖದಲ್ಲಿ, ಪೈ ಅವರು ಸಾರಸ್ವತ, ಗೌಡಸಾರಸ್ವತ ಎಂಬ ಪ್ರಭೇದಗಳನ್ನೂ ಗುರುತಿಸಿದ್ದಾರೆ. ಕೊಂಕಣದ ಈ ಬ್ರಾಹ್ಮಣರ ವಿಚಾರದಲ್ಲಿ ಪೈಯವರಷ್ಟು ಐತಿಹಾಸಿಕ ಶೋಧ ಮಾಡಿದವರು ಬೇರೆ ಯಾರೂ ಇಲ್ಲ; ಹಾಗೂ ಅವರು ಕಂಡುಹಿಡಿದ ಅಂಶಗಳೇ ಇಂದಿಗೂ ಪ್ರಾಮಾಣ್ಯವಾಗಿವೆ.

ಪೈಯವರ ನಿವಾಸಸ್ಥಳವಾದ ಮಂಜೇಶ್ವರದಲ್ಲಿ ಅನಂತೇಶ್ವರ ದೇವಾಲಯವಿದೆಯಷ್ಟೆ. ಅದು ಮೂಲತಃ ಸಾರಸ್ವತರ ದೇವಸ್ಥಾನವು. ಈ ದೇವಸ್ಥಾನದ ಪ್ರಾಚೀನತೆ, ಅಲ್ಲಿ ನಡೆಯುವ ಉತ್ಸವಾದಿಗಳ ಹಿನ್ನೆಲೆ, ಪರಂಪರೆಗಳನ್ನು ವಿಶದವಾಗಿ ಕೊಟ್ಟಿದ್ದಾರೆ (All India Saraswat Mag. 1920). ಸಾರಸ್ವತರಿಗೆ ಸಂಬಂಧಿಸಿದ ಶಾಸನಗಳನ್ನು ಪರಿಶೀಲಿಸುತ್ತಿದ್ದಾಗ, ಮೂವರು

ಸಾರಸ್ವತ ಬ್ರಾಹ್ಮಣರು ಉಡುಪಿಯ ಶ್ರೀಕೃಷ್ಣನಿಗೆ ದತ್ತಿಯನ್ನು ಬಿಟ್ಟಿದ್ದರ ಉಲ್ಲೇಖವು ಮತ್ತೊಂದು ಲೇಖದಲ್ಲಿ ಬಂದದ್ದಿದೆ (ಪ್ರಭಾತ, ೧೯೪೫).

ಈ ದಿಸೆಯಲ್ಲಿ ಇನ್ನೊಂದು ಮಹತ್ವದ ಶೋಧವು ಕೊಂಕಣಿ ಭಾಷೆಯ ಮೂಲವನ್ನು ಕುರಿತದ್ದಿದೆ. ಅದು ಮರಾಠೀಜನ್ಯವಲ್ಲ ಎಂಬುದನ್ನು ಪೈಯವರು ಬಲವತ್ತರವಾದ ಪ್ರಮಾಣಗಳಿಂದ ಸಿದ್ಧಪಡಿಸಿದ್ದಾರೆ. ಗೋವೆಗೆ ಕೊಂಕಣಿ ಭಾಷೆಯನ್ನು ತಂದವರು ಈ ಸಾರಸ್ವತರು ತಾನೇ. ಬಿಹಾರದಿಂದ ಬಂದವರಾದ ಅವರು ಮಾಗಧೀ ಪ್ರಾಕೃತವನ್ನು ಅನುಸರಿಸಿದರು. ಹೀಗೆ ಕೊಂಕಣಿಯು ಮಾಗಧೀ ಪ್ರಾಕೃತದಿಂದ ಹುಟ್ಟಿದ ಭಾಷೆ. ಮರಾಠಿಯೂ ಪ್ರಾಕೃತಜನ್ಯವೇ. ಆದರೆ ಮಾಗಧ ಪ್ರಾಕೃತಕ್ಕಿಂತ ಈಚಿನ ಕಾಲದ್ದಾದ 'ಮಹಾರಾಷ್ಟ್ರ' (ಮಾಳವ-ಮಧ್ಯಪ್ರದೇಶ) ಪ್ರಾಕೃತದಿಂದ ಹುಟ್ಟಿದುದು. ಈ ಕಾರಣದಿಂದಾಗಿ ಕೊಂಕಣಿಯು ಮರಾಠಿಯಿಂದ ಹುಟ್ಟಿದ ಉಪಭಾಷೆಯಂತೂ ಅಲ್ಲವೆ ಅಲ್ಲ; ಮೇಲಾಗಿ ಅದು ಮರಾಠಿಗಿಂತಲೂ ಪ್ರಾಚೀನವಾದ ಭಾಷೆ ಎಂದು ಪೈ ಅವರು ಪ್ರತಿಪಾದಿಸಿದ್ದಾರೆ.

### ಆ. ತುಳುನಾಡು

ತುಳುನಾಡು, ಎಂದರೆ ಇಂದಿನ ದಕ್ಷಿಣ ಕನ್ನಡ ಜಿಲ್ಲೆಯ ಕುರಿತಾದ ಗೋವಿಂದ ಪೈ ಅವರ ಪ್ರಥಮ ಲೇಖದ (ಪಂಚಕಜ್ಜಾಯ, ೧೯೨೭) ಹೆಸರು 'ಇತಿಹಾಸದ ಇರುಳಲ್ಲಿ ತುಳುನಾಡು' ಎಂದು ಇದೆ. ನಿಜವೇ. ಆ ಮುಂಚೆ, ತುಳುನಾಡು ಎಂಬುದು ಎಲ್ಲಿ ಹೇಗೆ ಇದ್ದಿತು ಎಂಬ ಕಲ್ಪನೆ ತುಳುನಾಡವರಿಗೇ ಇರಲಿಲ್ಲ. ಕಾಲಗರ್ಭದ ಕತ್ತಲೆಯಿಂದ ಹೊರತೆಗೆದು ಅದನ್ನು ಬೆಳಕಿಗೆ ತಂದವರಲ್ಲಿ ಪೈಯವರು ಪ್ರಮುಖರು. ಅವರ ಒಟ್ಟಿನ ಸಂಶೋಧನ ಕಾರ್ಯದಲ್ಲಿ ತುಳುನಾಡನ್ನು ಕುರಿತ ಪರಿಶೋಧನೆಯು ಪ್ರಾಮುಖ್ಯವಾಗಿದೆ. ಈ ವಿಷಯಕವಾದ ಸಂಶೋಧನೆಯು ಮುಂದುವರಿಯಿತು. ಆಮೇಲೆ ೧೯೪೭ರಲ್ಲಿ ಅವರು 'ತುಳುನಾಡು - ಪೂರ್ವಸ್ಮೃತಿ' ಎಂಬ ಸುದೀರ್ಘ ಲೇಖವನ್ನು ಬರೆದರು. ಅದರಲ್ಲಿ ೨೦ ವರ್ಷಗಳ ವರೆಗಿನ ಅವರ ತುಳುನಾಡ ವಿಷಯದ ಸಂಶೋಧನೆಯೆಲ್ಲವೂ ಸಾರವತ್ತಾಗಿ ಬಂದಿದೆ. ಈ ಲೇಖವೂ ಒಂದು ಸಾಹಿತ್ಯ ಸಮ್ಮೇಳನ ಸಂಚಿಕೆಯಲ್ಲಿಯೇ (ತೆಂಕನಾಡು - ಕಾಸರಗೋಡು ಸಾಹಿತ್ಯ ಸಮ್ಮೇಳನ ಸಂಚಿಕೆ) ಪ್ರಕಟವಾದುದು ಒಂದು ಯೋಗಾಯೋಗ.

ಈ ಮಹತ್ವದ ಲೇಖನದಲ್ಲಿ, ತುಳುನಾಡಿನ ಬಗ್ಗೆ ಸಿದ್ಧಾಂತಿಸಲಾದ ಮುಖ್ಯಾಂಶಗಳು ಇಂತಿವೆ:

(i) **ಹೆಸರು:** ತುಳುನಾಡು ಎಂಬ ಪದದ ಮೂಲಾರ್ಥದ ಬಗ್ಗೆ ಪೈ ಅವರು ತುಳು-ತುಳ್ವೆ, ಎಂದರೆ ನೀರಲ್ಲಿ ಹುಟ್ಟುಹಾಕು, ಮುಳುಗು ಎಂಬ ಮೂಲ ದ್ರಾವಿಡ ಪದದಿಂದ ಹುಟ್ಟಿರಬೇಕು ಎನ್ನುತ್ತಾರೆ. ನೀರಲ್ಲಿ ನೆರೆಯಾಡುವ ಬೆಸ್ತರು, ಮೀನುಗಾರರಿಂದಲೇ ತುಳುನಾಡಿಗೆ ಆ ಹೆಸರು ಬಂದಿರುವುದು ಯಥಾ ಯೋಗ್ಯವೇ ಆಗಿದೆ. ಕರ್ನಾಟಕ -ಕನ್ನಡ ಎಂಬ ಶಬ್ದಗಳ ಬಗ್ಗೆ ಹೇಗೋ ಹಾಗೆಯೇ, ತುಳುನಾಡಿನ ಮೂಲರೂಪದ ಬಗ್ಗೆಯೂ ಬೇರೆ ಅಭಿಪ್ರಾಯಗಳಿವೆಯಾದರೂ, ಪೈ ಅವರ ಈ ವ್ಯುತ್ಪತ್ತಿ ನಿರೂಪಣೆ ಬಹುಧಾ ಮಾನ್ಯವಾಗಿದೆ.

(ii) **ಪ್ರಾಚೀನತೆ:** ತುಳುನಾಡು ಎಂಬ ಪದವು ಮೊದಲು ದೊರೆಯುವುದು ಬಲ್ಮ್ಕರಿಯ ಶಾಸನದಲ್ಲಿ. ಅದರ ಕಾಲವು ಈಚಿನದು ಎಂದರೆ ಕ್ರಿ.ಶ. ೧೦೧೨. ಆದರೆ ಈ ನಾಡು ಅದಕ್ಕಿಂತಲೂ ಪ್ರಾಚೀನವಾದುದು. ಈ ನಾಡಿಗೆ ಸಂಬಂಧಿಸಿದ ಅತಿ ಪ್ರಾಚೀನ ಉಲ್ಲೇಖವೆಂದರೆ ಹರಿವಂಶ ಪುರಾಣದಲ್ಲಿಯ (ಕ್ರಿ.ಪೂ. ೩ನೇ ಶತಮಾನ) ಮುದ್ಗರ ಅಥವಾ ಮೊಗೇರರದು. ಇಂದಿನ ತುಳುನಾಡ ನಿವಾಸಿಗಳಲ್ಲಿ ಇಂದಿಗೂ ಈ ಮೊಗೇರರು ಮುಖ್ಯರಾಗಿ ಇದ್ದಾರೆ.

ಹಾಗಿದ್ದರೆ ತುಳುನಾಡಿನ ಪೂರ್ವದ ಹೆಸರು ಏನಿದ್ದಿತು? ಕ್ರಿ.ಶ. ಪೂರ್ವಕಾಲದ ಅಶೋಕನ ಒಂದು ಕಿರುಶಾಸನದಲ್ಲಿ "ಸತಿಯ ಪುತ್ರ" ಎಂಬ ಸೀಮೆಯ ಪ್ರಸ್ತಾಪವಿದೆ (ಕ್ರಿ.ಶ. ಪೂ. ೩). ಅನಂತರ ಮಾರ್ಕಂಡೇಯ ಪುರಾಣ, ವರಾಹಮಿಹಿರನ ಬೃಹತ್ ಸಂಹಿತೆ ಮುಂತಾದುವುಗಳಲ್ಲಿ ಶಾಂತಿಕವೆಂಬ ಪ್ರದೇಶದ ಉಲ್ಲೇಖ ಬರುತ್ತದೆ. ಅವೆರಡೂ ತುಳುನಾಡಿಗೆ ಸಂಬಂಧಿಸಿದವುಗಳು. ಪರಶುರಾಮ ನಿರ್ಮಿತ ಸಪ್ತಕೊಂಕಣಗಳಲ್ಲಿ ಈ ಪ್ರದೇಶವೂ ಸಮಾವೇಶವಾಗಿದ್ದು, ಆಗ ಅದರ ಹೆಸರು ಆಲುವ ಎಂದಿದ್ದಿತು. ಇದೂ ತುಳುನಾಡಿಗೆ ಸಮಾನಾರ್ಥಕ ಪದವೇ ಎಂದು ಪೈಯವರ ಮತ.

(iii) **ರಾಜರು:** ಈ ಆಲುವ ಪ್ರದೇಶವನ್ನೇ ಆಳುಪರೆಂಬ ರಾಜಮನೆತನದವರು ಕ್ರಿ.ಶ. ೨ ರಿಂದ ೧೫ನೇ ಶತಮಾನದ ವರೆಗೆ ಆಳಿದರು. ತುಳುನಾಡಿನ ಪ್ರಾಚೀನ ಚರಿತ್ರೆಯಲ್ಲಿ ಪ್ರಮುಖನಾಗಿ ಬರುವ ಭೂತಾಳ ಪಾಂಡ್ಯನು ಈ ಆಳುಪ ಮನೆತನದವನೇ. ತುಳುನಾಡವರ ಮನೆಮಾತಾಗಿದ್ದ ಈ ವ್ಯಕ್ತಿಯು ಒಬ್ಬ ಕಾಲ್ಪನಿಕ ಪವಾಡಪುರುಷನಂತಿದ್ದ. ಆದರೆ ಅವನು ಐತಿಹಾಸಿಕ ವ್ಯಕ್ತಿಯೇ ಆಗಿ, ಕ್ರಿಸ್ತಶಕಾರಂಭದಲ್ಲಿ ಇದ್ದವ ಎಂಬುದನ್ನು ಪೈಯವರು ತೋರಿಸಿಕೊಟ್ಟಿದ್ದಾರೆ. ಆದರಂತೆ ತುಳುನಾಡಿನಲ್ಲಿ ಮಾತ್ರ ರಾಜ್ಯವಾಳಿದ ಅಜಿಲರಸರ ಬಗ್ಗೆಯೂ ವಿಶೇಷ ಪರಿಶೋಧನೆ ಮಾಡಿ, ಅದುವರೆಗೆ ಅಪ್ರಸಿದ್ಧರಾಗಿದ್ದ ಅಜಿಲರಸರಿಗೆ ಇತಿಹಾಸದ ಪುಟಗಳಲ್ಲಿ ಸ್ಥಾನವನ್ನು ದೊರಕಿಸಿಕೊಟ್ಟಿದ್ದಾರೆ.

(iv) **ಧಾರ್ಮಿಕ ಚರಿತ್ರೆ:** ತುಳುನಾಡಿನ ಧಾರ್ಮಿಕ ಚರಿತ್ರೆಯನ್ನೂ ತುಸು ಮಟ್ಟಿಗೆ ಚಿತ್ರಿಸಿದ್ದಾರೆ. ಈ ದಿಸೆಯಲ್ಲಿ ಅವರು ಕಂಡುಹಿಡಿದ ಒಂದು ಮಹತ್ವದ ಅಂಶವೆಂದರೆ ತುಳುನಾಡಿನಲ್ಲಿರುವ ನಾಥಪಂಥದ ಅವಶೇಷಗಳು. ನಾಥಪಂಥವು ಬೌದ್ಧ-ಶೈವ ಮತಗಳ ಸಮನ್ವಯವುಳ್ಳದ್ದು. ಈ ಪಂಥವು ಕದಿರೆಯ ಸುತ್ತುಮುತ್ತು ನಿಶ್ಚಿತವಾಗಿ ಇತ್ತೆಂಬುದನ್ನು ಪ್ರಥಮ ಬಾರಿಗೆ ಪೈ ಕಂಡುಹಿಡಿದಿದ್ದಾರೆ. ಕ್ರಿ.ಶ. ಆರಂಭದಲ್ಲಿ ಕದಿರೆಯಲ್ಲಿ ಮಂಜು ಘೋಷ (ನಾಥ) ಎಂಬ ಬೋಧಿಸತ್ವನ ವಿಹಾರವಿದ್ದಿತು. ಭಾರತದ ಇತರ ಕಡೆಗಳಂತೆ ಬೌದ್ಧ ಧರ್ಮವು ಇಲ್ಲಿಯೂ ಖಿಲವಾಯಿತು. ಮುಂದೆ ಮತ್ಸ್ಯೇಂದ್ರನೆಂಬ ನಾಥಪಂಥ ಪ್ರವರ್ತಕನು (ಕ್ರಿ.ಶ. ೯ನೇ ಶತ) ದೂರದ ಬಂಗಾಲದಿಂದ ನಮ್ಮಲ್ಲಿಗೆ ಬಂದು ಕದಿರೆಯಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿ, ಅದಕ್ಕೆ ಮುನ್ನಿನ ಮಂಜುನಾಥ ಎಂಬ ಹೆಸರನ್ನೇ ಇಟ್ಟಿರಬೇಕು. ಶಿವನಿಗೆ ಮಂಜುನಾಥ ಎಂಬ ಹೆಸರು ಯಾವ(ಶೈವ) ಪುರಾಣದಲ್ಲಿಯೂ ಇಲ್ಲ; ಕದಿರೆಯ ಶಿವಲಿಂಗಕ್ಕೆ

ಮಾತ್ರ ಈ ಹೆಸರೇಕೆ ಎಂಬ ಜಿಜ್ಞಾಸೆ ಮೂಡಿದಾಗ ಮೇಲೆ ಹೇಳಿದಂತೆ ನಾಥಪಂಥದ ಪ್ರಭಾವವೇ ಕಾರಣವೆಂದು ಪೈಯವರು ಹೇಳಿದ್ದಾರೆ. ಧರ್ಮಸ್ಥಳದಲ್ಲಿಯೂ ಶಿವಲಿಂಗವಿದೆಯಷ್ಟೆ. ಅಲ್ಲಿಯ ಶಿವಲಿಂಗವು ಕದಿರೆಯ ಶಕಲವೇ ಆದ್ದರಿಂದ, ಅದಕ್ಕೂ ಮಂಜುನಾಥ ಎಂಬ ಹೆಸರೇ ಪ್ರಾಪ್ತವಾಯಿತು (ಸಮರ್ಪಣೆ, ೧೯೫೦).

(v) **ತುಳುನಾಡಿಗೆ ಗ್ರೀಕ್ ಸಂಬಂಧ:** ಕ್ರಿ.ಶ. ೨ನೆಯ ಶತಮಾನದಲ್ಲಿ ರಚಿತವಾದ ಗ್ರೀಕ್ ಪ್ರಹಸನದ ಕಥಾಭೂಮಿಯು ತುಳುನಾಡಿನ ಉದ್ಯಾವರವೆಂದೂ, ಅದರಲ್ಲಿ ಬರುವ ಕೆಲವು ಶಬ್ದಗಳು ಕನ್ನಡದವೆಂದೂ ಪೈಯವರು ನಿಷ್ಕರ್ಷಿಸಿದ್ದಾರೆ (ಪ್ರ.ಕ. ೧೯೨೯). ಆ ಪ್ರಹಸನದ ಕಥೆ ಹೀಗಿದೆ: ಓರ್ವ ಗ್ರೀಕ್ ಕನ್ನಿಕೆಯು, ಹಿಂದೂ ಮಹಾಸಾಗರದಲ್ಲಾದ ನೌಕಾಘಾತದ ಮೂಲಕ ಸಮುದ್ರ ತೀರದ ಒಂದು ಊರಿಗೆ ಬರುತ್ತಾಳೆ. ಯಾವುದು ಆ ಊರು? ಆ ಪ್ರಹಸನದಲ್ಲಿ ಬರುವ ಸೋಮೇಶ್ವರ ದೇವಾಲಯ ಹಾಗೂ ಆಳುಪ ನಾಯಕರ ಉಲ್ಲೇಖಗಳಿಂದಾಗಿ ಆ ಕಡಲ ತೀರವು ಉದ್ಯಾವರವೇ ಎಂದು ಪ್ರಮಾಣ ಸಹಿತವಾಗಿ ಪೈಯವರು ಸಿದ್ಧಮಾಡಿದರು. ಆ ಮುಂದೆ ಗ್ರೀಕ್ ನಾವಿಕರು ಅವಳ ಪತ್ತೆ ಹಚ್ಚಿ, ಸ್ಥಳಿಕ (ಎಂದರೆ ಆಳುಪ) ರಾಜನ ಅನುಮತಿಯನ್ನು ಪಡೆದು ಅವಳನ್ನು ತಿರುಗಿ ಕರೆದೊಯ್ಯುವ ಕಾಲಕ್ಕೆ ಪಾನಗೋಷ್ಠಿ ನಡೆದ ಅಂಶವು ಪ್ರಹಸನದಲ್ಲಿ ಬಂದಿದೆ. ಆ ಸಮಯಕ್ಕೆ ಸ್ಥಳಿಕರು ಆಡಿದ 'ಪಿ ಕೂಸೇ', 'ಕರೆವನೊ', 'ಬೈತಿ', 'ಪೊರಟೆ', ಮುಂತಾದ ಕನ್ನಡ ಮಾತುಗಳು ಉಕ್ತವಾಗಿವೆ. ಗ್ರೀಕ್ ಭಾಷೆಗೆ ಒಗ್ಗುವಂತೆ ಅವು ಪರಿವರ್ತನ ಹೊಂದಿದ್ದರೂ ಆ ಶಬ್ದಗಳು ಅನ್ಯಭಾಷೆಯವಾಗಿದ್ದರಿಂದ, ಆ ಪ್ರಹಸನದ ಸಂಪಾದಕರಿಗೆ ಅವುಗಳ ಅರ್ಥವಾಗಿರಲಿಲ್ಲ. ಗ್ರೀಕ್ ಮತ್ತು ಕನ್ನಡ ಇವೆರಡನ್ನೂ ಬಲ್ಲ ಗೋವಿಂದ ಪೈಯವರಿಂದ ಆ ಕೆಲಸ ನೆರವೇರಿತು. ಅದರಿಂದ ತುಳುನಾಡವರ ಕಡಲ ವ್ಯವಹಾರವು ಕ್ರಿಸ್ತಯುಗ ಪೂರ್ವದಲ್ಲಿಯೇ ಸಾಕಷ್ಟು ವ್ಯಾಪಕವಾಗಿತ್ತೆಂದೂ, ದೂರದ ಗ್ರೀಕರೊಡನೆ ಸಂಪರ್ಕವೂ ಇದ್ದಿತಲ್ಲದೆ ಇಲ್ಲಿಯವರ ನಾಗರಿಕ ಜೀವನವು ಉಚ್ಚಮಟ್ಟದ್ದಾಗಿತ್ತೆಂದೂ ಊಹಿಸಬಹುದಾಗಿದೆ.*

(vi) **ಮಂಗಳೂರಿನ ಪ್ರಾಚೀನತೆ:** ಉದ್ಯಾವರವಲ್ಲದೆ ಇನ್ನು ಕೆಲವು ಊರುಗಳ ಪ್ರಾಚೀನ ಕುರುಹುಗಳನ್ನು, ಶಾಸನ, ಪುರಾಣಗಳಿಂದ ಆಯ್ದು ಒಂದೆಡೆ ಕೊಟ್ಟಿದ್ದಾರೆ. ಇಂದಿನ ಮಂಗಳೂರು ೮ನೆಯ ಶತಮಾನದಲ್ಲಿ ಕೂಡ ಒಂದು ಮಹಾ ನಗರವೆಂದು ಪರಿಭಾವಿಸಲ್ಪಡುತ್ತಿದ್ದ ಅಂಶವು ಹೊರಪಟ್ಟಿದೆ. ಇಷ್ಟೇ ಅಲ್ಲದೆ, ಕ್ರಿಸ್ತ ಶಕಾರಂಭದಿಂದಲೂ, ಮಂಗಳೂರಿನ ಹಾಗೂ ಅದರ ನೆರೆಯ ನೇತ್ರಾವತೀ ನದಿಯ ಉಲ್ಲೇಖ, ವರ್ಣನೆಗಳು ದೊರೆಯುತ್ತವೆ. ಅದರಂತೆ ಮೂಲ್ಕಿಯ ಇತಿಹಾಸವನ್ನೂ ಸಂಕ್ಷೇಪವಾಗಿ ಒಂದೆಡೆ ಕೊಟ್ಟಿದ್ದಾರೆ. (ಮೂಲ್ಕಿ ಗವರ್ನ್‌ಮೆಂಟ್ ಹೈಸ್ಕೂಲ್ ಪತ್ರಿಕೆ, ೧೯೫೯-೬೦).

---

* ಇಲ್ಲಿರುವ ಮಾತುಗಳು ಕನ್ನಡವಲ್ಲ; ತುಳು ಭಾಷೆಯವು ಎಂಬ ಸೂಚನೆ ಈಚೆಗೆ ಮುಂಬಂದಿದೆ - ಶಿವಪ್ರಸಾದ ರೈ ಅವರಿಂದ.

(vii) ತುಳುನಾಡಿನ ಶಾಸನಗಳು: ಬೇರೆ ಬೇರೆ ಪ್ರಸಂಗಗಳಲ್ಲೇ ಆಗಲಿ, ಪೈಯವರು ತುಳುನಾಡಿನಲ್ಲಿರುವ ಅನೇಕ ಶಾಸನಗಳನ್ನು ಪರಿಶೀಲಿಸಿದ್ದರು. ಅವರು ಪರಿಶೀಲಿಸಿದ ಶಾಸನಗಳು ಹೆಚ್ಚಾಗಿ ದೊರೆವುದು ವೇಣೂರು, ಕಾರ್ಕಳ ಮತ್ತು ಕದಿರೆಗಳಲ್ಲಿ. ಗೊಮ್ಮಟ ಮಹಾಮೂರ್ತಿಗಳಿರುವ ವೇಣೂರು, ಕಾರ್ಕಳ ಈ ಊರುಗಳ ಶಾಸನಗಳನ್ನು ಅಭ್ಯಸಿಸಿ, ಆ ಮೂರ್ತಿಗಳ ಪ್ರತಿಷ್ಠಾನ ತೇದಿಗಳನ್ನು ಬೆಳಕಿಗೆ ತಂದಿದ್ದಾರೆ (ವೇಣೂರಿನದು; ೧-೩-೧೬೦೪. ಕಾರ್ಕಳದ್ದು : ೧೩-೨-೧೪೩೨).

(viii) ಹಲವು ಪ್ರಸಿದ್ಧ ವ್ಯಕ್ತಿಗಳು: ತುಳುನಾಡಿನಲ್ಲಿ ಜನಿಸಿದ ಶ್ರೀ ಮಧ್ವಾಚಾರ್ಯ, ರತ್ನಾಕರವರ್ಣಿ, ಪಾರ್ತಿಸುಬ್ಬ, ಮುದ್ದಣ*, ಇವರ ಚರಿತ್ರೆಗೆ ಸಂಬಂಧಿಸಿದ ಹಲವಾರು ಸಂದಿಗ್ಧ ಅಂಶಗಳನ್ನು ಸಮಗೊಳಿಸಿ, ಅವರೆಲ್ಲರ ಕಾಲದ ನಿರ್ಣಯ ಮಾಡಿದ್ದಾರೆ. ವಿಶ್ವಸಾಹಿತ್ಯದ ವೇದಿಕೆಯಲ್ಲಿ, ರತ್ನಾಕರವರ್ಣಿ ಮತ್ತು ಮುದ್ದಣರು ತುಳುನಾಡಿನ ಪ್ರತಿನಿಧಿಗಳು ಎಂಬ ಮಾತನ್ನು ಹೇಳಿದ್ದಾರೆ. ಇವರಿಗಿಂತ ಈಚಿನವರಾದ ಪಂಜೆಯವರು, ಎಂ. ಎನ್. ಕಾಮತ್, ಎನ್. ಎಸ್. ಕಿಲ್ಲೆ ಇವರ ಕುರಿತಾದ ವ್ಯಕ್ತಿಚಿತ್ರಗಳಲ್ಲಿ ಕನ್ನಡಕ್ಕೆ ಈ ಮಹನೀಯರುಗಳು ಸಲ್ಲಿಸಿದ ಸೇವೆಯ ವಿವರಣೆ ಇದೆ.

ತುಳುನಾಡಿನಲ್ಲಿ ಪ್ರಧಾನವಾಗಿ ಇರುವ ಅಳಿಯಕಟ್ಟಿನ ಪರಂಪರೆ, ಅಲ್ಲಿಯ ಜಾನಪದ ಕತೆಗಳು, ಇವುಗಳ ಬಗ್ಗೆಯೂ ಪೈಯವರು ವಿವೇಚನೆ ನಡೆಸಿದ್ದಾರೆ (ಜಯ ಕರ್ನಾಟಕ, ೧೯೫೩). ತುಳುನಾಡಿನ ಕಾಸರಗೋಡು ಕೈ ಬಿಟ್ಟಿತೆಂಬ ಪ್ರಚಲಿತ ವಿಷಯದ ವಿವೇಚನೆಯೂ ಲೇಖರೂಪದಲ್ಲಿ ವ್ಯಕ್ತವಾಗಿದೆ (ಲೋಕವಾಣಿ, ೧೯೫೭).

ಇದಿಷ್ಟೇ ವಿವರಣೆಯಿಂದ, ತುಳುನಾಡಿನ ಕುರಿತಾದ ಸಂಶೋಧನೆಯಲ್ಲಿ ಪೈಯವರ ಪಾತ್ರ ಹಿರಿದು ಎಂಬ ಕಲ್ಪನೆ ಬಾರದಿರದು. ತಮ್ಮ ನಾಡಿನ ವಿವಿಧಾಂಗಗಳನ್ನು ಇರುಳ ಕತ್ತಲೆಯಿಂದ ಹೊರತೆಗೆದ ಪೈಯವರಿಗೆ ತುಳುನಾಡವರು ಸದೈವ ಋಣಿಯಾಗಿದ್ದಾರೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಹೀಗೆ ತುಳುನಾಡ ದೇವಿಯನ್ನು ಮೂರ್ತೀಕರಿಸಿ, ಅವಳ ಸಕೃದ್ದರ್ಶನ ಪಡೆದಿದ್ದ ಪೈಯವರು, 'ತೌಳವ ಮಾತೆ'ಯನ್ನು ಭಾವಪೂರ್ಣವಾಗಿ ಸ್ತುತಿಸಿದ್ದಾರೆ:

ಜಯ ಜಯ ತೌಳವ ತಾಯೇ, ಮಣಿವೆ ತಂದೆ ತಾಯಂದಿರ ತಾಯೇ
ಭಾರ್ಗವನಂದು ಬಿಸುಡೆ ಕೊಡಲಿಯ ನೀ ಕಡಲೊಡೆದೆಡೆಯಿಂ ಮೂಡಿ.
ಭಾರತಮಾತೆಯ ತೊಡೆಯೊಳೊಡಗೂಡಿಸೆ, ಸಹ್ಯ ವೀಣೆಯಿಂ ತೀಡಿ-
ದೆಸೆದೆಸೆ ರವಿಶಶಿ ಕಿರಣದ ಮಳೆಮಂಜಿನ ಮಿಸುಸೇಸೆಯ ಸೂಸೆ

---

* ಮಧ್ವಾಚಾರ್ಯರ ಕಾಲ ನಿರ್ಣಯಕ್ಕಾಗಿ ಕ. ಸಾ. ಪ. ೧೯೪೫, ರತ್ನಾಕರವರ್ಣಿಯದಕ್ಕಾಗಿ ಕ. ಸಾ. ಪ. ೧೯೪೩ ನೋಡುವುದು. ಪಾರ್ತಿಸುಬ್ಬ, ಮುದ್ದಣರ ಮೇಲಿನ ಅವರ ಲೇಖಗಳು ಹಲವಾರು ಕಡೆ ಮರು ಮುದ್ರಣಗೊಂಡಿವೆ.

ನವನವ ರಿತುಗಾನವನವತರಿಸುವೆ, ಗಗನವನಧಿಯೋಲೈಸೆ.
ಸಾತಿಯ ಪುತ್ರನ ತವರ್ಮನೆ, ಸಾತರ ತೆಂಕಣ ನೆಲೆಮನೆಯಲೂಪರಾ
ಕೆಳಮನೆ ಪಾಂಡ್ಯರ ಮೇಲ್ಮನೆ, ನೆರೆಯರಮನೆ ಕನ್ನಾಡಿನ ಭೂಪರಾ.
ಭೈರವ ಬಂಗರ ಚೌಟರಜಿಲ ಸಾವಂತರ ಮನೆಮನೆಯಿಂಬೇ
ತುಳುವರ ತಾಯ್ಮನೆಯುಳಿದರ ತಾಯ್ಮನೆ - ನೀನೆಮ್ಮಯ
ಮನೆಯೆಂಬೇ
ದೇಗುಲಗಳೊ ಧರ್ಮದ ಬಾಗಿಲಗಳೊ? ಪುಣ್ಯಂಘಟಂ ತಟನೀತಟಂ
ಬಸದಿಗಳೋ ಕನಸೇ ಕಲ್ಲಾದುವೊ? ನೆಲಬಿರಿದೆದ್ದರೆ ಗೊಮ್ಮಟಂ?
ನಿನ್ನ ಪುಲಕವೇ ಪಸರಿದಂತೆ ಪಸರಿಸಿದೀ ಸಸ್ಯದ ಚೆಲುವೇಂ|
ಜೀವನಸಾಮವನಾಡುವ ಪಾಡುವ ಖಗಮೃಗ ಪತಂಗದೊಲವೇಂ|
ಹಿಂದು ಜೈನ ಮುಸ್ಲೀಮ ಕ್ರೈಸ್ತರಾವೊಂದೇ ಬಾಂಧವರೆಮ್ಮಾ
ತಂದೆ ದೇವರೊಬ್ಬನೆ, ನೀನೊಬ್ಬಳೆ ನಮ್ಮೆಲ್ಲರ ತಾಯಮ್ಮಾ.

(ಗಿಳಿವಿಂಡು, ಪು. ೪೬)



# ೧೧ ಗೋವಿಂದ ಪೈಯವರ ಸಂಶೋಧನಾ ಕ್ರಮ

ಕನ್ನಡ ಸಂಶೋಧನಾ ರಂಗವು ಇಂದು ವಿಸ್ತಾರ/ವ್ಯಾಪ್ತಿಯನ್ನು ಪಡೆದಿದ್ದು, ಆರಂಭಕಾರರಿಗೆ ಈ ಹಿಂದಿನವರು ಯಾವ ರೀತಿ ಈ ಕ್ಷೇತ್ರದಲ್ಲಿ ಶ್ರಮಿಸಿದರೆಂದು ತಿಳಿಸುವುದು ಅಗತ್ಯವೆನಿಸಿದೆ. ಆದ್ದರಿಂದ ಪೈ ಅವರ ಸಂಶೋಧನಾ ಮಾರ್ಗದ ಪೂರ್ವಾಪರಗಳನ್ನು ಇಲ್ಲಿ ವಿವೇಚಿಸಬಯಸಿದೆ.

ಉಚ್ಚಮಟ್ಟದ ಮಾನಸದಲ್ಲಿ ಸತ್ಯಾನ್ವೇಷಣೆಯು ಒಂದು ಸಹಜ ಪ್ರವೃತ್ತಿಯಾಗಿದೆ. ಅನ್ವೇಷಣೆ ಎಂದರೆ ಯಾವುದೊಂದು ವಿಷಯ ಅಥವಾ ವಿಚಾರದ ಮೂಲವನ್ನು ತಿಳಿಯಬೇಕೆನ್ನುವ ಜಿಜ್ಞಾಸೆ ಮತ್ತು ಅದಕ್ಕಾಗಿ ಪ್ರಯತ್ನ. ದೈವಿಕತೆಯ ಅನ್ವೇಷಣೆಯಲ್ಲಿ ತೊಡಗಿದವನು ತತ್ವಜ್ಞಾನಿಯೆನಿಸಿಕೊಳ್ಳುತ್ತಾನೆ. ಭೌತಿಕ ವಿಷಯಗಳ ಮೂಲಶೋಧದಲ್ಲಿ ತೊಡಗಿದವನು ವಿಜ್ಞಾನಿಯಾಗುತ್ತಾನೆ. ಗತಕಾಲದಲ್ಲಿ ಏನು ನಡೆಯಿತೆಂಬುದರ ಸತ್ಯಾಂಶವನ್ನು ತಿಳಿಯಬಯಸುವವನು ಇತಿಹಾಸ ಸಂಶೋಧಕನೆನಿಸುತ್ತಾನೆ.

ಇತಿಹಾಸ ಸಂಶೋಧಕರಲ್ಲಿ ಇರಬೇಕಾದ ಮುಖ್ಯ ಗುಣಗಳಾವುವು? ಮೊದಲಲ್ಲಿ ಅವಶ್ಯವಾಗಿ ಇರಬೇಕಾದುದು ವಿದ್ವತ್ತು. ಶೀಘ್ರ ಗ್ರಹಣಶಕ್ತಿ, ವಿವೇಚನಾ ಸಾಮರ್ಥ್ಯ , ಹರಿತವಾದ ತರ್ಕ ಸರಣಿ ಮತ್ತು ಸ್ಮರಣಶಕ್ತಿ - ಈ ಜನ್ಮಜಾತ ಪ್ರವೃತ್ತಿಗಳಿಂದಾಗಿ ಅವನ ವ್ಯಾಸಂಗವು ಬೆಳೆಯುತ್ತದೆ. ಹೀಗೆ ಬುದ್ಧಿವಂತಿಕೆ ಮತ್ತು ವ್ಯಾಸಂಗಗಳ ಸಂಗಮದಿಂದ ಮೂರ್ತೀಭವಿಸಿದ ವಿದ್ವತ್ತೇ ಸಂಶೋಧನ ಕಾರ್ಯದ ಪ್ರಥಮ ಸೋಪಾನವಾಗಿದೆ.

ವಿದ್ವತ್ತು: ಗೋವಿಂದ ಪೈಯವರು ಪ್ರಥಮ ದರ್ಜೆಯ ವಿದ್ವಾಂಸರಾಗಿದ್ದರೆಂಬ ಮಾತು ನಿಸ್ಸಂದಿಗ್ಧವಾದುದು. ಅವರ ಆಸಕ್ತಿಯ ವಿಷಯಗಳಲ್ಲಿ ಮುಖ್ಯವಾದುವುಗಳೆಂದರೆ, ಕಾವ್ಯಗ್ರಂಥಗಳು, ವಿವಿಧ ಧರ್ಮಗಳ ತಾತ್ವಿಕ ಹಾಗೂ ಪುರಾಣಗ್ರಂಥಗಳು, ವ್ಯಾಕರಣ, ಜ್ಯೋತಿಷ ಶಾಸ್ತ್ರಗಳು, ಅಲ್ಲದೆ ಅನೇಕ ನಾಡುನುಡಿಗಳ ಚರಿತ್ರೆ. ಇವುಗಳಲ್ಲಿಯ ಯಾವುದೇ ಅಂಶವನ್ನು ಚೆನ್ನಾಗಿ ಮನನ ಮಾಡಿಕೊಂಡು ಬೇಕಾದ ಸಂದರ್ಭದಲ್ಲಿ ಅಸ್ಖಲಿತವಾಗಿ ವಿವರಿಸುವಷ್ಟು ಅವರು ಪರಿಣತಿಯನ್ನು ಹೊಂದಿದ್ದರು. ಜ್ಯೋತಿಷ ಶಾಸ್ತ್ರದ ಸ್ಕಂಧತ್ರಯಗಳಾದ ಗಣಿತ, ಸಂಹಿತೆ ಮತ್ತು ಹೋರಾ ಇವುಗಳಲ್ಲಿ, ಗಣಿತಜ್ಞಾನವು ರಾಜರ

ಹಾಗೂ ಕವಿಗಳ ಕಾಲವನ್ನು ನಿರ್ಣಯಿಸುವುದಕ್ಕೆ ಸಹಾಯಕವಾಗುವಂತಹುದಷ್ಟೆ. ಪೈಯವರು ಇದರಲ್ಲಿ ನಿಸ್ಸೀಮ ಪಾಂಡಿತ್ಯವನ್ನು ಪಡೆದಿದ್ದರಲ್ಲದೆ ಫಲಬೋಧಕಗಳಾದ ಇನ್ನೆರಡು ಸ್ಕಂಧಗಳನ್ನೂ ಕಲಿತವರೇ ಆಗಿದ್ದರು. ಭಗವದ್ಗೀತೆಯ ವಿಷಯಕ್ಕೆ ಅವರು ಪ್ರತ್ಯೇಕ ಲೇಖನವನ್ನು ಬರೆದಿರದಿದ್ದರೂ ವ್ಯಾಖ್ಯಾನ ಸಹಿತವಾಗಿ ಅದರ ಶ್ಲೋಕಗಳ ಪರಾಮರ್ಶೆಯನ್ನೂ ಮಾಡಬಲ್ಲವರಾಗಿದ್ದರು. ಪೈಯವರಷ್ಟು ಜ್ಞಾನಸಾಧನೆಯುಳ್ಳ ಅನ್ಯ ಭಾರತೀಯ ವಿದ್ವಾಂಸರು ಹಿಂದಿನ ತಲೆಮಾರಿನವರಲ್ಲಿ ಬೆರಳೆಣಿಕೆಯ ಜನ ಮಾತ್ರ ಎನ್ನಬಹುದು.

ಅವರ ಜ್ಞಾನಸಾಧನೆಯ ಸ್ಥೂಲ ಕಲ್ಪನೆ ಬೇಕೆಂದರೆ, ಅವರ ಯಾವುದೇ ಲೇಖನದ ಅಡಿಟಿಪ್ಪಣಿ ರೂಪದ ಆಧಾರ ಗ್ರಂಥಗಳ ಸೂಚಿಯನ್ನು ಪರಿಶೀಲಿಸಬಹುದು. ಬುದ್ಧನ ಪರಿನಿರ್ವಾಣವನ್ನು ಕುರಿತ ಕೇವಲ ೧೨ ಪುಟದ ಇಂಗ್ಲಿಶ್ ಲೇಖನಕ್ಕೆ ೫೫ ವಿವಿಧ ಲೇಖನಗಳ ಆಧಾರ - ಅಡಿಟಿಪ್ಪಣಿಗಳನ್ನು ಕೊಟ್ಟಿದ್ದಾರೆ. ಆದಾಗ್ಯೂ ಅವರು ತಮ್ಮ ವಿದ್ವತ್ತಿನ ಚತುರ್ಥಾಂಶವನ್ನಾದರೂ, ಲೇಖನ ರೂಪದಲ್ಲಿ ಇಳಿಸಿದ್ದಾರೆಯೆ, ಎಂದು ನಮಗೆ ಸಂದೇಹ.

ಪೈಯವರು ತಮ್ಮ ಸಂಶೋಧನ ಕಾರ್ಯದಲ್ಲಿ ದ್ವಿತೀಯ ಭಾವದ (secondary) ಆಕರಗಳನ್ನು ನೇರವಾಗಿ ಸ್ವೀಕರಿಸುತ್ತಿದ್ದಿಲ್ಲ. ಕ್ರಿಸ್ತ ಚರಿತೆಯ ದೃಷ್ಟಿಯಿಂದ ಬೈಬಲಿನ ಹಳೆ, ಹೊಸ ಒಡಂಬಡಿಕೆಗಳನ್ನು ಓದುವಾಗ ಅವುಗಳ ಅಧಿಕೃತ ಇಂಗ್ಲಿಶ್ ಭಾಷಾಂತರದಿಂದ ತೃಪ್ತಿ ಹೊಂದದೇ ಅವುಗಳನ್ನು ಮೂಲದ ಹಿಬ್ರು, ಗ್ರೀಕ್ ಭಾಷೆಯಲ್ಲಿಯೆ ಅಭ್ಯಾಸ ಮಾಡಬೇಕೆನ್ನುವ ಪ್ರವೃತ್ತಿ ಅವರದು. ಇದೇ ಕಾರಣದಿಂದ, ಎಂದರೆ ಮೂಲ ಆಧಾರಗಳನ್ನು ಸ್ವಯಂ ಪರಿಶೀಲಿಸುವ ಬಯಕೆಯಿಂದಾಗಿ, ಅವರು ಅನ್ಯ ಭಾಷೆಗಳನ್ನು ಕಲಿತರು. ಆ ಭಾಷೆಗಳ ವ್ಯವಹಾರಾತ್ಮಕ ಜ್ಞಾನ (working knowledge) ಅಷ್ಟೇ ಹೇಗೆ ನಡೆದೀತು? ಆದ್ದರಿಂದ ಅಂಥ ಭಾಷೆಗಳಲ್ಲಿ ಪರಿಣತಿಯನ್ನೂ ಹೊಂದಿದ್ದರು.

ಸುಮಾರು ೨೦ ಭಾಷೆಗಳಲ್ಲಿಯ ಅವರ ಪರಿಣತಿಯ ಹಿನ್ನೆಲೆಯನ್ನು ಹೀಗೆ ಗುರುತಿಸಬಹುದು. ಕನ್ನಡ, ಕೊಂಕಣಿ, ತುಳು ಮತ್ತು ಇಂಗ್ಲಿಶ್ ಇವು ಎಂತಿದ್ದರೂ ಅವರಿಗೆ ಅವಗತವಾಗಬೇಕಿದ್ದವುಗಳೇ. ನೆರೆಯ ಭಾಷೆಗಳಾದ ಮರಾಠೀ ಮತ್ತು ಮಲೆಯಾಳೀ ಭಾಷೆಗಳ ಪರಿಚಯವೂ ಸಹಜವಾಗಿ ಒದಗಿ ಬಂದುದೇ ಆಗಿದೆ. ಶಾಸನ ಹಾಗೂ ಪುರಾತನ ಕಾವ್ಯ-ಶಾಸ್ತ್ರ ಗ್ರಂಥಗಳ ಅಭ್ಯಾಸದ ಕಾರಣದಿಂದಾಗಿ ಅವರು ಸಂಸ್ಕೃತ, ಪ್ರಾಕೃತ, ಪಾಲೀ, ಅರ್ಧಮಾಗಧೀ ಇವುಗಳನ್ನು ಕಲಿಯಲೇಬೇಕಾಯಿತು. ಉತ್ತರದ ಬೌದ್ಧ ಪಂಡಿತರೊಡನೆ ಪಾಲೀ ಭಾಷೆಯಲ್ಲಿ ಪತ್ರವ್ಯವಹಾರ ಮಾಡುವಷ್ಟು ಆ ಭಾಷೆಯಲ್ಲಿ ಪರಿಜ್ಞಾನ ಅವರಿಗಿದ್ದಿತು. ಈ ನಾಲ್ಕೂ ಭಾಷೆಗಳ ವಿಶೇಷ ಪರಿಜ್ಞಾನದಿಂದಾಗಿಯೆ, ಜೈನ, ಬೌದ್ಧ ಧರ್ಮ ವಿಚಾರದ ಅವರ ಸಂಶೋಧನೆಯು ಸುಗಮವಾಯಿತು. ಹೀಗೆಯೇ ಬೇರೆ ಸಂಶೋಧನ ಲೇಖನಗಳ ಪರಿಶೀಲನೆಯ ದೃಷ್ಟಿಯಿಂದ ಹಿಂದೀ, ಉರ್ದು, ತಮಿಳು, ತೆಲುಗು, ಒರಿಯಾ ಈ ಭಾಷೆಗಳನ್ನು ರೂಢಿಸಿಕೊಂಡಿರಬೇಕು. ಆದರೆ ಭಾರತೀಯ ಭಾಷೆಗಳನ್ನು ರೂಢಿಸಿಕೊಂಡಿರಬೇಕು. ಆದರೆ

ಭಾರತೀಯ ಭಾಷೆಗಳಲ್ಲಿ ಇವರು ಮೊದಲು ಕಲಿತುದೆಂದರೆ ಬಂಗಾಲಿ. ಕೇಶವಚಂದ್ರ ಸೇನ್, ರವೀಂದ್ರನಾಥ ಠಾಕೂರ ಮುಂತಾದವರ ಬರಹಕ್ಕೆ ಮನಸೋತುದೇ ಇದರ ಕಾರಣವಾಗಿದೆ. ಅವರ ಬರವಣಿಗೆಯ ಆರಂಭಕಾಲದ ಬಂಗಾಲೀ ಅನುವಾದಗಳು ಇದಕ್ಕೆ ಸಾಕ್ಷಿಯಾಗಿವೆ. ಅವರು ಜಾಪಾನೀ ಭಾಷೆಯನ್ನು ಕಲಿಯಲು ಮನಸ್ಸು ಮಾಡಿದುದು 'ನೋ' ನಾಟಕಗಳಿಂದಾಗಿ.

ಕ್ರಿಸ್ತಶಕದ ಒಳಹೊರಗೆ ಭಾರತಕ್ಕೆ ಬಂದ, ಹಾಗೂ ರಾಜ್ಯವಾಳಿದ ವಿದೇಶೀಯರ ಕುರಿತ ಸಂಶೋಧನೆ ಮಾಡುವಾಗ ಅವರು ಗ್ರೀಕ್, ಲ್ಯಾಟಿನ್, ಪರ್ಶಿಯನ್ ಭಾಷೆಗಳನ್ನು ಕಲಿಯಬೇಕಾಗಿ ಬಂತು. ಅವರ ಗ್ರೀಕ್ ಭಾಷೆಯ ಪರಿಣತಿಯ ಫಲವಾಗಿಯೆ, ನಮಗೆ ಒಂದು ಯಃಕೃಶ್ಚಿತವಾದ ಗ್ರೀಕ್ ಪ್ರಹಸನದಲ್ಲಿ ಹುದುಗಿದ ಪ್ರಾಚೀನ ಕರ್ನಾಟಕದ ಕರಾವಳಿಯ ಪದಸಮೂಹದ ವಿಚಾರವು ಹೊರಪಟ್ಟಿತಲ್ಲವೆ. ಮತ್ತು ಪ್ಟೋಲೆಮಿಯು ವಿಚಿತ್ರವಾಗಿ ಉಚ್ಚರಿಸಿದ ಕನ್ನಡ ಊರುಗಳ ರೂಹು ತಿಳಿಯಬಂದು, ಪ್ರಾಚೀನ ಕರ್ನಾಟಕದ ಉತ್ತರ ಭಾಗದ ಭೌಗೋಲಿಕ ರೂಪರೇಷೆಯು ಕೆಲಮಟ್ಟಿಗೆ ಸಿದ್ಧವಾಯಿತು.

ಕುಶಾಗ್ರವಾದ ಬುದ್ಧಿಮತ್ತೆಯಿಂದಲೂ, ಬಹುಭಾಷಾ ಗ್ರಂಥಗಳ ವಾಚನದಿಂದಲೂ ಗ್ರಹಣ ಮಾಡಿದ ಅಂಶಗಳನ್ನು ಬೇಕೆಂದಾಗ, ಸಂಶೋಧನೆಯ ಕೆಲಸದಲ್ಲಿ ಬಳಸಿಕೊಳ್ಳುತ್ತಿದ್ದ ಪೈಯವರ ವಿವೇಚನಾ ಶಕ್ತಿಯು ಅದ್ಭುತವಾಗಿದ್ದಿತು. ಅವರ ಮೆದುಳಿನಲ್ಲಿ ವ್ಯವಸ್ಥಿತವಾಗಿ ಅವಿತುಕೊಂಡಿದ್ದ ಅವುಗಳನ್ನು ತಮಗೆ ಬೇಕಾದಷ್ಟರ ಮಟ್ಟಿಗೆ ಹೊರತೆಗೆದು ಅವರು ಲೇಖನದಲ್ಲಿ ಬಳಸುತ್ತಿದ್ದರು.

ರತ್ನಾಕರವರ್ಣಿಯ ಕಾಲವನ್ನು ಗೊತ್ತುಪಡಿಸುವ 'ಮಣಿಶೈಲ ಗತಿಯಿಂದು ಶಾಲಿ ಶಕ ಕಾಲಂ' ಎಂಬೊಂದು ಪದ್ಯವಿದೆ. ಇವುಗಳಲ್ಲಿ ಮಣಿ, ಶೈಲ ಮತ್ತು ಇಂದು ಇವುಗಳ ಸಾಂಕೇತಿಕ ಅಂಕಿಗಳೆಂದರೆ ೯, ೭ ಮತ್ತು ೧ ಎಂಬುದು ನಿಶ್ಚಿತವಾಗಿಯೆ ಇದ್ದಿತು. ಆದರೆ ಗತಿ ಎಂಬುದರ ಅರ್ಥವು ಮೂರೊ, ನಾಲ್ಕೊ ಎಂಬುದು ಸಂದಿಗ್ಧವಿದ್ದಾಗ, ಪೈಯವರು ಆ ಶಬ್ದವು, ೯ ರಿಂದ ೧೯ನೇ ಶತಮಾನದ ವರೆಗಿನ ಕನ್ನಡ, ಸಂಸ್ಕೃತ, ಪ್ರಾಕೃತ ಭಾಷಾ ಕಾವ್ಯಗಳಲ್ಲಿ, ಸಂಖ್ಯಾತ್ಮಕವಾಗಿ ಎಲ್ಲೆಲ್ಲಿ ಬಳಸಲ್ಪಟ್ಟಿದೆ ಎಂಬ ಬಗ್ಗೆ ಒಂದರ ಮೇಲೊಂದರಂತೆ ೧೪ ಉದಾಹರಣೆಗಳನ್ನು ಕೊಟ್ಟು, ಅದರ ಅರ್ಥ ೪ ಎಂಬುದಾಗಿ ತೋರಿಸಿಕೊಟ್ಟಿದ್ದಾರೆ. ಪ್ರಾಕೃತ ಕಾವ್ಯ 'ಗೊಮ್ಮಟ ಸಾರ'ದಲ್ಲಿ 'ಗಇತ್ತಿಯ ಹವೇ ಚದುಧಾ' ಎಂದು ಇದೆಯಂತೆ! ಬೇರೊಂದು ಸಂದರ್ಭದಲ್ಲಿ ಪ್ರಾಕೃತ 'ಗ್ರತಿ' ಪದವಿಚಾರ ಬಂದಾಗ, ಗೊಮ್ಮಟ ಸಾರದ ಆ ಪದ್ಯ ಚರಣವು ಅವರ ನೆನಪಿನ ಲೋಹಚುಂಬಕದಿಂದ ಸೆಳೆಯಲ್ಪಟ್ಟುದು ನಮ್ಮನ್ನು ಬೆರಗುಗೊಳಿಸುತ್ತದೆ.

ಪೈಯವರ ಸ್ಮರಣಶಕ್ತಿಯು ಅನೇಕರ ಗಮನಕ್ಕೆ ಬಂದುದೇ ಆಗಿದೆ. ಯಾವುದೊಂದು ಗತಕಾಲದ ವಿಚಾರವು, ಅವರೊಡನಾಗುವ ಸಂಭಾಷಣೆಯಲ್ಲಿ ಬಂದರೆ ಸಾಕು, ಅದಕ್ಕೆ ಸಂಬಂಧಿಸಿದ ತಿಥಿ, ವಾರ, ನಕ್ಷತ್ರ, ಮೂಲ ಸಾಮಗ್ರಿಯ ರಚನಾಕಾಲ- ಎಲ್ಲವೂ ಮೇಲ್ವಾಯ್ದು

ಹೊರಬರುತ್ತಿದ್ದುವು. ಈ ನೆನಪಿನ ಶಕ್ತಿಯು ತಮ್ಮ ಮುಪ್ಪಿನ ಕಾಲದಲ್ಲಿ ಕುಂಠಿತವಾಗಿದೆಯೆಂದು ಪೈಯವರು ಹೇಳುತ್ತಿದ್ದರೂ ಕೂಡ ಅವರು ' ಒಮ್ಮೆ ತಲೆ ಚಚ್ಚಿಕೊಂಡರಾಯಿತು', ಆ ಅಪರ ವಯಸ್ಸಿನಲ್ಲಿಯೂ ಅವರ ವಿಚಾರ ಮಂಡನೆಗೆ ನೆರವಾಗುತ್ತಿದ್ದಿತು.

ಹೀಗೆ ಅರಗಿಸಿಕೊಂಡ ಆಧಾರಗಳಿಂದ, ಹೊಸ ಮಾತನ್ನು ರೂಪಿಸಬೇಕಾದರೆ ಸಂಶೋಧಕನಲ್ಲಿ ಹರಿತವಾದ ತರ್ಕಸರಣಿ ಬೇಕು. ಆಧಾರ -ಪ್ರಮಾಣಗಳನ್ನು ಚೆನ್ನಾಗಿ ವಿಶ್ಲೇಷಿಸಿ ಅದರಲ್ಲಿಯ ಒಳ ಅರ್ಥವು ಹೀಗೇ ಇರಬೇಕೆಂದು ಹೇಳುವಲ್ಲಿ ತರ್ಕಬುದ್ಧಿಯು ತೀಕ್ಷ್ಣವಾಗಿದ್ದರೇನೇ ಸಾಧ್ಯವೆನ್ನಬಹುದು. ಮೇಲೆ ಹೇಳಿದ 'ಗತಿ' ಪದದ ೧೪ ಉದಾಹರಣೆಗಳಲ್ಲಿಯ ಒಂದು ಪದ್ಯದಲ್ಲಿ 'ಅಲಸದೆ ನಾಲ್ಕುಂ ಗತಿಯೊಳ್' ಎಂಬ ಮಾತು ಬರುತ್ತದೆ. ಸರಿ, 'ಗತಿ' ಎಂದರೆ ನಾಲ್ಕು ಎಂಬ ಅರ್ಥ ಇಲ್ಲಿಯೂ ಇದೆ ಎಂದು ಹೇಳಿ ಮುಂದೆ ಸಾಗಬಹುದಿತ್ತು. ಆದರೆ ಪೈಯವರ ತರ್ಕಸರಣಿ ಅದಕ್ಕೂ ಮುಂದೆ ಹೋಗಿ ವಿಶೇಷಾರ್ಥವನ್ನು ಅದರಲ್ಲಿ ಕಂಡುಕೊಂಡಿತು. ಆ ವಿಶೇಷಾರ್ಥವು ಹೀಗಿದೆ :

ಈ ಕಂದಪದ್ಯದಲ್ಲಿ ' ನಾಲ್ಕುಂ ಗತಿಯೊಳ್' (- ನಾಲ್ಕೂ ಗತಿಯಲ್ಲಿ) ಎಂದಿರುವಲ್ಲಿ ನಾಲ್ಕರ ಕೊನೆಯ 'ಉಂ' ಎಂಬ ಸಮುಚ್ಚಯ ಪದದಿಂದ ಗತಿಗಳು ನಾಲ್ಕೇ ವಿನಾ ಹೆಚ್ಚೂ ಅಲ್ಲ. ಕಡಿಮೆಯೂ ಅಲ್ಲವೆಂದು ತಿಳಿಯುತ್ತದೆ."

### ಇತಿಹಾಸ ಪ್ರಜ್ಞೆ

ಇತಿಹಾಸ ಸಂಶೋಧಕನಲ್ಲಿ ಇರಬೇಕಾದ ಇನ್ನೊಂದು ಗುಣವೆಂದರೆ ಇತಿಹಾಸಪ್ರಜ್ಞೆ. ಎಂದರೆ, ಅವನು ತನ್ನ ಸಂಶೋಧನೆಯ ಅಂಶಗಳನ್ನು ಆ ಕಾಲಮಾನ, ಪರಿಸರ ಪರಿಸ್ಥಿತಿಗಳನ್ನು ಅನುಲಕ್ಷಿಸಿಯೇ ಮಂಡಿಸಬೇಕಾಗುತ್ತದೆ. ಅವನು ಕಂಡುಹಿಡಿದ ವಿಚಾರವು ಅಂದಂದಿನ ಕಾಲ, ದೇಶಗಳಿಗೆ ವ್ಯತಿರಿಕ್ತವಾಗಿ ಇರಕೂಡದು. ಇದು ಅಲ್ಲದೆ, ಅಪೂರ್ಣ ಹಾಗೂ ಅಸ್ಪಷ್ಟವೆನಿಸುವ ಆಧಾರ ಸಾಮಗ್ರಿಗಳಿಂದ, ಗತಕಾಲದ ಸಂಗತಿಗಳನ್ನು ಕಂಡುಹಿಡಿಯುವಲ್ಲಿಯೂ ಈ ಇತಿಹಾಸ ಪ್ರಜ್ಞೆಯು ಅತ್ಯಂತ ಜಾಗೃತವಾಗಿರಬೇಕಾಗುತ್ತದೆ. ಫೆರಿಷ್ತಾನ ಬಹಾಮನೀ ರಾಜ್ಯವೃತ್ತಾಂತವನ್ನಾಗಲೀ, ಕನ್ನಡ ಕವಿಗಳ ಕುರಿತ ದೇವಚಂದ್ರನ ರಾಜಾವಳೀ ಕಥೆಯನ್ನಾಗಲೀ ಯಾವ ಚರಿತ್ರಕಾರನೂ ನೇರವಾಗಿ ಸ್ವೀಕರಿಸಲಾರದಷ್ಟು, ಸತ್ಯವಲ್ಲದ ಸಂಗತಿಗಳನ್ನು ಅವು ಒಳಗೊಂಡಿವೆ. ಇದಕ್ಕೆ ವಿರುದ್ಧವಾಗಿ ಪೌರಾಣಿಕ ಕಥೆ ಹಾಗೂ ಜನಪದ ಐತಿಹ್ಯಗಳಲ್ಲಿಯೂ ಅನೇಕ ಕಾಲ್ಪನಿಕ ಸಂಗತಿಗಳೇ ಇದ್ದರೂ ಕೂಡ, ಅವುಗಳಲ್ಲಿಯೂ ಇತಿಹಾಸದ ಅಂಶಗಳು ಹುದುಗಿಕೊಂಡಿರುತ್ತವೆ. ಆದರೆ, ಉಸುಕಿನಿಂದ ಬಂಗಾರದ ಕಣಗಳನ್ನು ಆಯ್ದು ತೆಗೆಯುವಂತೆ ಇಂಥವುಗಳಿಂದ ಐತಿಹಾಸಿಕ ಅಂಶಗಳನ್ನು ಹೆಕ್ಕಿ ತೆಗೆಯುವುದಕ್ಕೂ ವಿಶಿಷ್ಟವಾದ ಇತಿಹಾಸ ಪ್ರಜ್ಞೆಯು ಬೇಕು.

ಪೈಯವರಲ್ಲಿ ಈ ಇತಿಹಾಸಪ್ರಜ್ಞೆಯು ಜ್ವಲಂತವಾಗಿ ಇತ್ತೆನ್ನುವುದಕ್ಕೆ ಅವರ ಪ್ರತಿಯೊಂದು ಬರಹವೂ ನಿದರ್ಶನವಾಗಿದೆ. ಪುರಾಣ, ಐತಿಹ್ಯಗಳಂತಹ ಅಸ್ಪಷ್ಟ ಹಾಗೂ

ಕ್ಲಿಷ್ಟವಾದ ಆಕರಗಳಲ್ಲಿಯೂ ಇತಿಹಾಸ ಅಂಶಗಳನ್ನು ಕಾಣುವ ಅಂಜನ ದೃಷ್ಟಿ ಅವರಿಗಿದ್ದಿತು. ಕಥಾಸರಿತ್ಸಾಗರದಲ್ಲಿ ಬರುವ ನಾಗರು, ಗರುಡರಲ್ಲಿಯ ಸಂಘರ್ಷಣೆ ಪಕ್ಷಿ -ಪ್ರಾಣಿಗಳದಲ್ಲ; ಎರಡು ಜನಾಂಗದ್ದು; ಮತ್ತು ಈ ನಾಗ, ಗರುಡ ಲಾಂಛನವುಳ್ಳವರು ಇಂಥದೇ ಪ್ರದೇಶದಲ್ಲಿ ವಾಸವಾಗಿದ್ದವರು ಎಂದು (ಹೈಗ, ಹೈವ ಲೇಖನದಲ್ಲಿ) ಹೇಳಿದ ಅವರ ವಿವರಣೆಯನ್ನು ಇದಕ್ಕೆ ಉದಾಹರಣೆಯೆಂದು ತಿಳಿಯಬಹುದು.

ಇತಿಹಾಸ ಸಂಶೋಧನೆಯಲ್ಲಿ ಅಗತ್ಯವಾಗಿ ಬೇಕಾದ ಮತ್ತೊಂದು ಗುಣವೆಂದರೆ ವಸ್ತುನಿಷ್ಠತೆ (objectivity) . ನಮ್ಮ ನಾಡು, ನಮ್ಮ ಜನ, ನಮ್ಮ ಮತ ಅಥವಾ ನಮಗೆ ಆಗದವರು - ಎಂಬ ಸ್ವನಿಷ್ಠ ಅಂಶಗಳ ಪ್ರಭಾವವು ಮೇಲಾಗಿ, ಸಂಶೋಧಕನು ವಸ್ತುನಿಷ್ಠತೆಯನ್ನು ಕಳೆದುಕೊಳ್ಳುವ ಪ್ರಮೇಯ ಅನೇಕ ಸಲ ಬಂದೊದಗುತ್ತದೆ. ಆಗ ಸತ್ಯ ಸಂಗತಿಯೆನ್ನುವುದು ಅವನ ಸಂಶೋಧನೆಯಿಂದ ದೂರ ಉಳಿಯುತ್ತದೆ. ಸತ್ಯವೇ ಇತಿಹಾಸದ ಕಣ್ಣು. ಇತಿಹಾಸ ಸಂಶೋಧನೆಯೆಂದರೆ ಆ ಸತ್ಯದ ಅನ್ವೇಷಣೆ ತಾನೇ. ಅದು ದೂರ ಉಳಿದರೆ, ಅಥವಾ ಆ ಸತ್ಯವನ್ನು ಮರೆಮಾಜಿದರೆ, ಕಣ್ಣಿಲ್ಲದವನ ಪರದಾಟದಂತೆ ಸಂಶೋಧನ ಕಾರ್ಯದ ಹಣೆಬರಹವಾಗುತ್ತದೆ. ಆದಕಾರಣ ನಿಜವಾದ ಸಂಶೋಧಕನು ಸ್ವನಿಷ್ಠವಾದ, ಅಥವಾ ಬಾಹ್ಯದ ಸೆಳೆತಗಳನ್ನು ಮೀರಿ ನಿಂತು ಸಂಕುಚಿತ ಪ್ರವೃತ್ತಿಯನ್ನು ತಡೆದುಕೊಂಡು, ತನ್ನ ಕಾರ್ಯವನ್ನು ಮುಂದುವರಿಸುತ್ತಾನೆ.

ವಿದ್ವತ್ತು, ಇತಿಹಾಸಪ್ರಜ್ಞೆ ಮತ್ತು ವಸ್ತುನಿಷ್ಠತೆ ಇದ್ದರೂ, ಗತಕಾಲದ ಸಂಪೂರ್ಣ ಸತ್ಯವು ಸಂಶೋಧಕನ ಹಿಡಿತಕ್ಕೆ ಯಾವಾಗಲೂ ಸಿಕ್ಕುವುದೆಂಬ ಭರವಸೆಯಿಲ್ಲ! ಎಂದರೆ, ನಿರ್ವಿವಾದ ಮತ್ತು ಖಚಿತವಾದ ಆಧಾರಗಳು ಸಿಕ್ಕಿ, ಅಪ್ಪಟ ಸತ್ಯಸಂಗತಿ ಹೊರಪಡುವ ಸಂದರ್ಭಗಳು ಸಾಮಾನ್ಯವಾಗಿ ಕಡಿಮೆಯೇ. ಆಗ ಸಂಶೋಧನೆಯೆಂಬುದು ಅನುಮಾನ, ತರ್ಕಗಳಿಂದ ಹೊರಟ ಸತ್ಯವಾಗುತ್ತದೆ. ತರ್ಕದ ಒಂದೊಂದೆ ಮೆಟ್ಟಿಲನ್ನು ಏರಿ ಗತಕಾಲದ ಬಾಗಿಲನ್ನು ತೆರೆದು, ಸಂಶೋಧಕನು ಕಣ್ಣಿರಿಸಿದುದಾದರೂ, ಮಬ್ಬುಗತ್ತಲೆಯಲ್ಲಿ ಕಾಣುವ ವಸ್ತುಗಳ ಸ್ಥಿತಿಯಂತೆ, ಆ ಸತ್ಯಶೋಧವಿರುತ್ತದೆ. ಈ ಕಾರಣವೇ ಅದನ್ನು ಅನುಮಾನಿತ ಸತ್ಯ, ಅಥವಾ ಆಧಾರಸಹಿತವಾದ ಊಹನೆ (hypothesis) ಎಂದು ಕರೆಯಬೇಕು.

ಆದರೆ ಇಂಥ ಊಹನೆ ಬೇರೆ, ಕಲ್ಪನೆ (imagination) ಬೇರೆ! ನಿಮಿತ್ತ ಮಾತ್ರದ ಆಧಾರವನ್ನಿಟ್ಟುಕೊಂಡು, ಅಷ್ಟರ ಮೇಲಿಂದ ಗತಕಾಲದ ವಿಷಯದಲ್ಲಿ ಕಲ್ಪನೆಯನ್ನು ಹರಿಬಿಡುವುದು ಅದೆಂತು ಶೋಧನೆಯಾದೀತು? ಆದರೂ ಹೊಸತೊಂದು ಮಾತನ್ನು ಕಂಡುಹಿಡಿಯಬೇಕೆನ್ನುವ ಉತ್ಸಾಹದ, ಅಥವಾ ಅದಕ್ಕಾಗಿಯೇ ಆಧಾರಗಳನ್ನು ಎಳತರುವ ಭರದಲ್ಲಿ ಈ ಊಹನೆಯು ಬರಿಯ ಕಲ್ಪನೆಯಾಗುವುದೂ ಉಂಟು.

ಇತಿಹಾಸದ ಎರಡು ಮುಖಗಳಾದ ಸಾಂಗತಿಕ ಇತಿಹಾಸ, ಮತ್ತು ವೈಚಾರಿಕ ಇತಿಹಾಸ ಇವುಗಳಲ್ಲಿ ಪೈಯವರ ಸಂಶೋಧನೆಯು ಸಾಂಗತಿಕ ಇತಿಹಾಸಕ್ಕೆ ಅದರಲ್ಲಿಯೂ ಅತಿ ಪ್ರಾಚೀನ

ಇತಿಹಾಸಕ್ಕೆ ಸಂಬಂಧಪಟ್ಟುದಷ್ಟೆ. ಅದಕ್ಕೆ ಬೇಕಾದ ಖಚಿತ ಪ್ರಮಾಣಗಳು ಕಡಿಮೆ. ಆದ್ದರಿಂದ ಪೈಯವರ ಸಂಶೋಧನೆಯಲ್ಲಿ ನಿಶ್ಚಿತ ಸತ್ಯ ಸಂಗತಿಗಳ ಜೊತೆಗೆ ಅನುಮಾನಿತ ಸತ್ಯದ ಅಂಶಗಳೂ ಹೇರಳವಾಗಿವೆ. ಅವುಗಳ ಊಹನೆಗೆ ಆಧಾರಗಳು ಇರುವಷ್ಟರ ಮಟ್ಟಿಗೆ ಮಾತ್ರ ಅವರ ಊಹನೆ ಮುಂದುವರಿಯುತ್ತಿದ್ದಿತು. ಉದಾಹರಣೆಗೆ

'ಯಕ್ಷರಿಗೆ ದೇವತೆಗಳಲ್ಲಿ ಒಂದು ಪದವಿಯನ್ನು ಆರ್ಯರ ಪುರಾಣಗಳಲ್ಲಿ ಇತ್ತಿರುವುದರಿಂದ ಅವರು ಪ್ರಾಯಶಃ ಆರ್ಯರಾಗಿರಬೇಕೆಂದು ನನಗೆ ತೋರುತ್ತದೆ.' 'ತಕ್ಕ ಸಾಹಿತ್ಯವು ಇದ್ದಿಲ್ಲದ ಭಾಷೆಯಲ್ಲಿ ಸರ್ವಥಾ ಈ ಪ್ರಮಾಣದಿಂದ (ಸಂಸ್ಕೃತ ಭಾಷೆಯಲ್ಲಿ ಕನ್ನಡ ಮಾತುಗಳು) ಸೇರಿರವು ಎಂದೂ ಹತ್ತು ಮಂದಿಯ ಓದಿಕೆಯ ಹಾಗೂ ತಿಳಿವಳಿಕೆಯ ಬಗ್ಗೆ ಎಂದೇ ಕೊರೆದಿಟ್ಟ ಈ ಶಾಸನಗಳಲ್ಲಿ ಹೀಗಾದರೆ, ಅಗಣ ಸಮಸಾಮಯಿಕವಾದ ಸಾಹಿತ್ಯದಲ್ಲಿ ಈ ಪ್ರಮಾಣವು ಇನ್ನೂ ಹಿಗ್ಗಿರಬೇಕು ಎಂದು ಸ್ವಯಂ ವ್ಯಕ್ತವಾಗುವುದರಿಂದ ಹಲ್ಮಿಡಿಯ ಶಿಲಾಲೇಖನದ ...... ಸಾಕಷ್ಟು ಹಿಂದಿನಿಂದಲೇ ಕನ್ನಡದಲ್ಲಿ ಸಂಸ್ಕೃತ ಮಿಶ್ರಿತವಾದ, (ಆತ ಏವ ಛಂದೋಬದ್ಧವೂ ಆದ) ಕನ್ನಡ ಸಾಹಿತ್ಯವು ಇದ್ದಿರಬೇಕು.'

ಪೈಯವರ ಸಂಶೋಧನ ಬರಹಗಳಲ್ಲಿ ಇಂಥ 'ಇದ್ದಿರಬೇಕು', 'ತೋರುತ್ತದೆ', 'ಪ್ರಾಯಶ', 'ಹೀಗಿರಲಾರದು' ಎಂಬ ಸರಣಿಯು ಹೇರಳವಾಗಿ ಕಂಡುಬರುತ್ತದೆ. ಆದರೆ ಮೇಲೆ ಹೇಳಿದಂತೆ, ಆ ಊಹನೆಯ ಮಟ್ಟಿಗೆ ಆಧಾರದ ಬೆಂಬಲ ಇದ್ದೇ ಇರುತ್ತಿತ್ತೆಂಬುದು ಮಹತ್ವದ್ದು.

ಈ ಮಾತನ್ನು ತುಸು ವಿಸ್ತರಿಸಿ ಹೇಳುವುದಕ್ಕೆ ಒಂದು ಕಾರಣವಿದೆ. ಪ್ರಚಲಿತ ಸಂಶೋಧನಾ ಕ್ರಮದಲ್ಲಿ ಮೂರು ಮಾರ್ಗಗಳಿವೆ. ಹಲವಾರು ಪ್ರಮಾಣಗಳ ಮನನ, ಮಥನಗಳಿಂದ ಹೊಸ ಮಾತೊಂದು ಬೆಣ್ಣೆಯಂತೆ ತಾನಾಗಿ ತೇಲಿಬರುವುದು ಒಂದು ಬಗೆ. ಎರಡನೆಯದೆಂದರೆ, ಒಂದೆರಡು ಪ್ರಮಾಣಗಳ ಮನನದಿಂದ ಹೊಸ ಮಾತೊಂದು ಹೊಳೆದಾಗ, ಅನ್ಯ ಪ್ರಮಾಣಗಳನ್ನು ಅರಸಿಕೊಂಡು ಹೋಗುವುದು; ಅವುಗಳಿಂದ ಮುನ್ನಿನ ಅನುಮಾನವು ಸ್ಥಿರಪಟ್ಟರೆ ಮಾತ್ರ ಅದನ್ನು ಒಂದು ಸಂಶೋಧಿತ ಹೊಸ ಮಾತೆಂದು ಗ್ರಹಿಸಿ ಮಂಡಿಸುವುದು. ಮೂರನೆಯ ಮಾರ್ಗವೆಂದರೆ, ತನ್ನ ಮನಸ್ಸಿಗೆ ಫಕ್ಕನೆ ಹೊಳೆದಂತಹ ಅಥವಾ ಉದ್ದೇಶಪೂರ್ವಕವಾಗಿ ಸ್ವನಿಷ್ಠವಾದ ಹೊಸ ಮಾತನ್ನು ಮಂಡಿಸಬೇಕಾದಾಗ ಅದರ ಸಮರ್ಥನೆಗೆಂದೇ ಪ್ರಮಾಣಗಳನ್ನು ಎಳೆದು ತಂದು, ಜೋಡಿಸುವುದು! ಗೋವಿಂದ ಪೈಯವರ ಸಂಶೋಧನೆಯು ಮೊದಲೆರಡರ ಮಾರ್ಗಗಳನ್ನೇ ಅನುನಯಿಸಿತ್ತಲ್ಲದೆ, ಎಂದಿಗೂ ಮೂರನೆಯದ್ದನ್ನಲ್ಲ, ಅವರಲ್ಲಿಯ ಸತ್ಯ ದೃಷ್ಟಿಯೂ ವಿಶಾಲ ಮನೋಭಾವವೂ, ಆ ಬಗೆಯ ಸಂಶೋಧನೆಗೆ ಅವಕಾಶವನ್ನೀಯಲಿಲ್ಲವೆಂಬುದನ್ನು ಗಮನಿಸಬೇಕಾಗಿದೆ.

ಪೈಯವರು ತಾನು ಮಂಡಿಸಿದ ಹೊಸ ಮಾತು ಒಂದು ಸಿದ್ಧಾಂತ, ಅದು ಬದಲಾಗದಂತಹುದು ಎಂಬುದಾಗಿ ಭಾವಿಸಿದ್ದಿಲ್ಲ. ಅನ್ಯ ವಿದ್ವಾಂಸರು ಅದರ ಕುಂದನ್ನು ಎತ್ತಿ ತೋರಿಸಿದರೆ ಅಥವಾ ಹೊಸ ಪುರಾವೆ ದೊರೆತು ತಮಗೇ ಆ ದೋಷ ಕಂಡುಬಂದರೆ, ತಮ್ಮ ಅಭಿಪ್ರಾಯವನ್ನು ಬದಲಿಸುವುದಕ್ಕೆ ಅವರು ಹಿಂದು ಮುಂದು ನೋಡುತ್ತಿದ್ದಿಲ್ಲ.

ರನ್ನನ ಅಲಭ್ಯವಾದ ಕೃತಿ ಪರಶುರಾಮ ಚರಿತದ ಕಥಾನಾಯಕನಾರು ಎಂಬ ವಿಷಯದ ಅವರ ಸಂಶೋಧನೆಯನ್ನು ಇದಕ್ಕೆ ಒಂದು ನಿದರ್ಶನವಾಗಿ ಕೊಡಬಹುದು. ಮೊದಲಿಗೆ, ಈ ಪರಶುರಾಮನು ಸುಭೌಮನನ್ನು ಗೆದ್ದ ಪರಶುರಾಮನು ಮತ್ತು ಅವನು ಜೈನನು ಎಂಬ ವಿಚಾರವನ್ನು ಅವರು ಮಂಡಿಸಿದರು. ಆಮೇಲೆ ಗುಣಭದ್ರನ ಉತ್ತರ ಪುರಾಣವನ್ನು 'ವಾಚಿಸಿದಾಗ' ಸುಭೌಮನೇ ಪರಶುರಾಮನನ್ನು ಕೊಂದದ್ದು ಎಂಬುದಾಗಿ ತಿಳಿಯಿತು. ಎಂದರೆ, ಹೀಗೆ ಸೋತ ಪರಶುರಾಮ (ಜೈನ)ನ ಕಥೆಯನ್ನು ರನ್ನನ್ನು ಬರೆಯಲಾರನು ಆದ್ದರಿಂದ ಇವನು ವೈದಿಕನಾದ, ಕ್ಷತ್ರಿಯ ಸಂಹಾರಕ ಪರಶುರಾಮ ದೇವರು ಎಂಬುದಾಗಿ ತಮ್ಮ ವಿಚಾರವನ್ನು ಮಾರ್ಪಡಿಸಿಕೊಂಡರು. ಆದರೆ ಅದು ಅವರಿಗೇನೇ ಸಮರ್ಪಕವೆನಿಸದೆ, ಪುನರಾಲೋಚಿಸಿದರು. ಸ್ವಯಂ ಸಂದೇಹಗಳನ್ನು ಮಂಡಿಸಿ ವಿವೇಚಿಸಿ ಪರಶುರಾಮ ಚರಿತೆಯು ಜೈನಕಾವ್ಯವೇ ಎಂಬುದಾಗಿ ಮತ್ತೆ ತಮ್ಮ ಮೊದಲಿನ ನಿರ್ಣಯಕ್ಕೇ ಬಂದುಬಿಟ್ಟರು! ಕೊಟ್ಟ ಕಾರಣಗಳು ಮಾತ್ರ ತುಸು ಬೇರೆಯಾಗಿದ್ದವು. ಈ ಅಭಿಪ್ರಾಯ ವ್ಯತ್ಯಾಸಗಳ ಹಿಂದಿನ ಅವರ ಸತ್ಯನಿಷ್ಠೆ ಹಾಗೂ ಪ್ರಾಮಾಣಿಕತೆಯ ಮನೋಭಾವವನ್ನು ಗುರುತಿಸಬೇಕು.

ಸಂಶೋಧಕನಲ್ಲಿ ಇಂಥ ಪ್ರಾಮಾಣಿಕತೆಯು ಒಂದು ಅಪೇಕ್ಷಣೀಯ ಗುಣವಾಗಿದೆ. ತಾನು ಪರಿಶೀಲಿಸಿದ ಆಧಾರ, ಆಕರಗಳಿಂದ ಪ್ರಾಮಾಣಿಕವಾಗಿ ಕಂಡುಕೊಂಡ ಹೊಸ ಮಾತನ್ನು ಅನ್ಯ ಒತ್ತಾಯಗಳಿಗೆ ಬಲಿಯಾಗಿ, ಬದಲಿಸ ಹೋಗದಂತೆ ಅವನು ಧೈರ್ಯವಂತನಾಗಿರಬೇಕು. ಅದರಂತೆ ತನ್ನ ಅಭಿಪ್ರಾಯ ತಪ್ಪೆಂದು ಕಂಡುಬಂದಾಗ ಅದನ್ನು ಒಪ್ಪಿ ತಿದ್ದಿಕೊಳ್ಳುವ ವಿನಯವೂ ಇರಬೇಕು. ಹೀಗೆ ಪ್ರಾಮಾಣಿಕತೆಯು ಧೈರ್ಯ, ವಿನಯ, ಇವೆರಡನ್ನೂ ಅಭಿವ್ಯಕ್ತಗೊಳಿಸುವ ಸಾಮರ್ಥ್ಯವುಳ್ಳದ್ದಾಗಿದೆ. 'ವಿದ್ಯಾ ದದಾತಿ ವಿನಯಂ' ಎಂಬುದು ಕೆಲವೇ ವಿದ್ವಾಂಸರಿಗೆ ಅನ್ವಯಿಸುವ ಸೂಕ್ತಿಯಾಗಿದೆ. ಅದರಲ್ಲಿ, ತಾನೊಂದು ಹೊಸ ಶೋಧನೆ ಮಾಡಿದೆನೆಂಬ ಹೆಮ್ಮೆ ಮೂಡಿಬಿಟ್ಟರೆ ಅಂಥವರಿಂದ ವಿನಯವು ಮೂರು ಮಾರು ಹಿಮ್ಮೆಟ್ಟುತ್ತದೆ.

ಪೈಯವರ ವಿನಯ, ಶಾಲೀನತೆಗಳು ಗಾದೆಮಾತಿನಂತೆ ಸ್ಥಿರಗೊಂಡಿವೆ. ಈ ಗುಣವು ಅವರ ಸಂಶೋಧನಾ ಕ್ರಮದಲ್ಲಿಯೂ ಎದ್ದು ಕಾಣುತ್ತದೆ. ತಪ್ಪನ್ನು ಒಪ್ಪಿಕೊಳ್ಳುವಾಗ, ತಮ್ಮ ಪ್ರತಿಷ್ಠೆಗೆ ಕುಂದು ಬಂದೀತೆಂಬ ವಿಚಾರವೇ ಅವರಲ್ಲಿ ಬರುತ್ತಿದ್ದಿಲ್ಲ. ಅವರ ಪ್ರಾಮಾಣಿಕತೆ ಅಷ್ಟು ಮುಕ್ತ ಮನಸ್ಸಿನದಿರುತ್ತಿತ್ತು. ಮೇಲೆ ಹೇಳಿದ ರನ್ನನ ಕಾವ್ಯಗಳನ್ನು ಕುರಿತ ಸಂಶೋಧನೆಯಲ್ಲಿ ತಪ್ಪೊಪ್ಪಿಕೊಳ್ಳುವ ಬಗೆಗೆ ಒಂದು ನಿದರ್ಶನವಿದೆ.

ರನ್ನನ ಅಜಿತಪುರಾಣದಲ್ಲಿ ಬಂದ ಒಂದು ಪದ್ಯದ ಪ್ರಕಾರ, ಅವನು 'ತನ್ನ ಮಕ್ಕಳಾದ ರಾಯ ಮತ್ತು ಅತ್ತಿಮಬ್ಬೆ ಎಂಬವರಿರ್ವರ ಹೆಸರುಗಳಿಗಾಗಿ ಪರಶುರಾಮ, ಚಕ್ರೇಶ್ವರ ಚರಿತೆಗಳು ರಚಿಸಲ್ಪಟ್ಟುವು' ಎಂಬೊಂದು ಅಭಿಪ್ರಾಯವನ್ನು ಬೇರೊಬ್ಬರು ಮಂಡಿಸಿದ್ದರು. ಈ ಅಭಿಪ್ರಾಯವನ್ನು 'ಸಾಕಷ್ಟು ವಿಮರ್ಶಿಸದೇ, ಅವು ಸರಿಯಾಗಿರಬೇಕೆಂದೇ ನಂಬಿ' ಆಧರಿಸಿ, ತಾವೂ ಮುಂದುವರಿದರಂತೆ. ಅದು ತಪ್ಪೆಂದು ತೋರಿದಾಗ ಪೈಯವರು -

ಈಗ ಆಲೋಚಿಸಿದರೆ, ಆ ಪದ್ಯದಿಂದ ಆ ಅರ್ಥವು ಹೊರಡುವಂತಿಲ್ಲ..... ಅವರೆಡು ಕೃತಿಗಳನ್ನು ರನ್ನನು ತನ್ನ ಮಕ್ಕಳ ಬಗ್ಗೆ ರಚಿಸಿದುದೂ ಅಲ್ಲ, ಅವರಿಗೆ ಅಂಕಿತ ಮಾಡಿದುದೂ ಅಲ್ಲವೆಂದು ನಿಷ್ಪುಷ್ಟವಾಗುವುದರಿಂದ ಈ ಮೊದಲು ನನ್ನಿಂದ ಆಗಿಹೋದ ಆ ತಪ್ಪಿಗೆ ವಿಷಾದಪಡುತ್ತೇನೆ.

ಆ ತಪ್ಪಿಗೂ, ಈ ವಿಷಾದಕ್ಕೂ ೧೨ ವರ್ಷಗಳ ಅಂತರವಿದೆ! ತಾವಾಗಿ ಆ ತಪ್ಪನ್ನು ಒಪ್ಪಿಕೊಂಡುದು, ಧಾರವಾಡದ ಕರ್ನಾಟಕ ಸಂಶೋಧನ ಸಂಸ್ಥೆಯವರು ಏರ್ಪಡಿಸಿದ ಉಪನ್ಯಾಸ ಮಾಲೆಯ ಪ್ರಥಮ ಉಪನ್ಯಾಸದ ಆರಂಭದಲ್ಲಿಯೇ. ಆ ಬಗೆಯ ಆತುರವು ಪೈಯವರ ವ್ಯಕ್ತಿತ್ವದ ಹಾಗೂ ಬರೆಹದ ತೂಕವನ್ನು ಬಹುಪಾಲು ಹೆಚ್ಚಿಸುವಂಥದಾಗಿದೆ.

ಆದರೆ ತಮ್ಮ ಯಾವೊಂದು ಅಭಿಪ್ರಾಯವು ಸರಿಯೆಂದು ತಮಗೆ ಖಾತ್ರಿಯಾಗಿದ್ದಾಗ, ಇತರ ವಿದ್ವಾಂಸರು ಅದನ್ನು ಎಷ್ಟೇ ಬಲವತ್ತರವಾಗಿ ಖಂಡಿಸಿದರೂ, ಪೈಯವರು ಅದಕ್ಕೆ ಕೊಂಚ ವಿಸ್ತಾರವಾಗಿಯೇ ಪ್ರತ್ಯುತ್ತರವನ್ನು ಕೊಟ್ಟು ತಮ್ಮ ನಿಲುವೆುಯನ್ನು ಸಮರ್ಥಿಸಿಕೊಳ್ಳುತ್ತಿದ್ದರು. ಆ ಧೈರ್ಯ ಅವರಲ್ಲಿ ಶೇಕಡ ನೂರರಷ್ಟು ಇದ್ದಿತು. ಕರ್ನಾಟಕ - ಕರ್ಣಾಟಕ ವಾದ, ಕನ್ನಡ ಷಟ್ಪದಿಗಳು, ಸೋಮರಾಜನ ಉದ್ಭಟ ಕಾವ್ಯ - ಇವೇ ಮುಂತಾದ ವಿಷಯಗಳ ಮೇಲೆ ಬಂದ ಆಕ್ಷೇಪಗಳಿಗೆ ಕೊಟ್ಟ ಉತ್ತರಗಳಲ್ಲಿ, ಅನ್ಯರ ಅಭಿಪ್ರಾಯ ಖಂಡನೆಯ ವೈಖರಿಯನ್ನು ಕಾಣುತ್ತೇವೆ.

ಹೀಗೆ ಪ್ರತ್ಯುಕ್ತಿಯನ್ನು ಕೊಡುವಾಗ, ಆ ಅನ್ಯ ವಿದ್ವಾಂಸರ ಮನನೋಯುವಂತಹ ಪದಗಳನ್ನು ಅವರು ಎಂದೂ ಬಳಸಿದುದಿಲ್ಲ. ಅವರ ವಿಚಾರಸರಣಿಯನ್ನು ಗೌರವದಿಂದಲೇ ಕಂಡು, ಅವರ ವಿಚಾರಗಳನ್ನು ಒಂದೊಂದಾಗಿ ಖಂಡಿಸುತ್ತಿದ್ದರಲ್ಲದೇ, ತಮ್ಮ ನಿಲುಮೆಯ ಸಮರ್ಥನೆಗೆ ಹೊಸತಾಗಿ ದೊರೆತ ಪುರಾವೆಗಳನ್ನೂ ಕೆಲವು ಕಡೆ ಕೊಟ್ಟುದುಂಟು. ಚಾಳುಕ್ಯ ವಿಕ್ರಮನ ಪಟ್ಟಬಂಧದ ತೇದಿಯ ವಿಚಾರದಲ್ಲಿ ನಾ. ಶ್ರೀ ರಾಜಪುರೋಹಿತರ ಅಭಿಪ್ರಾಯದ ಖಂಡನೆ ಮತ್ತು ಮಹಾವೀರಸ್ವಾಮಿಯ ಪರಿನಿರ್ವಾಣದ ವಿಚಾರದಲ್ಲಿ ಶಾಂತಿರಾಜ ಶಾಸ್ತ್ರಿಗಳಿಗೆ ಕೊಟ್ಟ ಪ್ರತ್ಯುತ್ತರ, ಇವು ಈ ದೃಷ್ಟಿಯಿಂದ ಮಾದರಿಯಾಗಿವೆ.

## ಉಪಸಂಶೋಧನೆ

"ಶ್ರೀ ಗೋವಿಂದ ಪೈಯವರ ಸಂಶೋಧನೆಯನ್ನು ಒಂದು ದೊಡ್ಡ ಕಾರ್ಖಾನೆಯೆನ್ನಬಹುದು. ಆ ಕಾರ್ಖಾನೆಯಲ್ಲಿ ಮುಖ್ಯ ಉತ್ಪತ್ತಿಯಷ್ಟೆ ಬೆಲೆಯುಳ್ಳದ್ದು ಉಪ ಉತ್ಪತ್ತಿ. ಮೂಲ ನಿರ್ಣಯಕ್ಕೆ ಬರುವ ಜಾಡಿನಲ್ಲಿ ಕಾಣುವ ಇತರ ಪ್ರತಿಯೊಂದು ಸಂಗತಿಯ ಪೂರ್ಣ ನಿರ್ಣಯ ಮಾಡಿಯೇ ಅವರು ಮುಂದುವರಿಯುತ್ತಾರೆ" ಎಂಬುದಾಗಿ ಎಸ್. ಎಂ. ವೃಷಭೇಂದ್ರ ಸ್ವಾಮಿಯವರು ಬರೆದಿದ್ದಾರೆ. ('ಸಿಂಹದ ಗವಿಯಲ್ಲಿ ಮೀನಿನ ಹೆಜ್ಜೆ' ದೀವಿಗೆ - ಭಾಗ ೧). ಇದು ಅತ್ಯಂತ ಯಥಾರ್ಥವಾದ ಮಾತು. ಆ ಮಾತಿಗೆ ಒಂದೆರಡು ನಿದರ್ಶನಗಳನ್ನು ಅವರು ಕೊಟ್ಟದ್ದಕ್ಕೆ ನಾವೂ ಕೆಲವನ್ನು ಸೇರಿಸಬಯಸುತ್ತೇವೆ. ನೃಪತುಂಗನ

ಮತ ವಿಚಾರ ಮಾಡುವ ಕಾಲಕ್ಕೆ ಜಿನಸೇನಾಚಾರ್ಯನ ಕಾಲವಿಚಾರವೂ, ಪಂಪನ ದೇಶಕಾಲ ವಿಚಾರ ಸಂದರ್ಭದಲ್ಲಿ ಅರಿಕೇಸರಿಯ ಕಾಲ, ದೇಶಗಳ ಪರಾಮರ್ಶೆಯೂ, ಅದರಂತೆ ವಾಕಾಟಕ -ಪಲ್ಲವರ ಬಗ್ಗೆ ಬರೆಯುವಾಗ, ಚೇದಿ, ಚೋಳರಾಜರ ಸಾದ್ಯಂತ ವೃತ್ತಾಂತವೂ ವಿವರವಾಗಿ ಬಂದಿವೆ. ಹೀಗೆ ತಮ್ಮ ಮುಖ್ಯ ಸಂಶೋಧನೆಗೆ ಒಂದು ಮಾತನ್ನು ಪುರಾವೆಯಾಗಿ ತೆಗೆದುಕೊಳ್ಳುವುದಿದೆಯೆಂದಾಗ, ಆ ಇನ್ನೊಂದು ಮಾತನ್ನೂ ಸಿದ್ಧಾಂತದ ಮಟ್ಟಕ್ಕೆ ನಿಲ್ಲಿಸಿಕೊಂಡೇ ಅವರು ಮುಂದೆ ಸಾಗುತ್ತಿದ್ದರು. ಇದರಿಂದಾಗಿ ಅವರ ಲೇಖನಗಳು ಒಂದೆಡರಲ್ಲ, ಹತ್ತಾರು ಹೊಸ ಮಾತುಗಳನ್ನು ಒಳಗೊಂಡು ಅತ್ಯಂತ ಮೌಲಿಕವೆನಿಸಿದುವು.

ಈ ಉಪವೃತ್ತಿಯ ಇನ್ನೊಂದು ಪರಿಯೆಂದರೆ, ಯಾವುದೊಂದು ಹೊಸ ಮಾತನ್ನು ಮಂಡಿಸಿದಾಗ ಅದಕ್ಕೆ ಎಲ್ಲೆಲ್ಲಿಂದಲೋ ಸಾದೃಶ್ಯಗಳನ್ನು ಹುಡುಕಿ ಹೇಳುವುದು. ಪೈಯವರ ಬಹುಶತ್ರುತ್ವ ಹಾಗೂ ಪ್ರತ್ಯುತ್ಪನ್ನಮತಿತ್ವದ ಫಲವಿದು. ಬುದ್ಧನ ಜನನ, ಬೋಧಿಜ್ಞಾನ ಮತ್ತು ಪರಿನಿರ್ವಾಣ ಇವು ಮೂರೂ ಒಂದೇ ತಿಥಿಯಂದು ಜರುಗಿದುವಷ್ಟೆ. ಈ ಯೋಗಾಯೋಗವು ಇತಿಹಾಸದಲ್ಲಿ ಅಪೂರ್ವವಾದದ್ದೇನೂ ಅಲ್ಲ. ಮಹಮ್ಮದ ಪೈಗಂಬರನು ರಬ್ಬಿ ಉಲ್- ಆವಲ್ ತಿಂಗಳದ ೧೨ನೇ ದಿನ ಸೋಮವಾರವೇ ಹುಟ್ಟಿದ್ದು; ಮುಂದೆ ಬೇರೆ ವರ್ಷದ ಅದೇ ದಿನ, ವಾರದಂದು ತೀರಿಕೊಂಡದ್ದು, ಅದರಂತೆ ಜನನ ಮರಣಗಳ ದಿನವೂ (ಎಪ್ರಿಲ್ ೨೩) ಒಂದೇ ಆಗಿದ್ದಿತು ಎಂಬ ಸಾದೃಶ್ಯಗಳನ್ನು ಪೈಯವರು ಕೊಟ್ಟಿದ್ದಾರೆ. ಪೈಯವರು ಬಿಜ್ಜಳ-ಬಸವೇಶ್ವರ ಸಂಬಂಧ ವಿಚಾರವಾಗಿ ೨ನೇ ಹೆನ್ರಿ ಬೆಕೆಟ್‌ರ ಹೋಲಿಕೆ ಕೊಟ್ಟದ್ದನ್ನೂ ಗಮನಿಸಬೇಕು.

## ಪೈ ಸಂಶೋಧನೆ ಎಷ್ಟರಮಟ್ಟಿಗೆ ಕ್ಲಿಷ್ಟ?

ಗೋವಿಂದ ಪೈಯವರ ಗದ್ಯ ಲೇಖನಗಳು - ಅವರ ಕವಿತೆಗಳಂತೆಯೇ ಕ್ಲಿಷ್ಟ ಹಾಗೂ ನೀರಸವಾಗಿವೆ ಎಂಬ ಸಾಮಾನ್ಯ ಪ್ರತೀತಿ ಇದೆಯಷ್ಟೆ. ನಮ್ಮ ಅಭಿಪ್ರಾಯದಲ್ಲಿ ಇದು ಸಹಜವಾದ 'ಆರೋಪ'ವೇ. ಅದನ್ನು ಮರೆಮಾಚುವ ಅಥವಾ ವಿರೋಧಿಸುವ ಪ್ರಯತ್ನವನ್ನೇನೂ ಇಲ್ಲಿ ಮಾಡುವುದಿಲ್ಲ. ಆದರೆ ಪೈಯವರ ಬರವಣಿಗೆ ಈ ರೀತಿ ಇರುವುದರ ಹಿನ್ನೆಲೆಯನ್ನು ಮನಗಂಡರೆ, ಈ ಆರೋಪವು ಎಷ್ಟರಮಟ್ಟಿಗೆ ತಥ್ಯದ್ದು ಎಂಬುದು ತಂತಾನೆ ಸ್ಪಷ್ಟವಾದೀತು.

ಮೊದಲಲ್ಲಿ ಸಂಶೋಧನೆಯ ವಿಷಯವೇ ಕ್ಲಿಷ್ಟ ಹಾಗೂ ಜಡವಾದುದು. ಅದರಲ್ಲಿಯೂ ಗೋವಿಂದ ಪೈಯವರು ವಿದ್ವಾಂಸ ಮಂಡಲಿಯಲ್ಲಿಯೆ ಉಚ್ಚಮಟ್ಟದವರು. ಹೀಗಾಗಿ ಅವರ ವಿಚಾರಗಳ ಪರಿಜ್ಞಾನವು ವಾಚಕನ ತಿಳಿವಿನ ಮಟ್ಟವನ್ನೂ ಹೊಂದಿಕೊಂಡಿರುತ್ತದೆ. ಗಾಂಧೀಜಿಯವರ ಮಾರ್ಗವು ಅವರ ಅನೇಕ ಅನುಯಾಯಿಗಳಿಗೆ ಹೇಗೆ ದುಸ್ಸಾಧ್ಯವಾಯಿತೊ, ಹಾಗೆಯೇ ಪೈಯವರ ಸಂಶೋಧನ ಮಾರ್ಗವು ಸಾಮಾನ್ಯ ವಾಚಕ-ವಿದ್ವಾಂಸರಿಗೆ ತುಸು ಕಠಿಣವಾಗಿ ತೋರಿದರೆ ಅದು ಸಹಜವೇ.

ವಿಷಯವು ಹೀಗಾದರೆ, ಅದನ್ನು ಹೇಳುವ ರೀತಿಯೂ ಒಂದಿಷ್ಟು ಗಡುಸಾದುದೇ. ಒಂದು ಸಂಶೋಧನ ಬರಹದಲ್ಲಿ ಆ ವಿಷಯ ಪೂರ್ತಿಗಾಗಿ ಅನೇಕ ಉಪ ವಿಷಯಗಳನ್ನೂ ತರುತ್ತಿದ್ದರು ಎಂದು ಮೇಲೆ ಹೇಳಿದೆಯಷ್ಟೆ. ಇದರಿಂದಲೂ ಅವರ ಬರಹ ಕ್ಲಿಷ್ಟವಾಗುತ್ತಿತ್ತು. ಆದರೆ ಮುಖ್ಯ ವಿಷಯಕ್ಕೆ ಪೋಷಕವಾಗದಂತಹ, ಯಾವ ಮಾತನ್ನೂ ಅವರು ಹೇಳುತ್ತಿದ್ದಿಲ್ಲ. ಹೇಳಬೇಕಾದ ಮಾತುಗಳನ್ನು ನೇರವಾಗಿ ಸಂಕ್ಷೇಪವಾಗಿ, ಆದರೆ ವಿಷಯದ ಪೂರ್ತಿ ಬೋಧೆಯಾಗುವಂತೆ ಅವರ ನಿರೂಪಣೆ ಇದ್ದಿತು.

'ಬುದ್ಧನ ಪರಿನಿರ್ವಾಣದ ಕಾಲ' ಎಂಬುದು ಅವರ ಒಂದು ಲೇಖನದ ಶೀರ್ಷಿಕೆಯಾಗಿದೆ. ಆದರೆ ಅದರ ಮೊದಲ ವಾಕ್ಯವು ಅಶೋಕನ ಶಾಸನಗಳ ಕಾಲನಿರ್ಣಯದಿಂದ ಆರಂಭವಾಗುತ್ತದೆ. ಅದರ ಪ್ರಸಕ್ತಿ ಈಗೇಕೆ? ಬುದ್ಧನ ಕಾಲವಿಚಾರಕ್ಕೂ ಇದಕ್ಕೂ ಹೇಗೆ ತಳುಕು ಹಾಕುತ್ತಾರೆಂಬುದರ ಪೂರ್ವಸೂಚನೆಯನ್ನು ಪೈಯವರು ಕೊಟ್ಟುದಿಲ್ಲ. ಅಂಥವರ ದೃಷ್ಟಿಯಲ್ಲಿ ಪೀಠಿಕಾ ರೂಪದ ಇಂಥ ಮಾತುಗಳೂ ಅನಾವಶ್ಯಕವೇ!

ಪೈಯವರ ಭಾಷಾಶೈಲಿಯೂ ಗಡುಚಾದುದು. ಮಂಡಿಸಬೇಕೆಂದಿರುವ ಒಂದು ವಿಚಾರವು ಪೂರ್ಣ ಮುಗಿಯುವ ವರೆಗೆ ಪೈಯವರು ಆ ವಾಕ್ಯವನ್ನೆ ನಿಲ್ಲಿಸುತ್ತಿರಲಿಲ್ಲ. 'ನಾಗವರ್ಮರು ಎಷ್ಟು ಮಂದಿ?' ಎಂಬ ಲೇಖನದ ೩ನೆಯ ಪ್ಯಾರಾದಲ್ಲಿಯ ಒಂದು ವಾಕ್ಯದಲ್ಲಿ ೭೦ಕ್ಕೆ ಮಿಕ್ಕಿ ಶಬ್ದಗಳಿವೆ! ಹಾಗೆಂದು ಆ ವಾಕ್ಯದ ಅರ್ಥಬೋಧೆಯಾಗುವಲ್ಲಿ ಯಾವ ಬಾಧಕವೂ ಇಲ್ಲ. ಇನ್ನೊಂದು ಅಡೆತಡೆಯೆಂದರೆ, ಅವರು ಬಳಸುತ್ತಿದ್ದ ಅನೇಕ ಅಪರಿಚಿತ ಶಬ್ದಗಳು. ಅವು ನಮಗೆ ಪರಿಚಿತವಲ್ಲವಾದರೂ, ಆ ಶಬ್ದಗಳ ಅರ್ಥ, ಪ್ರಯೋಗಗಳಲ್ಲಿ ದೋಷವೇನೂ ಇಲ್ಲ.* ಅವುಗಳ ಬಳಕೆಯಿಂದ ನಮ್ಮ ಶಬ್ದಸಂಪತ್ತಿಯು ಬೆಳೆಯುವುದಕ್ಕೆ ಸಹಾಯಕವಾಗಿದೆ ಎಂದು ಹೇಳಬಹುದು.

ಹೀಗೆ ಒಂದು ಮಾತಿನ ಪ್ರಾಮಾಣ್ಯಕ್ಕೆ ಇನ್ನೊಂದರ ಪ್ರಸ್ತಾಪ ಅದಕ್ಕೆ ಮತ್ತೊಂದು ವಿಷಯದ ಜೋಡಣೆ, ಮಧ್ಯೆ ಅಡಿಟಿಪ್ಪಣಿಗಳಿಂದ ಅವುಗಳ ಸಮರ್ಥನೆ - ಈ ಕ್ರಮದಿಂದಾಗಿ ವಿಷಯ ನಿರೂಪಣೆಯು ಜಟಿಲವಾಗಿ ಕಾಣುತ್ತದೆ. ನೂರೆಂಟು ವಿಷಯಗಳು ಅವರ ತಲೆಯಲ್ಲಿದ್ದರೂ, ಅವರ ವಿಚಾರಧಾರೆಯಲ್ಲಿ ಗೊಂದಲ ಇರದೇ ಅದು ಖಚಿತವೂ, ತಿಳಿಯಾದುದೂ ಆಗಿದ್ದಿತು. ಆದರೆ ವಿಷಯ ಬಾಹುಲ್ಯ, ಸಂಕ್ಷೇಪದಲ್ಲಿಯೆ ಸಮಸ್ತವನ್ನು ಹೇಳುವ ಅವರ ಮನೋವೃತ್ತಿ - ಇವುಗಳಿಂದಾಗಿ ಅವರ ಗದ್ಯ ಬರವಣಿಗೆ ಕ್ಲಿಷ್ಟವೆನಿಸೀತು. ಆ ಕ್ಲಿಷ್ಟತೆಯಲ್ಲಿಯೂ ಸ್ಪಷ್ಟತೆ ಇದೆಯೆಂಬುದನ್ನು ನಾವು ಒತ್ತಿ ಹೇಳಬೇಕಾಗಿದೆ. ಯಾವ ಓದುಗನಿಗೆ ಜ್ಞಾನಲಾಲಸೆಯೂ, ಸಾಹಿತ್ಯೇತಿಹಾಸಗಳ ಪರಿಜ್ಞಾನವೂ ಇದೆಯೊ ಅವನಿಗೆ ಪೈಯವರ ಸಂಶೋಧನ ಬರಹವು ಗಡಚಾಗಿ ತೋರಲಾಗದು.

ಪೈಯವರ ಸಂಶೋಧನ ಲೇಖನವನ್ನು ಒಂದು ಚಕ್ರವ್ಯೂಹದ ಕೋಟೆಗೆ ಹೋಲಿಸುವುದು ಯಥಾರ್ಥವಾಗಿದೆ. ಈ ಕೋಟೆಯೊಳಗೆ ಪ್ರವೇಶ ಮಾಡುವಾಗ ಯಾವ

ಗುರಿಯನ್ನು ಮುಟ್ಟಿದ್ದೇವೆ. ಅದರ ಸಾಧ್ಯತೆ ಹೇಗೆ ಎಂಬುದರ ಸ್ಪಷ್ಟ ಅರಿವು ಇಲ್ಲದೆಯೇ ಮುಂದಡಿಯಿಡುತ್ತೇವೆ. ಅದರ ದಾರಿಯು ಸುತ್ತು ಸುತ್ತಿನದಾದ್ದರಿಂದ, ಹೆಜ್ಜೆ ಹೆಜ್ಜೆಗೆ ನಿಂತು, ಮುಂದಿನ ದಾರಿಯತ್ತ ಹುಬ್ಬೇರಿಸಿ ನೋಡಬೇಕು. ಆ ಮಾರ್ಗದ ಪಕ್ಕದಲ್ಲಿ ಅನ್ಯ ವಿಚಾರದ ಕಿರುದಾರಿಗಳೂ, ಸಂದೇಹಗಳೆಂಬ ಸಣ್ಣ ತಗ್ಗುಗಳೂ, ಅಡಿಟಿಪ್ಪಣಿಗಳ ರೂಪದಲ್ಲಿ ದಿಬ್ಬಗಳೂ, ಅಪರಿಚಿತ ಶಬ್ದಗಳೆಂಬ ಸಣ್ಣ ಹರಳುಗಳೂ ಕಂಡುಬರುತ್ತವೆ. ಆದರೂ ಗುರಿಯನ್ನು ಮುಟ್ಟಬೇಕೆಂಬ ಆತುರವನ್ನು ಉಳಿಸಿಕೊಳ್ಳುವಷ್ಟು ಸೆಳೆತ ಇದ್ದೇ ಇರುತ್ತದೆ. ಹೀಗೆ ಕಷ್ಟಪಟ್ಟು ತುಸು ಬೆವರು ಸುರಿಸಿದಾಗ, ಅವರ ಸಂಶೋಧನೆಯೆಂಬ 'ಸತ್ಯಸೂರ್ಯ'ನ ದರ್ಶನವಾಗುತ್ತದೆ. ಆ ಸೂರ್ಯನ ಹೊಂಬಿಸಿಲು ಎಷ್ಟೊಂದು ಚೇತೋಹಾರಿಯೆಂಬುದನ್ನು ಅನುಭವಿಸಿಯೇ ತಿಳಿಯಬೇಕು.



# ೧೨ ಶತಮಾನದ ಸಾಕ್ಷೀಪುರುಷ

ದಿ. ೧೦ ಅಕ್ಟೋಬರ್ ೧೯೯೭ರಂದು ೯೬ನೆಯ ವರ್ಷದಲ್ಲಿ ಪದಾರ್ಪಣ ಮಾಡಿದ ಡಾ. ಶಿವರಾಮ ಕಾರಂತರನ್ನು ಆ ನಿಮಿತ್ತದಿಂದ ನೆನೆಯುವುದು ಖುಷಿ ಕೊಡುವ ವಿಷಯ. ಅವರು ಈ ಶತಮಾನದ ಆರಂಭದಲ್ಲಿ ಜನಿಸಿದವರು. ಇದರ ಮುಗಿತಾಯವನ್ನೂ ಕಾಣ ಹೊರಟಿರುವವರು.

ಈ ಅವಧಿಯಲ್ಲಿ ಏನೇನೆಲ್ಲ ನಡೆದು ಹೋಯಿತು! ಅದೆಲ್ಲವನ್ನು ಕಂಡವರಾಗಿ ತಮ್ಮ ಬರಹಗಳಲ್ಲಿ ಒಡಮೂಡಿಸಿದ ಕಾರಂತರು ಈ ಶತಮಾನದ ಸಾಕ್ಷೀಪುರುಷರಾಗಿದ್ದಾರೆ. ಅದೆಷ್ಟು ಜನಕ್ಕೆ ಈ ಪ್ರಾಶಸ್ತ್ಯವಿದೆ? ಅವರು ಹೊಸಗನ್ನಡ ಸಾಹಿತ್ಯದ ಎಲ್ಲ ಘಟ್ಟಗಳಲ್ಲಿಯೂ ಬಾಳಿದವರು. ಆ ಕಾಲದ ಸಾಹಿತ್ಯ ಪ್ರವೃತ್ತಿಗಳಿಗೆ ಸ್ಪಂದಿಸಿದವರು ಎಂಬುದೂ ಗಣನೀಯವಾದದ್ದು.

ಕಾರಂತ ಎಂದೊಡನೆ ಅವರ ಬದುಕು ಬರಹಗಳಿಗೆ ಅನ್ವಯಿಸುವ ಕೆಲವು ವಿಶೇಷತೆಗಳನ್ನು ಗಮನಿಸಬೇಕು. ಮೊದಲನೆಯದಾಗಿ ಅವರು ಪ್ರಸಕ್ತ ಜೀವನದ ಆಗು-ಹೋಗುಗಳಿಗೆ ಕೊಡುತ್ತಿರುವ ಒತ್ತು. ಎರಡನೆಯದು ಅವರ ನೇರ ನಡವಳಿಕೆ; ಆ ಮೂಲಕದ ಸ್ಪಷ್ಟವಾದಿತ್ವ. ಮೂರನೆಯದು ಅವರ ಜ್ಞಾನದಾಹ; ಅನೇಕಾನೇಕ ವಿಷಯಗಳ ಬಗ್ಗೆ ಗಾಢವಾದ ಚಿಂತನೆ ನಾಲ್ಕನೆಯದು, ಅವರ ಪ್ರಯೋಗಶೀಲತೆ, ಶಿಕ್ಷಣ, ರಂಗಭೂಮಿ, ಯಕ್ಷಗಾನ ಮುಂತಾದವುಗಳು.

ಕಳೆದ ೭೫ ವರ್ಷಗಳಿಂದ ಲೇಖನ ಪ್ರಕ್ರಿಯೆಯಲ್ಲಿ ತೊಡಗಿದ ಕಾರಂತರನ್ನು ಜನಸಾಮಾನ್ಯರು ಓರ್ವ ಕಾದಂಬರಿಕಾರ ಎಂದು ಮಾತ್ರ ತಿಳಿಯುತ್ತಾರೆ. ಅವರು ಬರೆದ ಕಾದಂಬರಿಗಳು ಕೇವಲ ೪೪. ಒಟ್ಟಿನ ಕೃತಿಗಳು ೪೦೦ನ್ನು ಮಿಕ್ಕಿವೆಯಲ್ಲ! ೭೫೦ ಬಿಡಿ ಲೇಖನಗಳೂ ಇವೆ. ಎಲ್ಲವೂ ವಿಚಾರಪ್ರದವಾದವುಗಳು. ಅವರು ಸ್ಪರ್ಶಿಸಿದ ವಿಷಯಗಳು ಮೂರು ಸಾವಿರದಷ್ಟು! ಇದು ಏನನ್ನು ಸೂಚಿಸುತ್ತದೆ? ಕಾರಂತರು ಬದುಕಿನ ನಾನಾ ಕ್ಷೇತ್ರಗಳಲ್ಲಿಯ ಕಲೆ, ವಿಜ್ಞಾನ, ಶಿಕ್ಷಣ, ಭಾಷಾಶಾಸ್ತ್ರ ಸಾಮಾಜಿಕ ನಡವಳಿಕೆ ಇವೇ ಮೊದಲಾದವುಗಳನ್ನು ಕುರಿತೇ ಶತಮಾನದುದ್ದಕ್ಕೂ ಹೆಚ್ಚಿನ ಚಿಂತನೆ ಮಾಡಿದ್ದಾರೆ. ಬರೆದಿದ್ದಾರೆ. ಭಾಷಣ ಮಾಡಿದ್ದಾರೆ. ಕನ್ನಡತನದ ಎಲ್ಲೆಯನ್ನು ದಾಟಿ ಎಷ್ಟೋ ಮುಂದೆ

ಹೋಗಿದ್ದಾರೆ. ಅವರಿಗೆ ಸಂದಿರುವ ಪ್ರಶಸ್ತಿ ಪುರಸ್ಕಾರಗಳು ವಿದೇಶಗಳಿಂದಲೂ ಸಹ ಐವತ್ತನ್ನು ಮೀರಿದ್ದು, ಅವುಗಳಲ್ಲಿ ಸಾಹಿತ್ಯ ಕಾರ್ಯಗಳಿಗಾಗಿ ಇದ್ದವುಗಳು ಕೆಲವು ಮಾತ್ರ!

'ಹುಚ್ಚು ಮನಸ್ಸಿನ ಹತ್ತು ಮುಖಗಳು' ಎಂಬುದು ಕಾರಂತರ ಆತ್ಮ ಚರಿತ್ರೆಯ ಹೆಸರು. 'ಆ ಹತ್ತು' ಎಂಬುದು ಪ್ರಾಯಶಃ ಅನುಪ್ರಾಸಕ್ಕಾಗಿ ಬಂದದ್ದು, ಅವರ ಕಾರ್ಯವ್ಯಾಪ್ತಿ ನೂರಾರು ವಿಷಯಗಳನ್ನು ಒಳಗೊಂಡದ್ದು. ಆ ಅರ್ಥದಲ್ಲಿ ಅವರದು ಪ್ರಚಂಡ ಶಕ್ತಿಶಾಲಿತ್ವ. ಜೊತೆಗೇ ಉನ್ನತ ಮಟ್ಟದ ಕಲಾಭಿರುಚಿಯೂ ಸೇರಿದೆಯಾದ್ದರಿಂದ ಈ ಬಹೂತ್ತಮ ವ್ಯಕ್ತಿತ್ವದ ನಿರ್ಮಾಣವಾಗಿದೆ. ಅಂಥವರು ಮತ್ತಾರೂ ಪ್ರಸಕ್ತ ಭಾರತದಲ್ಲಿ ಇಲ್ಲ. ಕಾರಂತರಿಗೆ ಕಾರಂತರದೇ ಹೋಲಿಕೆ!

ಅವರ ಕೃತಿಗಳ ಮತ್ತು ಬಿಡಿಲೇಖನಗಳ ಸಂಖ್ಯೆ ಇಷ್ಟಿಷ್ಟು ಎಂದೆನಷ್ಟೆ. ಈ ಮಾಹಿತಿಯನ್ನು ಅವರು ತಮ್ಮ ಲೇಖನ ಕಾರ್ಯದ ಆರಂಭದಿಂದಲೇ ದಾಖಲಿಸಿಕೊಂಡಿರುವರೆಂದಲ್ಲ. ಸಾಮಾನ್ಯವಾಗಿ ಲೇಖಕರು ಬರೆಯುವುದಕ್ಕೆ ತೊಡಗುವ ಮುನ್ನ ವಿಶೇಷ ಕಾಳಜಿ ವಹಿಸುತ್ತಾರೆ. ಬರೆದಾದ ಮೇಲೆ ಅವುಗಳ ಮೇಲೆ ಅಪತ್ಯ ಪ್ರೇಮವನ್ನು ತೋರುವವರೇ ಹೆಚ್ಚು ಜನ. ನಾನು ಬಲ್ಲಷ್ಟರ ಮಟ್ಟಿಗೆ, ಗೋವಿಂದ ಪೈ, ಎಚ್. ಜಿ. ಬೆಂಗೇರಿ ಇಂಥ ಒಬ್ಬಿಬ್ಬರು ಪ್ರಕಟವಾದ ತಮ್ಮ ಬರಹಗಳ ಬಗ್ಗೆ ನಿರಾಸಕ್ತಿ ತೋರಿಸಿದ್ದಾರೆ. ಕಾರಂತರಿಗೋ ನಿರಾಸಕ್ತಿ ಮಾತ್ರವಲ್ಲ. ಅಖಂಡ ನಿರ್ಲಕ್ಷ್ಯ, ಕಾಯ್ದಿರಿಸುವಲ್ಲಿ ಅವ್ಯವಸ್ಥೆಯ ಪರಮಾವಧಿ.

ಸುಮಾರು ೩೫ ಸಾವಿರ ಪುಟಗಳ, ಅಕ್ಷರಶಃ ನೂರಾರು ಕಡೆಗಳಲ್ಲಿ ಚದರಿ ಹೋಗಿರುವ ಲೇಖನಗಳ, ಅದರಂತೆ ವಿವಿಧ ಪ್ರಕಾಶಕರು ಹೊರತಂದ ನಾಲ್ಕುನೂರು ಗ್ರಂಥಗಳ ವಿಷಯ ಸಮುದ್ರದಷ್ಟು ಅಪಾರ. ಅವನ್ನು ಪತ್ತೆ ಹಚ್ಚಬೇಕು. ಅನಂತರ ವ್ಯವಸ್ಥಿತವಾಗಿ ವರ್ಗೀಕರಿಸಬೇಕು; ಮತ್ತಲ್ಲದೆ ಓದಿ, ಅವುಗಳಲ್ಲಿ ಬಂದಿರುವ ವಿಷಯವನ್ನು ಸ್ಪಷ್ಟ ರೀತಿಯಲ್ಲಿ ತಿಳಿದುಕೊಂಡಿರಬೇಕು. ಅನಂತರ ಸೂಕ್ತ ಪ್ರಸ್ತಾವನೆ ಸಹಿತ ಮುದ್ರಿಸಿ ಪ್ರಕಟಿಸಬೇಕು.

ಈ ಕಾರ್ಯವನ್ನು ಮಾಡದೇ ಹೋದರೆ ಕಾರಂತರನ್ನು ಆಳವಾಗಿ ಅಭ್ಯಾಸ ಮಾಡಬಯಸುವವರಿಗೆ ಕೈಕಟ್ಟಿದಂತಾಗುತ್ತದೆ. ಹಲವು ದಶಕಗಳಾದ ಮೇಲೆ ಕಾರಂತರನ್ನು ಮುಂಬರುವ ಪೀಳಿಗೆಯವರು ಮರೆಯುವರು. ಮರೆತರೆ ಏನಂತೆ? ಎನ್ನಲಾಗದು. ಕಾರಣ ಅವರ ಸಾಹಿತ್ಯ ಸಾರಸ್ವತದಲ್ಲಿ ಈ ಶತಮಾನದ, ನಮ್ಮ ಬಾಳುವೆಯ, ನಮ್ಮ ಸಂಸ್ಕೃತಿಯ ತಿರುಳೇ ಇದೆ. ಅದನ್ನು ಯಾವ ಕಾಲಕ್ಕೂ ಅಲಕ್ಷಿಸಲಾಗದು.

ಈ ಮಹತ್ತರ ಕಾರ್ಯವನ್ನು ಮಾಡಲು ಒಬ್ಬ ವ್ಯಕ್ತಿ ಮುಂದೆ ಬಂದರು. ಅವರ ಹೆಸರು ಮಾಲಿನಿ ಮಲ್ಯ.

ಕಾರಂತರಿಗೆ ತಮ್ಮ ೭೫ನೆಯ ವಯಸ್ಸಿನಲ್ಲಿ ಓದಿ ತಾವೇ ಬರೆಯುವುದು ಕಷ್ಟದ್ದೆನಿಸಿದಾಗ ಲಿಪಿಕಾರ್ತಿಯಾಗಿ ಮಾಲಿನಿ ಬಂದರು. ಅವರಿಗೆ ಬೇರೊಂದೆಡೆ ನೌಕರಿ.

ಲಲಿತ ಬರವಣಿಗೆಯನ್ನು ಓದುವಷ್ಟರ ಮಟ್ಟಿಗೆ ಮಾತ್ರ ಕನ್ನಡ ಸಾಹಿತ್ಯದ ಸಂಪರ್ಕ. ಕಾರಂತರು ಬಾಯಿಯಿಂದ ಹೇಳಿದ್ದನ್ನು ಬರೆದುಕೊಟ್ಟರು. ಅದರಂತೆ ಅವರ ಪ್ರಕಟಿತ ಲೇಖನ-ಪುಸ್ತಕಗಳನ್ನು ಕಲೆ ಹಾಕತೊಡಗಿದರು.

ಈ ಸಾಮಗ್ರಿ ಮೂರು ತೆರನಾಗಿದ್ದಿತು:- ಗ್ರಂಥಗಳು, ಲೇಖನಗಳು (ವೈಚಾರಿಕ), ಇತರ ಬರಹಗಳು.

ಹಲವು ನೂರರಷ್ಟು ವೈಚಾರಿಕ ಲೇಖನಗಳು; ಅವೆಲ್ಲದರ ವಿಷಯವೂ ಜಟಿಲವಾದದ್ದು. ಸಮ್ಮಿಶ್ರ ಸ್ವರೂಪದವು. ಅವುಗಳ ವ್ಯವಸ್ಥಿತ ಹೊಂದಿಸುವಿಕೆಯ ಯೋಚನೆಯೇ ಧೃತಿಗೆಡಿಸುವಂತಹದು. ಕೊನೆಗೆ ಹಲವಾರು ವಿಷಯಗಳಡಿ ಅವನ್ನು ಸಂಪಾದಿಸಲಾಯಿತು.

ಇದೆಲ್ಲ ಸುಮಾರು ನಾಲ್ಕು ಸಾವಿರ ಪುಟಗಳ ಸಾಮಗ್ರಿ. ಮಾಲಿನಿ ಅದನ್ನೆಲ್ಲ ಎಂಟು ಸಂಪುಟಗಳಲ್ಲಿ ಅಣಿಗೊಳಿಸಿದರು. ಈ ಕೃತಿಯನ್ನು ವಿಸ್ತಾರವಾದ ಪ್ರಸ್ತಾವನೆಯೊಡನೆ, ಮಂಗಳೂರು ವಿಶ್ವವಿದ್ಯಾನಿಲಯದವರು ಸರಕಾರದಿಂದ ಪ್ರತ್ಯೇಕವಾಗಿ ಆರ್ಥಿಕ ನೆರವನ್ನು ಪಡೆದು ಪ್ರಕಟಿಸಿದ್ದಾರೆ. ನಾಲ್ಕು ವರ್ಷಗಳ (೧೯೯೩-೧೯೯೬) ಈ ಕೈಂಕರ್ಯದಲ್ಲಿ ವಿವೇಕ ರೈಗಳು ಹಾಗೂ ಆಗಿನ ಕುಲಪತಿಯವರು ವಿಶೇಷ ಆಸಕ್ತಿ ವಹಿಸಿದ್ದು ಉಲ್ಲೇಖನೀಯ.

ಈ ಸಂಪುಟಗಳ ಪ್ರಕಟಣೆ ನಡೆಯುತ್ತಿದ್ದಂತೆಯೇ ಶಿವರಾಮ ಕಾರಂತರ ಗ್ರಂಥಗಳ ವಿಷಯ ಏನೆಂಬುದನ್ನು ತಿಳಿಯಪಡಿಸುವ ಕಾರ್ಯವನ್ನು ಮಾಲಿನಿ ಕೈಗೆತ್ತಿಕೊಂಡರು. ಲೇಖನಗಳಂತೆಯೇ, ಅವರ ಅನೇಕ ಗ್ರಂಥಗಳು ಅಲಭ್ಯವಾಗಿದ್ದವು. ಅಂತೂ ನಾಲ್ಕಾರನ್ನುಳಿದು ಸುಮಾರು ೪೦೦ ಗ್ರಂಥಗಳನ್ನು ದೊರಕಿಸಲಾಯಿತು. ಮಾಲಿನಿ ಅವನ್ನೆಲ್ಲ ಓದಿ, ಅವುಗಳ ಸಾರವನ್ನು ಬರೆದು ತೆಗೆದರು. ಸೃಜನ; ಸೃಜನೇತರ ಎಂಬ ಸ್ಥೂಲ ವಿಭಾಗಗಳಲ್ಲಿ ಅವನ್ನು ವರ್ಗೀಕರಿಸಿದರು. ಹೀಗೆ ಸಿದ್ಧವಾಯಿತು. - "ಶಿವರಾಮ ಕಾರಂತ ವಾಙ್ಮಯ ವೃತ್ತಾಂತ"' (೧೯೯೭) ಈ ಗ್ರಂಥದಿಂದ ಕಾರಂತರ ಬರಹದ ನಿಲುವು, ಧೋರಣೆ ತಿಳಿದು ಬರುತ್ತದೆ. ಹಾಲಿನ ಮೇಲಿನ ಕೆನೆಯಂತೆ ಕಾರಂತ ಚಿಂತನೆಯೆಲ್ಲ ಅದರಲ್ಲಿ ಹೆಪ್ಪುಗಟ್ಟಿ ನಿಂತಿದೆ.

'ಕರಿ (ಆನೆ) ಕನ್ನಡಿಯಲ್ಲಿ ಕಾಂಬಂತೆ' ಕಾರಂತರ ಬಗ್ಗೆ ದಾಖಲಿಸಬೇಕಾದ ಸಮಸ್ತ ಕಾರ್ಯವನ್ನು ಶ್ರೀಮತಿ - ಮಲ್ಯರು ಮಾಡಿ ಮುಗಿಸಿದ್ದಾರೆ ಎಂದು ಬಗೆದಿದ್ದೆ. ಈಚೆಗೆ 'ಕಿನ್ನರ ಲೋಕ' ಎಂಬ, ಕಾರಂತರ ರಂಗಕಲಾ ವಿದಗ್ಧತೆಯನ್ನು ತೋರ್ಪಡಿಸುವ ಸ್ವತಂತ್ರ ವಿವೇಚನಾ ಗ್ರಂಥವನ್ನೂ ರಚಿಸಿದ್ದಾರೆ. ಅಂತೂ "ನಾನು ಕಂಡ ಕಾರಂತರು" ಎಂಬ ತಮ್ಮ ಸ್ವನಿಷ್ಠ ಪುಸ್ತಕದಿಂದ (೧೯೮೭) ಆರಂಭಿಸಿ ಈ ಹತ್ತು ವರ್ಷಗಳಲ್ಲಿ ಮಾಲಿನಿ ಮಲ್ಯರು ವಿಕ್ರಮವನ್ನೇ ಸಾಧಿಸಿದ್ದಾರೆ.



# ೧೩. ಹೃದಯವಂತ ಸಾಮಾಜಿಕ ಚಿಂತಕರು

ಡಾ. ಶಿವರಾಮ ಕಾರಂತರ ಆಪ್ತಮಿತ್ರರಾದ ಶಂ. ಬಾ. ಜೋಶಿಯವರು ತಮ್ಮ ೯೦ನೆಯ ವಯಸ್ಸಿನಲ್ಲಿ ತೀರಿಕೊಂಡರು. ಕಾರಂತರ ಹಾಗೆ ಜ್ಞಾನಪೀಠ ಪ್ರಶಸ್ತಿ ಪಡೆದಿದ್ದ ಮಾಸ್ತಿಯವರೂ ಈ ೯೦ನೆಯ ವಯಸ್ಸಿನಲ್ಲಿ ವಿಧಿವಶರಾದರು. ಈಚೆಗೆ ಅಸುನೀಗಿದ ಸೇಡಿಯಾಪು ಕೃಷ್ಣಭಟ್ಟರಿಗೂ ಇದು ಅನ್ವಯಿಸುತ್ತದೆ. ಅದರಂತೆ ಕುವೆಂಪು, ಸಿಂಪಿ ಲಿಂಗಣ್ಣ ಇವರೂ ೯೦ನೆಯ ದಶಕದಲ್ಲಿ ಕಾಲಿಟ್ಟರಾದರೂ ಆ ಮುಂದೆ ಬದುಕಿ ಉಳಿಯಲಿಲ್ಲ. ಇವರೆಲ್ಲ ಬಹುಮುಖ ಪ್ರತಿಭಾನ್ವಿತರು; ಮಹಾನ್ ಲೇಖಕರು. ಇನ್ನೇನು ನೂರು ವರ್ಷ ಬಾಳುತ್ತಾರೆ ಎಂದು ನಾವಂದುಕೊಳ್ಳುತ್ತಿರುವಾಗಲೇ ವಿಧಿ ಅವರನ್ನು ಸೆಳೆದೊಯ್ದಿದೆ. ಅಂತೂ ಈ ವಿಧಿಯು ಕನ್ನಡದ ಮಹಾನ್ ಲೇಖಕರನ್ನು ಶತಾಯುಷಿಗಳಾಗಲು ಬಿಟ್ಟಿಲ್ಲ. ಇಷ್ಟರ ವರೆಗಂತೂ.

ಶಿವರಾಮ ಕಾರಂತರು ಖಂಡಿತಾ ಬದುಕಿ ಉಳಿಯುವರೆಂದು ಅನೇಕರು ನಂಬಿದ್ದರು. ಅವರ ಓಡಾಟ, ಭಾಷಣ ಕಾರ್ಯಕ್ರಮ ಇವನ್ನು ಗಮನಿಸಿ ನಮಗೆಲ್ಲ ಹಾಗೆ ಅನಿಸಿತ್ತು. ಎರಡು ವರ್ಷಗಳ ಹಿಂದೆ ಅವರ ಹುಟ್ಟೂರಾದ ಕೋಟದಲ್ಲಿ, ಅವರ ೯೪ನೆಯ ವರ್ಷದ ಹುಟ್ಟುಹಬ್ಬವನ್ನು ಆಚರಿಸಿದ ಸಂದರ್ಭದಲ್ಲಿ ನಾನು "ಶತಂ ಜೀವೇದಶರದಮ್ ಎಂದಾಗಲೀ, ನೂರು ವರ್ಷ ಅವರು ಬಾಳಲಿ ಎನ್ನುವುದರಲ್ಲಿ ಅರ್ಥವಿಲ್ಲ. ನೂರಿಪ್ಪತ್ತು ವರ್ಷ ನಮ್ಮ ಮಧ್ಯದಲ್ಲಿ ಅವರು ಇರಲಿ" ಎಂದು ಹೇಳಿದ್ದೆ. ಈಗ ಇಲ್ಲವಲ್ಲ ಎಂಬ ಭಾವನೆ ಬಂದಾಗ ತುಂಬಾ ಬೇಸರವೆನಿಸುತ್ತದೆ; ನನ್ನಂತೆ - ಸಾವಿರಾರು ಜನರಿಗೆ.

ಶಿವರಾಮ ಕಾರಂತರನ್ನು ಶ್ರೇಷ್ಠ ಸಾಹಿತಿಯೆಂದು, ನಾಟಕ, ಯಕ್ಷಗಾನ ಕಲಾವಿದ್ಗರೆಂದು, ಪರಿಸರವಾದಿಯೆಂದು, ಪ್ರಯೋಗಾಸಕ್ತರೆಂದು, ಚಿಂತನಶೀಲರೆಂದು, ನಿಷ್ಠುರ ಪ್ರಾಮಾಣಿಕರೆಂದು.. ಒಂದೇ ಎರಡೇ ಹೀಗೆ ಅವರ ಹತ್ತೈವತ್ತು ಗುಣವಿಶೇಷಗಳನ್ನು ಜನತೆ ಬಲ್ಲುದು. ಆದರೆ ಅವರ, ನನ್ನ ೪೫ ವರ್ಷಗಳ ಒಡನಾಟದಲ್ಲಿ ನನಗೆ ಆಪ್ಯಾಯಮಾನವಾದದ್ದು ಅವರ ಹೃದಯವಂತಿಕೆ, ಸ್ನೇಹಪರತೆ ಹಾಗೂ ಮಾನವೀಯತೆ.

ಸಾಹಿತ್ಯ ಕೃತಿಗಿಂತ ಸಾಹಿತಿಯ ಬದುಕು ದೊಡ್ಡದು ಎಂಬ ಮಾತು ಕಾರಂತರಿಗೆ ಅನ್ವಯಿಸಿದಷ್ಟು ಬೇರಾವ ಸಾಹಿತಿಗೂ ಅನ್ವಯಿಸದು. ಅವರಂತೆ ಶ್ರೇಷ್ಠ ಕಾದಂಬರಿ, ಕತೆ, ನಾಟಕಾದಿಗಳನ್ನು ರಚಿಸಿದವರಿರಬಹುದು. ಆದರೆ ಬದುಕಿನ ಮೌಲ್ಯಗಳನ್ನು ಅರಸಿಕೊಂಡು,

ಸಮಾಜದ ಸಮಸ್ತ ಜನರಿಗೆ ಒಳ್ಳೆಯದಾವುದೆಂಬುದನ್ನು ಚಿಂತಿಸಿ, ಆ ಎಲ್ಲವನ್ನು ಬರಹ ರೂಪದಲ್ಲಿ ಮೂಡಿಸಿದ್ದರಲ್ಲಿ ಕಾರಂತರ ಹಿರಿಮೆ ಇದೆ. ಈ ಕಾರಣದಿಂದ ಕಾರಂತರು ಕರ್ನಾಟಕದವರು ಮಾತ್ರವೇ ಆಗದೆ, ಅಖಿಲ ಭಾರತ ವ್ಯಕ್ತಿಯಾಗಿ, ಕೆಲವು ಕ್ಷೇತ್ರಗಳಲ್ಲಿ ಅಂತಾರಾಷ್ಟ್ರೀಯ ಗಣ್ಯತೆ ಪಡೆದವರಾಗಿ ಬಾಳಿದರು. ಈ ಸಿದ್ಧಿಯ ಮೂಲ ಪ್ರೇರಣೆ ಎಂದರೆ, ಅವರ ಹೃದಯವಂತಿಕೆಯೇ. ಅವರ ಬರವಣಿಗೆಗೆ ಹಾಗೂ ಅವರ ಇತರ ಕಾರ್ಯಕ್ಷೇತ್ರಗಳಲ್ಲಿಯ ಮುನ್ನಡೆಗೆ ಈ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಳಕಳಿಯೇ ಕಾರಣವಾಗಿದೆ.

ಕಾರಂತರು ಬದುಕಿನ ನಾನಾ ಕ್ಷೇತ್ರಗಳಲ್ಲಿ - ಕಲೆ, ವಿಜ್ಞಾನ, ಭಾಷೆ, ಪರಿಸರ, ಸಮಾಜ ಜೀವನ, ಪ್ರಚಲಿತ ಸಮಸ್ಯೆ ಇವನ್ನು ಕುರಿತು ವಿವೇಚಿಸಿದ್ದಾರೆ. ಯಾಕೆ ಈ ಬಾಹುಳ್ಯ? 'ಬಾಲ ಪ್ರಪಂಚ'ವನ್ನು ಯಾಕೆ ಮತ್ತು ಯಾರಿಗಾಗಿ ರಚಿಸಿದರು? ವಿಜ್ಞಾನದ ಸಂಪುಟಗಳನ್ನು ಅವರು ಹೊರತರುವ ಅಗತ್ಯವಾದರೂ ಏನಿತ್ತು? ಇವುಗಳ ಹಿಂದಿದ್ದ ಆಶಯ ಒಂದೇ. ಅದೆಂದರೆ ನಮ್ಮ ಜನತೆಯ ಬದುಕು ಹಸನಾಗಬೇಕು ಎಂಬಲ್ಲಿನ ಕಳಕಳಿ. ಅವರು ಯಕ್ಷಗಾನದ ಕೈವಾರಿಗಳಾದದ್ದರ ಕಾರಣವಾದರೂ ಸಾಮಾನ್ಯ ಜನತೆಯ ಕಲಾಪೋಷಣೆಯಾಗಿದ್ದಿತೆಂಬುದನ್ನು ಮರೆಯಲಾಗದು.

ಹೀಗಿರುತ್ತ ಕಾರಂತರನ್ನು ಬರಿಯೆ ಕನ್ನಡ ಸಾಹಿತಿ, ಶ್ರೇಷ್ಠ ಕಾದಂಬರಿಕಾರ ಎಂದಷ್ಟೇ ತಿಳಿದರೆ ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ. ಆ ತಪ್ಪನ್ನು ಮಂಗಳೂರು ವಿಶ್ವವಿದ್ಯಾನಿಲಯ ಮಾಡಿತು. ಮೊಯಿಲಿಯವರು ಮುಖ್ಯಮಂತ್ರಿಗಳಾಗಿದ್ದಾಗ ಆ ವಿಶ್ವವಿದ್ಯಾನಿಲಯದಲ್ಲಿ ಕಾರಂತ ಪೀಠವನ್ನು ಸ್ಥಾಪಿಸಲಾಗಿದ್ದಿತು. ಅದಕ್ಕಾಗಿ ಐದು ಲಕ್ಷ ರೂ.ಗಳ ಅನುದಾನವನ್ನೂ ಮೊಯಿಲಿಯವರು ಬಿಡುಗಡೆ ಮಾಡಿದ್ದರು. ಇನ್ನು ಅದಕ್ಕೆ ಒಬ್ಬ ಅಧ್ಯಕ್ಷರ ನೇಮಕವಾಗಬೇಕು. ಸರಿ. ಯುನಿವರ್ಸಿಟಿಯಿಂದ ಜಾಹೀರಾತು ಹೋಯಿತು. 'ಅಭ್ಯರ್ಥಿಯು ಕನ್ನಡದಲ್ಲಿ ಪಿಎಚ್.ಡಿ. ಮಾಡಿದವನಿರಬೇಕು....' ಎಂಬ ಒಂದು ಕರಾರು ಅದರಲ್ಲಿದ್ದಿತು. ಅದಕ್ಕೆ ಕಾರಂತರು ಖಾರವಾಗಿ ಪತ್ರ ಬರೆದರು. "ನಾನು ಬರಿಯೆ ಕನ್ನಡ ಸಾಹಿತಿಯಲ್ಲ. ಈ ರೀತಿ ಪೀಠವನ್ನು ನಡೆಸುವರೆ, ನನ್ನ ಹೆಸರನ್ನು ಅದಕ್ಕೆ ಇಡುವುದು ಸರ್ವಥಾ ಬೇಡ."

ಆ ಮುಂದೆ ಬೇರೆ ಕುಲಪತಿಗಳು ಬಂದ ಮೇಲೆ ಅವರು ಕಾರಂತರಲ್ಲಿಗೆ ಹೋಗಿ "ಸಾರ್, ಪೀಠದ ಚೇರ್‌ಮನ್ ಎಂದು ನೀವು ಯಾರನ್ನು ಹೆಸರಿಸುತ್ತೀರೊ ಅವರನ್ನೆ ನೇಮಿಸುವೆವು" ಎಂದು ಹೇಳಿದರು. ಆಗ ಕಾರಂತರು "ಮೊದಲು ಸರಕಾರದಿಂದ ವಾರ್ಷಿಕ ಅನುದಾನ ದೊರಕಿಸಿಕೊಂಡು ಬನ್ನಿ" ಎಂದರಂತೆ.

ಇತ್ತ ಅವರು ಪರಿಸರವಾದಿಯಾದದ್ದರ ಹಿನ್ನೆಲೆಯಂತೂ ಸ್ಪಷ್ಟವಾಗೇ ಇದೆ. ಕೈಗಾದ ಅಣುಶಕ್ತಿ ಕೇಂದ್ರದಿಂದ ಮನುಷ್ಯರು ಮಾತ್ರವಲ್ಲದೆ ಪಶು ಪಕ್ಷಿಗಳ ಜೀವನಕ್ಕೂ ಹಾನಿ ಎಂಬುದೇ ಅವರಿಗಿದ್ದ ಕಾಳಜಿ ಎಂಬುದನ್ನು ಬಲ್ಲೆವು. ಅಷ್ಟೇ ಅಲ್ಲ, ಅವರ ಹೃದಯವಂತಿಕೆ

ಅಲ್ಲಿಯ ನಿರ್ಜೀವ ನಿಷ್ಪಾಪದ ವೃಕ್ಷ ವನ್ಯ ಸಮುದಾಯವನ್ನು ತಬ್ಬಿಕೊಳ್ಳುವಷ್ಟು ವಿಶಾಲವಾಗಿದ್ದಿತು. 'ಸಾಮಾನ್ಯ ಜನತೆಯ ಬದುಕನ್ನು ಮುರುಟುಗೊಳಿಸುವ ಅಧಿಕಾರವನ್ನು ಈ ಅಣು ವಿಜ್ಞಾನಿಗಳಿಗೆ ಅದಾರು ಕೊಟ್ಟರು?' ಎಂದು ಭಾರತದ ತುಂಬೆಲ್ಲ ಕೇಳಿಸುವಂತೆ ಗುಡುಗಿದರು. ನಮ್ಮ ದೇಶದ ಇತರ ಕಡೆಗಳಲ್ಲಿಯೂ ಈ ಪರಿಸರ ಸಂಹಾರ ಕಾರ್ಯ ನಡೆದೇ ಇದೆ. ಆದರೆ ಆ ಪ್ರದೇಶಗಳ ಅದೆಷ್ಟು ಜನ ಲೇಖಕರು ಇವರ ಹಾಗೆ ಸಿಡಿದೆದ್ದರು?

ಹಾಗೆಂದು ಕೇಳಿದವರು, ಕೆಲ ವರ್ಷಗಳ ಹಿಂದೆ ಅಖಿಲ ಭಾರತ ಮರಾಠೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ವಿಶ್ರಾಮ ಬೇಡೇಕರರು. ಲೇಖಕನಾದವನು ತನ್ನ ಕಾಯಕದಲ್ಲಿ ನಿಷ್ಣಾತನಿದ್ದರೆ ಸಾಲದು; ಸಾಮಾಜಿಕ ಬದ್ಧತೆ ಇದ್ದವನು ತಾನೆಂದು ಹೇಳಿಕೊಂಡರೂ ಸಾಲದು; ಆತ ಸಮಾಜದ ಆಗುಹೋಗುಗಳಲ್ಲಿ ಸಕ್ರಿಯವಾಗಿ ಸ್ಪಂದಿಸಬೇಕು ಎಂಬುದಾಗಿ ಅವರು ಹೇಳಿ, ಅದರ ಸಕೃತ್ ನಿದರ್ಶನವೆಂದು, ಕಾರಂತರು ಪರಿಸರ ವಿನಾಶದ ವಿರುದ್ಧವಾಗಿ ಚುನಾವಣೆಯಲ್ಲಿ ಸ್ಪರ್ಧಿಸಿದ್ದನ್ನು ಉಲ್ಲೇಖಿಸಿದ್ದರು. ಮರಾಠೀ ಸಾಹಿತ್ಯದಲ್ಲಿ ಅಂಥವರೊಬ್ಬರೂ ಇಲ್ಲವೆಂದು ವಿಷಾದಿಸಿದ್ದರು. ಇದೇ ಬಗೆಯ ಮೆಚ್ಚುಗೆ ಆಗಿನ ಉತ್ತರ ಭಾರತದ ಪತ್ರಿಕೆಗಳಲ್ಲಿಯೂ ವರದಿಯಾಗಿದ್ದಿತು. ಕಾರಂತರ ಕೆಲವು ಕಾದಂಬರಿಗಳು ಭಾರತದ ಹಲವಾರು ಭಾಷೆಗಳಲ್ಲಿ ಅನುವಾದಗೊಂಡು, ಅವರುಗಳಿಗೆ ಓದಲು ದೊರೆತದ್ದು, ಅವರು ಯಕ್ಷಗಾನ ವಿಚಾರವಾಗಿ ಕೈಕೊಂಡ ಹೊಸ ಪ್ರಯೋಗ ಮತ್ತು ಪ್ರಸಾರ, ಜ್ಞಾನಪೀಠ ಪ್ರಶಸ್ತಿ, ಪರಿಸರ ಆಂದೋಲನ ಮತ್ತು ತುರ್ತು ಪರಿಸ್ಥಿತಿಯಲ್ಲಿ ಪದ್ಮಭೂಷಣ ಪದವಿಯ ಪರಿತ್ಯಾಗ ಈ ಕಾರಣಗಳಿಂದ ಕನ್ನಡದ ಕಾರಂತರು ಭಾರತದ ಅಧ್ವರ್ಯುಗಳಾಗಿ ಪರಿಶೋಭಿಸಿದರು.

ಎಂಟು ವರ್ಷಗಳ ಹಿಂದೆ ನಾವು ಕೆಲವು ಕನ್ನಡಿಗರು (ಅನಂತ ತೋರೊ, ಕೃ. ಶಿ. ಹೆಗಡೆ, ವಿರೂಪಾಕ್ಷ ಕುಲಕರ್ಣಿ, ಇ.) ಪುಣೆಯಲ್ಲಿರುವ ಖ್ಯಾತನಾಮ ಮರಾಠೀ ಲೇಖಕ ಪು. ಲ. ದೇಶಪಾಂಡೆಯವರ ಸಂದರ್ಶನ ತೆಗೆದುಕೊಂಡೆವು. ಆಗ ಅವರು "ನಮ್ಮಲ್ಲಿ ಪ್ರಾದೇಶಿಕ ಮಟ್ಟದ, ಮಾತೃಭಾಷೆಗೆ ಸೀಮಿತರಾದ ಉನ್ನತಮಟ್ಟದ ಬರಹಗಾರರಿದ್ದಾರೆ. ತಮ್ಮ ಕ್ಷೇತ್ರದಲ್ಲಿ ತುಂಬಾ ಸಾಧಿಸಿದ್ದಾರೆ. ಮನ್ನಣೆ ಗಳಿಸಿದ್ದಾರೆ. ಆದರೆ ಅವರ ಪ್ರಭಾವ, ಮಹತ್ವ ಇವು ಆ ಪ್ರದೇಶಕ್ಕೆ ಸೀಮಿತ. ಅದೇ, ರವೀಂದ್ರನಾಥ ಠಾಕೂರರಿಗೆ ಈ ಮಾತು ಅನ್ವಯಿಸುವುದಿಲ್ಲ. ಅವರು ಬಂಗಾಲೀ ಲೇಖಕರೆಂದು ನಾವು ತಿಳಿದಿರುವೆವಾದರೂ ಅವರನ್ನು ಭಾರತೀಯ ಲೇಖಕರೆಂದೇ ನಾವು ಬಗೆಯುತ್ತೇವೆ. ಅವರ ಪ್ರಭಾವ ಬಂಗಾಲವನ್ನು ದಾಟಿ, ದೇಶದ ಇತರ ಭಾಷಾವಲಯವನ್ನೂ ಪ್ರವೇಶಿಸಿದೆಯಲ್ಲವೆ. ಅವರು ಬರಿ ಲೇಖಕರಾಗಿ ಉಳಿಯಲಿಲ್ಲ. ಕಲಾವಿದರಾಗಿದ್ದರು, ಸಾಮಾಜಿಕ ಪ್ರಜ್ಞೆಯುಳ್ಳವರಾಗಿದ್ದರು. ಭಾರತೀಯ ಸಂಸ್ಕೃತಿಯ ಮರ್ಮವನ್ನು ಅರಿತವರಾಗಿದ್ದರು. ಅವರ ಅನಂತರ? ಆ ಸ್ಥಾನಕ್ಕೆ ಅರ್ಹರಾದವರು ಯಾರು? ಎಂದು ಕೇಳಿದರೆ ನಾನು ನಿಸ್ಸಂಶಯವಾಗಿ ಕಾರಂತರ ಹೆಸರನ್ನು ಹೇಳುವೆ" ಎಂದು ನುಡಿದಾಗ ನಾವು ತುಸು ಬೆರಗಾದೆವು. ಮುಂದುವರಿದು ಅವರು ಹೇಳಿದರು: "ನನಗೇನೂ ಅವರ ವೈಯಕ್ತಿಕ

ಪರಿಚಯ ಇಲ್ಲ. ಮರಾಠಿಯಲ್ಲಿ ಅನುವಾದಗೊಂಡ ಕೆಲವು ಕೃತಿಗಳನ್ನು ಓದಿದ್ದೇನೆ. (ಮರಳಿ ಮಣ್ಣಿಗೆ, ಚೋಮನದುಡಿ, ಮೈಮನಗಳ ಸುಳಿಯಲ್ಲಿ ಈ ಹೆಸರುಗಳನ್ನು ಹೇಳಿದರು) ಅವುಗಳಲ್ಲಿ ವ್ಯಕ್ತವಾಗಿರುವ ಮಾನವೀಯ ಅನುಕಂಪ ನನ್ನ ಮನಸ್ಸಿಗೆ ವೇದ್ಯವಾಯಿತು. He is a great humanist."

ಬದುಕಿನಲ್ಲಿ ನೊಂದವರ, ನಿಸ್ಸಹಾಯಕರ ಬಗ್ಗೆ ಕಾರಂತರಲ್ಲಿ ಅನನ್ಯವಾದ ಅನುಕಂಪ ಅವರ ತರುಣ ವಯದಿಂದಲೇ ಕಾಣಸಿಗುತ್ತದೆ. 'ಕನ್ನಡಿಗ' ವಾರಪತ್ರಿಕೆಯ '(ಮಂಗಳವೇಢೆ ಶ್ರೀನಿವಾಸರಾಯರಿಂದ ಸಂಪಾದಿತ) ೧೯೨೮ರಷ್ಟು ಹಿಂದಿನ ಸಂಚಿಕೆ ತಿರುವಿ ಹಾಕುತ್ತಿದ್ದಾಗ ಈ ಪ್ರಕಟನೆ ಕಂಡಿತು:

> "ಸುಧಾರಕರು ಬೇಕು" ವೇಶ್ಯಾ ಪಂಗಡದಲ್ಲಿ ವಿವಾಹಕ್ಕೆ ಸಿದ್ಧರಿರುವ, ವಧೂವರ ಪಕ್ಷದವರು ಅವರವರ ಕುರಿತಾಗಿ ವಯಸ್ಸು, ವಿದ್ಯೆ, ನಡತೆ, ಆಸ್ತಿ ಮುಂತಾದ ವಿಷಯಗಳನ್ನು ಭಾವಚಿತ್ರದೊಡನೆ ತಿಳಿಸಲಿ. ವಿಳಾಸ: ಶಿವರಾಮ ಕಾರಂತ, ಅಂಚೆ: ಕುಂದಾಪುರ, ದ. ಕ. ಜಿಲ್ಲೆ.

ಇದೇ ಕಾಲದಲ್ಲಿ ಕಾರಂತರು ಗಾಂಧೀಜಿಗೆ, ಬರೆದ ಪತ್ರ ಹಲವೆಡೆ ಉಲ್ಲೇಖಗೊಂಡಿದೆ. ಅದರಲ್ಲಿ ಕಾರಂತರು ವೇಶ್ಯೆಯರ ಹೆಣ್ಣುಮಕ್ಕಳ ಭವಿಷ್ಯದ ಬಗ್ಗೆ ಮಾರ್ಗದರ್ಶನ ಕೇಳಿದ್ದರು. ಗಾಂಧೀಜಿ ಉತ್ತರಿಸಿದರು:

"ಆ ಹುಡುಗಿಯರು ಯಾವಜ್ಜೀವ ಬ್ರಹ್ಮಚರ್ಯದಿಂದಿರಲಿ."

ಅಂಥವರ ಬಗ್ಗೆ ನಿಜವಾದ ಕಳಕಳಿಯಿದ್ದ ಕಾರಂತರಿಗೆ ಅದು ಬೇಸರ ಮೂಡಿಸಿತು. ಗಾಂಧೀಜಿ ಅನುಯಾಯಿತ್ವದಿಂದ ದೂರ ಸರಿಯುವುದಕ್ಕೆ ಅದೂ ನಿಮಿತ್ತವಾಯಿತು.

ಕಾರಂತರ ಹೃದಯವಂತಿಕೆಯ ವೈಶಾಲ್ಯವನ್ನು ತಿಳಿಯಬೇಕಾದರೆ ಅವರ 'ಸ್ಮೃತಿಪಟಲ' ಸಂಪುಟವೊಂದರ 'ಬಂಧು-ಮಿತ್ರರು ಮತ್ತು ನಾನು' ಎಂಬ ಸುದೀರ್ಘವಾದ ಅಧ್ಯಾಯವನ್ನು ನೋಡಬೇಕು. ಅವರದು ೯೦ ವರ್ಷಗಳವರೆಗೆ ವಿಸ್ತರಿಸಿದ ಬದುಕು. ಮೇಲಾಗಿ ಸ್ನೇಹಪರತೆಯ ಪರಮಾವಧಿ. ಅದಕ್ಕೆ ಕುಂದಣವಿಟ್ಟಂತೆ ಜೀವಿಗಳು ಮತ್ತು ಜೀವನದ ಬಗ್ಗೆ ಅನೂನವಾದ ಕಳಕಳಿ. ಹೀಗಾಗಿ ಅಸಂಖ್ಯಾತ ವ್ಯಕ್ತಿಗಳು ಅವರ ಸಂಪರ್ಕದಲ್ಲಿ ಬಂದು ಹೋಗಿದ್ದಾರೆ. ಆ ವಲಯದಲ್ಲಿ ಮನುಷ್ಯ ಸಂಬಂಧದ ನಾನಾ ಪರಿಗಳನ್ನು ಕಾಣುತ್ತೇವೆ.

ಕಾರಂತರ ಸ್ನೇಹವಲಯದಲ್ಲಿ ಬಡವರು, ಚಿಕ್ಕವರು, ದಡ್ಡರು ಎಂಬ ಭೇದಭಾವ ಎಳ್ಳಷ್ಟೂ ಕಂಡುಬಾರದು. ಎಲ್ಲರೊಂದಿಗೆ ಸರಸ ಸಂಭಾಷಣೆ ಅವರವರ ಮಟ್ಟದಲ್ಲಿ. ಅನೇಕ ಕವಿಗಳು, ಪ್ರೊಫೆಸರರು, ಬುದ್ಧಿವಾನರು, ತಮಗಾಗಿಯೇ ಎಂಬಂತೆ ಸಂಭಾಷಿಸುತ್ತಾರೆ. ಕಾರಂತರು ಆ ವರ್ಗಕ್ಕೆ ಸೇರಿದವರೇ ಅಲ್ಲ. ಯಾರೇ ಇರಲಿ ಸಮಭಾವದ ಸಹಾನುಭೂತಿಯಿಂದ ಕಾಣುತ್ತಿದ್ದರು. ಅವರ ಸ್ನೇಹೀ ಪರಿವಾರದಲ್ಲಿ ಉತ್ತರ ಕರ್ನಾಟಕ, ಮುಂಬಯಿ ಮುಂತಾದ ಹೊರನಾಡಿನವರು ಎದ್ದು ಕಾಣುವಂತಿದ್ದಾರೆ.

ಅವರ ಮಾನವೀಯ ಸದ್ಭಾವವು ವೈದ್ಯಶಾಸ್ತ್ರವನ್ನು ಅರಿತುಕೊಳ್ಳುವುದಕ್ಕೆ ಪ್ರೇರಣೆ ಕೊಟ್ಟದ್ದಿದೆ. ಇದು ಕೂಡ ಹರೆಯದ ಕಾಲದಿಂದಲೇ ಬಂದದ್ದು. ರೋಗಿಗಳಿಗೆ ನೆರವಾಗಬೇಕು ಎಂಬ ಸಹಜಾಪೇಕ್ಷೆ ಅವರದು. ಎಪ್ಪತ್ತು ವರ್ಷಗಳ ಹಿಂದೆ ಹಾವು ಕಡಿತ ಸಾಮಾನ್ಯವಾಗಿ ಕಂಡುಬರುತ್ತಿತ್ತು. ಆ ದಿನಗಳಲ್ಲಿ ಅವರ ಸಂಬಂಧಿಕ ಹೆಣ್ಣುಮಗಳೊಬ್ಬಳು ಸರ್ಪದರ್ಶನದಿಂದ ವಿಲಿ ವಿಲಿ ಒದ್ದಾಡಿ ಪ್ರಾಣಬಿಟ್ಟಿದ್ದನ್ನು ಕಣ್ಣಾರೆ ಕಂಡಿದ್ದರು. ಸರಿಯಾದ ಸಮಯಕ್ಕೆ ಮತ್ತು ಸೂಕ್ತವಾದ ಉಪಚಾರ ಒದಗಿದ್ದರೆ ಬದುಕುತ್ತಿದ್ದಳು, ಎನಿಸಿತು. ತಾವು 'ಸ್ಕೌಟ್' ಆಗಿದ್ದಾಗ ತಿ-ರ್ಯಕ್ ಎಂಬ ಔಷಧಿ ಇಟ್ಟುಕೊಂಡು, ಹಾವು ಕಡಿತಕ್ಕೆ ನೆರವಾಗುವುದಾಗಿ ಹೇಳಿ, ಹಲವು ಸಂದರ್ಭಗಳಲ್ಲಿ ಉಪಚಾರವನ್ನೂ ಮಾಡಿದ್ದರಂತೆ. ಕಾರಣಾಂತರಗಳಿಂದ ಆ ವಿಷವೈದ್ಯಕೀಯವನ್ನು ಬಿಡಬೇಕಾಯಿತು. ಕಾರಂತರು ತಮ್ಮ ಗುರುತಿನ ಯಾರಿಗಾದರೂ ಜಡ್ಡು ಬಂದರೆ, ಅವರ ಶುಶ್ರೂಷೆ, ನಿದಾನಗಳಿಗಾಗಿ ಪರಿಚಿತ ಡಾಕ್ಟರರ ಕಡೆಗೆ ವಿಶೇಷ ಶಿಫಾರಸು ಮಾಡಿ ಕಳಿಸಿದ ಅವೆಷ್ಟೋ ಉದಾಹರಣೆಗಳಿವೆ. ಆರ್ಥಿಕವಾಗಿ ನೆರವಾದ ಪ್ರಸಂಗಗಳೂ ಅನೇಕಾನೇಕ ಇವೆ.

ಈಚೆಗೆ ಮುಂಬಯಿಯ ಒಬ್ಬರು ಅವರ ಕಾದಂಬರಿಯೊಂದನ್ನು ಮರಾಠಿಗೆ ಅನುವಾದಿಸಿದರು. ಪ್ರಕಾಶಕರು, (ಮೆಹತಾ ಪ್ರಕಾಶನ) ತಾವು ಅನುವಾದಕರಿಗೇ ಒಟ್ಟು ಹಣ ಕೊಡ್ತೇವೆ. ಬೇಕಿದ್ದರೆ ಅವರು ಮೂಲ ಲೇಖಕರೊಂದಿಗೆ ಕರಾರು ಮಾಡಿಕೊಂಡು ಹಂಚಿಕೊಳ್ಳಲಿ ಎಂದರು. ಆ ಅನುವಾದಕರು ತನಗೆ ಬಂದ ಗೌರವ ಹಣದಲ್ಲಿ ಅರ್ಧ ಹಣ ಕೊಡುವುದಾಗಿಯೂ, ಕಾರಂತರು ಹೇಗೆ ಪ್ರತಿಕ್ರಿಯಿಸುತ್ತಾರೆಂಬುದು ತಿಳಿಯದ್ದರಿಂದ ನಾನು ಮಧ್ಯಸ್ಥಿಕೆ ವಹಿಸಬೇಕೆಂದೂ ನನಗೆ ಪತ್ರ ಬರೆದರು. ಅದನ್ನು ಕಾರಂತರಿಗೆ ಮುಖತಃ ತಿಳಿಸಿದಾಗ "ನಾನು ಹೇಗೂ ಬರೆದಾಯಿತಲ್ಲ; ಎಲ್ಲ ಹಣ ಅವರೇ ತೆಗೆದುಕೊಳ್ಳಲಿ. ಪರಿಶ್ರಮ ಪಟ್ಟವರು ಅವರೇ ತಾನೇ" ಎಂದರು. ವಿಷಯ ಸಣ್ಣದು; ಆದರೆ ಕಾರಂತರ ಸ್ವಭಾವ ನಿದರ್ಶನವೆಂದು ಕಾಣಿಸಿದ್ದೇನೆ.

ಮಹತ್ವದ್ದೆಂದರೆ, ಅವರು ಯಾರಿಗೇ ಸಹಾಯ ಮಾಡಲಿ, ಅದರ ಸದ್ದೇ ಇರುವುದಿಲ್ಲ. ಇಂಥ ಎಷ್ಟೋ ಅಂಶಗಳು ಹೊರಬಂದೇ ಇಲ್ಲ. ಈ ಸ್ವಭಾವದವರು ಇನ್ನೂ ಹಲವರಿರುವರೆಂಬುದನ್ನೂ ನಾನು ಬಲ್ಲೆ.

ಆದರೆ ಇದಕ್ಕೆ ಪ್ರತಿಯಾಗಿ ಮತ್ತು ಜೊತೆಗೇ ತಾವು ಇನ್ನೊಬ್ಬರಿಂದ ಪಡೆದ, ಪಡೆದಿರಬಹುದಾದ ಉಪಕಾರವನ್ನು ಒಂದಷ್ಟು ಹೆಚ್ಚೇ ಮನಸ್ಸಿನಲ್ಲಿ ಹಿಡಿಯುತ್ತಿದ್ದದ್ದು ಕಾರಂತರ ವಿಶಿಷ್ಟತೆಯಾಗಿತ್ತು. ಏನೋ ಒಂದು ಸಹಾಯ; ಅದಕ್ಕೆ ಸಮನಾಗಿ sincere thanks ಹೇಳುವ ಪದ್ಧತಿಯದಲ್ಲ, ಅದು. ಅವರು ಋಣಭಾರವನ್ನು ಶಿರಸಾವಹಿಸುತ್ತಿದ್ದ ರೀತಿ ಬೇರೆಯೇ ಇದೆ. ಮಾತಾಪಿತೃ ಋಣ, ಗುರುಋಣ ಮತ್ತು ಸಮಾಜದ ಋಣ ಇವು ಮೂರನ್ನು ಎಷ್ಟು ತೀರಿಸಿದರೂ ಮುಗಿಯದು ಎಂದು ಉಪನಿಷದ್ವಾಕ್ಯವೇ ಇದೆ. ಮೊದಲಿನ ಎರಡನ್ನು ಎಂಥ ಸಾಮಾನ್ಯರೂ ತೀರಿಸಲು ಯತ್ನಿಸುತ್ತಾರೆ. ಸಮಾಜದ ಋಣವನ್ನು ತೀರಿಸಲು ಮಾತ್ರ ನಾವು ಪ್ರಜ್ಞಾಪೂರ್ವಕವಾಗಿ ಯತ್ನಿಸಬೇಕಾಗುತ್ತದೆ. ಇತ್ತ ಕಾರಂತರು ಸಮಾಜದ

ಮೇಲೆ ಅಖಂಡ ಉಪಕಾರ ಹೊರಿಸಿದ್ದಾಗ ಋಣ ತೀರಿಸುವ ಪ್ರಶ್ನೆಯೇ ಇಲ್ಲವೆಂದು ನಮಗನಿಸಬಹುದು. ಊಂಹೂ, ಆ ಋಣ ಸಲ್ಲಿಕೆಯ ವಿಚಾರ ಕಾರಂತರಲ್ಲಿ ಓತಪ್ರೋತವಾಗಿದ್ದಿತು.

ಅವರು ಜ್ಞಾನಪೀಠ ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ಆಶಯ ಭಾಷಣ ಮಾಡಿದ್ದಾಗ ಅದನ್ನು ಈ ರೀತಿ ಸ್ಪಷ್ಟಪಡಿಸಿದ್ದಾರೆ:

"ನಮ್ಮ ಸುತ್ತಲಿನ ಜೀವಿಗಳ ಬದುಕಿಗೆ ಸ್ಪಂದಿಸುತ್ತ ನಮ್ಮ ಬದುಕು ಸಾಗಬೇಕು. ಹಾಗೆ ಸ್ಪಂದಿಸದಿದ್ದರೆ ನಾವು ಬದುಕಿದಂತೆಯೇ ಅಲ್ಲ. ನನ್ನ ಜೀವನದ ಆಗುಹೋಗುಗಳನ್ನು ನೆನೆದರೆ ಸಾಕು, ಉಪಕಾರ ಭಾವ ನನ್ನನ್ನು ಆವರಿಸಿಬಿಡುತ್ತದೆ. ಹಿಂದಿನವರು ತಮ್ಮ ವಿಚಾರಗಳನ್ನು, ವಿದ್ವತ್ತನ್ನು, ಸೃಜನಶೀಲತೆಯ ಫಲವನ್ನು, ಮುಖ್ಯತಃ ಅನುಭವಗಳನ್ನು ನನಗೆ ಕೊಡದೇ ಹೋಗಿದ್ದರೆ, ನಾನು ಎಷ್ಟೊಂದು ಅಂಶಗಳಿಗೆ ಎರವಾಗುತ್ತಿದ್ದೆ! ಆ ಋಣವನ್ನು ನನ್ನ ಬರಹದಿಂದ, ಪ್ರಾಮಾಣಿಕ ನಡವಳಿಕೆಯಿಂದ ಮತ್ತು ಜನಜೀವನದಲ್ಲಿ ಪಾಲ್ಗೊಳ್ಳುವಿಕೆಯಿಂದ ತೀರಿಸಲು ಪ್ರಯತ್ನಿಸಬೇಕು-ಎಂದು ನನಗೆ ಸದಾಕಾಲ ಅನಿಸುತ್ತದೆ."

ಇದೇ ನಿಲುವನ್ನು ಅವರು ತಮ್ಮ ಹಲವಾರು ಬಿಡಿಬರಹಗಳಲ್ಲಿ, ಆತ್ಮಚರಿತೆಯ ಪುಸ್ತಕಗಳಲ್ಲಿ ವ್ಯಕ್ತಪಡಿಸಿದ್ದಾರೆ. 'ಪರರ ಋಣದಿಂದ ನಾನು ಬೆಳೆದೆ.' 'ಮಿತ್ರರ ಪ್ರಚಾರದಿಂದ ನಾನು ದೊಡ್ಡವನಾದೆ'. 'ಸ್ವಪ್ರಯತ್ನ ಎಷ್ಟೇ ಇದ್ದರೂ ಬಾಹ್ಯ ಜಗತ್ತು ಒಲಿದುದರಿಂದ ನನ್ನ ಬದುಕು ಸಾರ್ಥಕವಾಯಿತು'. 'ಪೂರ್ವಿಕರು ನಮ್ಮ ಬದುಕನ್ನು ಬೆಳಗಿದರು; ನಾವು ನಮ್ಮ ಸುತ್ತಣ ಜನರ ಬದುಕನ್ನು ಬೆಳಗುವ ಪ್ರಯತ್ನ ಮಾಡಬೇಕು' ಎಂಬಂತಹ ಅನಿಸಿಕೆಗಳು ಅನೇಕ ಬಾರಿ ಕಾಣಿಸಿಕೊಂಡಿವೆ. ಬದುಕನ್ನೂ, ಬಾಳಿದವರನ್ನೂ ಅತಿಯಾಗಿ ಹಚ್ಚಿಕೊಳ್ಳುವುದರಿಂದ ಇಂಥ ಭಾವನೆ ಮೂಡುವುದು ಸಹಜವೇನೊ.

ಕಾರಂತರ ಹಿರಿಯ ಮಗ ಹರ್ಷ ತರುಣ ವಯದಲ್ಲಿ ತೀರಿಕೊಂಡ. ಹೃದಯಕ್ಕೆ ಒಂದು ಬಗೆಯ ಮಾಂಸಲ ಮುದ್ದೆ ಅಂಟಿಕೊಂಡು ಹೃದಯದ ಬಡಿತಕ್ಕೆ ಅಡ್ಡಿ ಮಾಡುತ್ತಿತ್ತು. ಮುಂಬಯಿಯ ಸುಪ್ರಸಿದ್ಧ ಡಾಕ್ಟರ್ ಬಾಳಿಗಾ ಹಾಗೂ ಇತರ ಅಸಿಸ್ಟೆಂಟ್ ಡಾಕ್ಟರರು, ದಾದಿಯರು ಎಲ್ಲರೂ ಹರ್ಷನ ಜೀವವನ್ನು ಉಳಿಸುವುದಕ್ಕೆ ಪಣವನ್ನೇ ತೊಟ್ಟಂತಿತ್ತು. ಆಪರೇಶನ್ ಮಾಡಿ ೧೪ ಪೌಂಡು ತೂಕದ ಆ ಮುದ್ದೆಯನ್ನು ಹೊರತೆಗೆದರಾದರೂ ಹರ್ಷ ಆಮೇಲೆ ಎರಡು ದಿನ ಮಾತ್ರ ಬದುಕಿ ಇದ್ದ.

ಇದು ೪೫ ವರ್ಷಗಳ ಹಿಂದಿನ ಸಂಗತಿ. ಅವರನ್ನು ಮಾತನಾಡಿಸಲೆಂದು ಕೆಲವು ಹಿರಿಯ ಕನ್ನಡಿಗರೊಡನೆ, ಚಿಕ್ಕವನಾದ ನಾನೂ ಹೋಗಿದ್ದೆ. ಹರ್ಷನ ಜೀವವನ್ನುಳಿಸುವುದಕ್ಕೆ ನರ್ಸಿಂಗ್ ಹೋಮಿನ ಸಿಬ್ಬಂದಿಯವರು ಏನೇನು ಮಾಡಿದರೆಂಬುದರ ಪ್ರತಿಯೊಂದು ಸಣ್ಣ ವಿವರವನ್ನೂ ಹೇಳಿದರು. ಅಲ್ಲಿದ್ದ ದಾದಿಯರು ಅವನ ಶವಕ್ಕೆ ಸ್ನಾನ ಮಾಡಿಸಿ, ಶುಭ್ರವಾದ ಬಟ್ಟೆ ಹಾಕಿ, ದೀಪ ಇರಿಸಿ, ಅವನ ಆತ್ಮಕ್ಕೆ ಶಾಂತಿ ಸಿಗಲೆಂದು ಪ್ರಾರ್ಥಿಸಿದ್ದನ್ನು ಕಾರಂತರು ವಿವರಿಸಿದಾಗಲಂತೂ ನಮಗೆ ಕಣ್ಣೀರು ತಡೆಯದಂತಾಯಿತು. ಅವರಿಗೆ ತಮ್ಮ ಹಿರಿಯ ಮಗ

ಕೈಬಿಟ್ಟನೆಂಬ ದುಃಖಕ್ಕೆ ಮಿಗಿಲಾಗಿ, ಡಾಕ್ಟರ್, ದಾದಿಯರು ಮಾಡಿದ್ದ ನೆರವೇ ಅವರ ಹೃದಯಕ್ಕೆ ಹೆಚ್ಚು ತಾಗಿತ್ತೆಂದು ಕಂಡಿತು. ಇದಲ್ಲವೆ ಹೃದಯವಂತಿಕೆ!

ಒಂದೊಮ್ಮೆ ನನಗೆ ಅನಿಸುತ್ತಿತ್ತು; ಕಾರಂತರು ಸ್ವತಃ ಸಮಾಜಕ್ಕೇನೆ ಬೇಕಾದಷ್ಟು ನೀಡಿದ್ದಾರೆ. ಇತರರು ಅವರಿಗೆ ನೆರವಾದರೆ ಅದೇನೂ ದೊಡ್ಡದಲ್ಲ. ಅವರು ಅತಿಯಾಗಿ ಋಣಭಾರ ಹಿಡಿಯುವ ಅಗತ್ಯ ಎಲ್ಲಿದೆ? ಎಂದು. ಆದರೆ ಅದು ಅವರ ಸ್ವಭಾವ ವಿಶೇಷವೆಂದೇ ಬಗೆಯತಕ್ಕುದು.

ಇಂಥದೇ ಋಣಭಾರವನ್ನು ಕಾರಂತರ ವಿಷಯವಾಗಿ ನಾವು ತಳೆಯಬೇಕಲ್ಲವೆ? ಸಾಮಾನ್ಯ ಕನ್ನಡ ಜನತೆ ಆ ಕೆಲಸ ಮಾಡಿದೆ ಯಥೇಚ್ಛವಾಗಿ. ಆದರೆ ನಮ್ಮ ಸರಕಾರ ಮಾತ್ರ ಅವರ ವಿಷಯದಲ್ಲಿ ನಿರ್ಲಕ್ಷ್ಯದಿಂದ ನಡೆದುಕೊಂಡಿದೆ. ಅನ್ಯಾಯ ಮಾಡಿದೆ; ಮುಪ್ಪಿನ ಹಣ್ಣು ವಯಸ್ಸಿನಲ್ಲಿ ಅವರ ಮನಸ್ಸನ್ನು ಗಾಸಿಗೊಳಿಸಿದೆ. ಅವರ `ಓದುವ ಆಟ'ದ ಪಠ್ಯಗಳನ್ನು ಬಹಿಷ್ಕರಿಸಿದ್ದಕ್ಕಿಂತ ಅವರ ಮೇಲೆ ಕೆಲವರು ಹೊರಿಸಿದ ಜಾತೀಯತೆಯ ಕ್ಷುದ್ರ ಆರೋಪವನ್ನು ಸರಕಾರವು ಮಾನ್ಯ ಮಾಡಿದ್ದು ಕಾರಂತರಿಗೆ ಅತೀವ ನೋವನ್ನುಂಟು ಮಾಡಿದ್ದಿತು. 'ಕರ್ನಾಟಕ ಜ್ಯೋತಿ' ಎಂಬ ಸರಕಾರೀ ಪುರಸ್ಕಾರವನ್ನು ತಾವು ತಿರಸ್ಕರಿಸಿದ್ದಕ್ಕೆ ಇದು ಕಾರಣ ಎಂದು ನನಗೆ, ಅದರಂತೆ ಇತರ ಕೆಲವರೆದುರಿಗೆ ನೊಂದ ಮನದಿಂದ ಹೇಳಿದ್ದಾರೆ.

ಕಾರಂತರು ಕನ್ನಡಿಗರ ಏಳ್ಗೆಗಾಗಿ ಅಖಂಡ ೭೫ ವರ್ಷಗಳ ಕಾಲ ಪರಿಶ್ರಮಿಸಿದ ಜಗದ್ವಂದ್ಯ ವ್ಯಕ್ತಿ. ಕಾರಂತರಂತಹ ಸಾಕ್ಷೀಪುರುಷ ಸಾಹಿತಿಗಳು ಸಮಸ್ತ ಜನತೆಯ ಪುಣ್ಯ ಸಂಗ್ರಹದ ಪರಿಪಾಕವೆಂಬಂತೆ ಶತಮಾನಕ್ಕೆ ಒಬ್ಬಿಬ್ಬರು ಮಾತ್ರ ಹುಟ್ಟಿ ಬರುತ್ತಾರೆ. ನಮ್ಮ ಸರಕಾರಕ್ಕೆ ಇದು ಹೊಳೆಯದೇ ಹೋಯಿತಲ್ಲಾ ಎಂದು, ಅವರಿನ್ನಿಲ್ಲವಾದದ್ದರ ಕೊರಗಿನ ಜೊತೆಗೇ ಬೇಸರಿಸಬೇಕಾಗಿದೆ.



# ೧೪ ಕಾರಂತರ ಪತ್ರವೈಖರಿ

ಪತ್ರ! ಮತ್ತು ಪತ್ರ ಸಾಹಿತ್ಯ. ಪತ್ರ ಕೇವಲ ಇಬ್ಬರ ನಡುವಿನ ಖಾಸಾ ಮಾತುಕತೆಯಿದ್ದಂತೆ. ನಮಗೆ ಅನಿಸಿದುದನ್ನು ನಮ್ಮ ಮನಸ್ಸಿನಲ್ಲಿದ್ದುದನ್ನು ಯಾವ ಸಂಕೋಚ ಮತ್ತು ಅಳುಕು ಇಲ್ಲದೆ ದಾಖಲಿಸುವ ಸಾಧನವೆಂದರೆ ಪತ್ರ. ಪತ್ರ ಬರೆಯುವ ವ್ಯಕ್ತಿ ಜೀವನದಲ್ಲಿ ಏನಾದರೂ ಸಾಧಿಸಿದವರಿದ್ದರೆ ಅವರ ಪತ್ರಗಳಲ್ಲಿ ಸ್ವಾಭಾವಿಕವಾಗಿಯೇ ವಿಚಾರಗಳಿರುತ್ತವೆ. ಮುಂದೊಮ್ಮೆ ಆ ಪತ್ರಗಳು ಪ್ರಕಟವಾದರೆ ಅದು ಪತ್ರಸಾಹಿತ್ಯ ಎನಿಸಿಕೊಳ್ಳುತ್ತದೆ.

ಕನ್ನಡದಲ್ಲಿ ಪತ್ರಸಾಹಿತ್ಯ ತೀರಾ ಅಂದರೆ ತೀರಾ ಕಡಿಮೆ. ಅದರ ಬಳುವಳಿ 'ಈರಾರು ಪತ್ರಗಳು' ಎಂಬ ಪತ್ರಗುಚ್ಛದಿಂದ ೧೮೪೩ರಷ್ಟು ಹಿಂದೆ ಆರಂಭವಾಗಿದ್ದರೂ ಇಪ್ಪತ್ತನೆಯ ಶತಮಾನದಲ್ಲಿ ಹೊರಬಂದ ಸಂಕಲನಗಳು ಹತ್ತರೊಳಗೇ ಇವೆ. ಗೋವಿಂದ ಪೈ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎ. ಎನ್. ಮೂರ್ತಿರಾವ್, ಈಚೆಗೆ ಅನುಪಮಾ ನಿರಂಜನ - ಈ ಕೆಲವೇ ಜನ ಸಾಹಿತ್ಯಿಕರ ಪತ್ರಗಳು ಪ್ರಕಟವಾಗಿವೆ. ಪತ್ರಸಾಹಿತ್ಯ ಸಾಹಿತಿಗಳದ್ದೇ ಆಗಿರಬೇಕೆಂದಿಲ್ಲ. ವಿವೇಕಾನಂದರು ಅಮೇರಿಕೆಯಲ್ಲಿದ್ದಾಗ ಕನ್ನಡಿಗರೊಬ್ಬರಿಗೆ ಆತ್ಮೀಯವಾಗಿ ಬರೆದ ಪತ್ರಗುಚ್ಛ 'ನನ್ನ ಅಳಸಿಂಗ, ನಿನ್ನ ವಿವೇಕಾನಂದ' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ.

ಕನ್ನಡದಲ್ಲಿಯ ಈ ಕೊರತೆಯನ್ನು ತುಂಬುವ ಹಟದಿಂದ ಎಂಬಂತೆ ಶಿವರಾಮ ಕಾರಂತರ 'ಪತ್ರವ್ಯವಹಾರ ಮತ್ತು ನಾನು' ಪ್ರಕಟವಾಗಿದೆ (೧೯೯೮). ಅದರಲ್ಲಿರುವ ಪತ್ರಗಳು ೫೦-೬೦ ಅಲ್ಲ; ೧೫೦೦! ಲೇಖಕನೊಬ್ಬನ ಇಷ್ಟೊಂದು ಪತ್ರಗಳಿರುವ ಸಂಗ್ರಹ ಪಾಶ್ಚಾತ್ಯ ದೇಶಗಳಲ್ಲಿಯೂ ಇಲ್ಲವೇನೊ. (ಪ್ರಾಯಶಃ ಡಿ.ಎಚ್. ಲಾರೆನ್ಸ್‌ನನ್ನುಳಿದು). ಹಾಗಿದ್ದೂ ಕಾರಂತರು ಬರೆದ ಎಲ್ಲ ಪತ್ರಗಳೂ ಇದರಲ್ಲಿಲ್ಲ. ಸಂಪಾದನ ಸಹಾಯಕರಾದ ಮಾಲಿನಿ ಮಲ್ಯರ ಪ್ರಕಾರ ಇದರ ಹತ್ತುಪಟ್ಟು ಪತ್ರಗಳನ್ನು ಬರೆದಿದ್ದಾರಂತೆ. ತಮ್ಮ ಪ್ರಸ್ತಾವನೆಯಲ್ಲಿ ಕಾರಂತರು ಬೆಳಗಿನ ಜಾವವೇ ತಾವು ಪತ್ರ ಬರೆಯತೊಡಗಿ, ಇನ್ನೂ ಉಳಿದುವಾದರೆ ಅದಕ್ಕೆ ಅಪರಾಹ್ನ ಉತ್ತರಿಸುವುದಾಗಿ ಹೇಳಿದ್ದಾರೆ. ಎಂದರೆ ಸಾಹಿತ್ಯ ಲೇಖನ ಕಾರ್ಯಕ್ಕೆ ಕೊಟ್ಟಷ್ಟೇ ಪತ್ರಲೇಖನಕ್ಕೂ ಗಮನ ಕೊಡುತ್ತಿದ್ದರು. ಅವರು ಇಷ್ಟರಮಟ್ಟಿಗೆ ಪತ್ರವ್ಯವಹಾರದಲ್ಲಿ

ಅಪ್ರತಿಮರಾಗಲಿಕ್ಕೆ ಅವರ ತಕ್ಷಣದ ಪ್ರತಿಸ್ಪಂದನದ ಮನೋವೃತ್ತಿಯೇ ಕಾರಣ: ತಮಗೆ ಅನಿಸಿದ್ದನ್ನು ಥಟ್ಟನೆ ಹೇಳುವುದು, ತೋಚಿದ್ದನ್ನು ಬರೆದುಬಿಡುವುದು. ಈ ಪತ್ರ ಪ್ರಕಟನೆಯ ಯೋಜನೆಯಲ್ಲಿ ನನ್ನದೂ ತುಸು ಪಾಲು ಇದೆ. ಪತ್ರಗಳನ್ನು ದೊರಕಿಸಿ, ಪ್ರಕಟಿಸಬೇಕೆಂಬ ಮೂಲ ಸೂಚನೆ ನನ್ನದು.' ಅದನ್ನು ಕಾರಂತರು ತಮ್ಮ ಪ್ರಸ್ತಾವನೆಯಲ್ಲಿ ಕಾಣಿಸಿದ್ದಾರೆ.

ಈ ಪತ್ರಗಳ ವೈಶಿಷ್ಟ್ಯವೆಂದರೆ ಎಲ್ಲ ಎಲ್ಲವನ್ನೂ ಕಾರಂತರು ಸ್ವಹಸ್ತದಿಂದಲೇ ಬರೆದವುಗಳು. ಅವರು ಪತ್ರದಲ್ಲಿ ಆಶೀರ್ವಾದ, ನಮಸ್ಕಾರ, ಕ್ಷೇಮ - ಮುಂತಾದ ಔಪಚಾರಿಕ ಶಬ್ದಗಳನ್ನು, ಎಂದೂ ಬಳಸುತ್ತಿದ್ದಿಲ್ಲ. ಆ ವ್ಯಕ್ತಿಯ ಹೆಸರನ್ನಷ್ಟೆ ಬರೆದು 'ಪ್ರಿಯರೆ' ಎಂದು ಆರಂಭಿಸಿ, 'ಇತಿ' ಎಂಬಲ್ಲಿಗೆ ಆ ಪತ್ರ ಮುಗಿಯುತ್ತಿತ್ತು.

ಒಮ್ಮೆ ಶಿಗ್ಲಿ ಎಂಬ ಊರಿನಿಂದ (ಧಾರವಾಡ ಜಿಲ್ಲೆ) ಒಂದು ಪತ್ರ ಬಂತು. ಅವರೊಬ್ಬ ಕಿರಾಣಿ ವ್ಯಾಪಾರಸ್ಥರು. ಪತ್ರದ ಮೇಲ್ಗಡೆ ೨೪-೩-೧೯೯೭ ಎಂಬ ತಾರೀಖು. ಹಾಗೂ '||ಶ್ರೀ ಬನಶಂಕರಿ ಪ್ರಸನ್ನ||' ಎಂಬ ಕುಲದೇವತೆಯ ಹೆಸರು. ಕೆಳಗೆ ಸಹಿ ಅಥವಾ ಹೆಸರು ಇರಬೇಕಷ್ಟೆ; ಮರೆತಿದ್ದರು. ಕಾರಂತರು ಯಾರಿಗೆಂದು ಉತ್ತರಿಸಬೇಕು? ಯಾವ ಪತ್ರ ಬಂದರೂ ಉತ್ತರಿಸಲೇಬೇಕೆಂಬ ಸ್ವಂತದ ಕಡ್ಡಾಯ. ಸರಿ; ಉತ್ತರದಲ್ಲಿ ಸುರುವಿಗೆ ಬರೆದರು:

'ಶ್ರೀ ಬನಶಂಕರಿ ಪ್ರಸನ್ನ ಇವರಿಗೆ.'! ಆ ವ್ಯಕ್ತಿ ತಾನು ಕುವೆಂಪು, ಕಾರಂತರ ಕಾದಂಬರಿಗಳನ್ನು ಓದಿದ್ದು ಆ ಮೂಲಕ ಕನ್ನಡದ ಸೇವೆಯನ್ನು ಯಥಾಶಕ್ತಿ ಮಾಡುತ್ತಿರುವುದಾಗಿ ಬರೆದಿದ್ದ. ಕಾರಂತರು ಅದಕ್ಕೆ ವಿವರವಾಗಿಯೆ ಉತ್ತರಿಸಿದ್ದಾರೆ.

ಅದು ಅವರ ಜೀವಿತದ ಕೊನೆಯ ವರ್ಷ. ಅಕ್ಟೋಬರ್ ೨೫ರಂದು ತೀರಿಹೋದರಲ್ಲವೆ. ಅವರು ಬರೆದ ಕಡೆಯ ಪತ್ರವು, ಸಾಲಿಗ್ರಾಮದ ಕಾರಂತರ ಮನೆಯಲ್ಲಿ ಸಣ್ಣವಳಿದ್ದಾಗ ಬೆಳೆದು ಸದ್ಯ ದಾಂಡೇಲಿಯಲ್ಲಿದ್ದ ಕು. ಸ್ವಪ್ನಾ ಎಂಬವಳಿಗೆ ಬರೆದದ್ದು. ಅವಳು ಕಳಿಸಿದ ದೀಪಾವಳಿ ಶುಭಾಶಯಗಳಿಗೆ ಉತ್ತರವಾಗಿ ಹೀಗೆ ಪ್ರತಿಕ್ರಿಯಿಸಿದ್ದಾರೆ:

'ನಿನ್ನ ದೀಪಾವಳಿ ಶುಭಾಶಯ ಬಂದು ತಲುಪಿದೆ. ಇಂಥ ಇತರರ ಶುಭಾಶಯಗಳೂ ಬಂದಿವೆ. ಆದರೆ ಈ ದಿನಗಳಲ್ಲಿ ಕರೆಂಟ್ ಆಗಾಗ ಹೋಗುವುದರಿಂದ ದೀಪಾವಳಿ ಶುಭಾಶಯಗಳ ಬೆಳಕು ಸಾಲದೇ ಸಾಲದು. ಬೇರೆ ಉಪಾಯ ಗೊತ್ತಿದ್ದರೆ ತಿಳಿಸು'.

ಈ ಬಗೆಯ ಲಘು ಹಾಸ್ಯ ಅನೇಕಾನೇಕ ಪತ್ರಗಳಲ್ಲಿ ಅತಿ ಸಹಜವೆಂಬಂತೆ ವ್ಯಕ್ತವಾಗಿದೆ. ಬೆಳಗಾಂವಿಯಲ್ಲಿ ಆಪ್ತರೊಬ್ಬರ ಆತಿಥ್ಯ ಸವಿದು ಸಾಲಿಗ್ರಾಮಕ್ಕೆ ಹಿಂತಿರುಗಿದ ಮೇಲೆ "ಅಲ್ಲಿಗೆ ನಾನು ಸಣ್ಣ ಹೊಟ್ಟೆ ತಂದುದರಿಂದ ಹೆಚ್ಚು ತಿನ್ನಲು ಆಗಲಿಲ್ಲ" ಎಂಬುದಾಗಿ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ. ಲೀಲಾ ಕಾರಂತರ ತಂಗಿ ಗೀತಾ ಕುಲಕರ್ಣಿಯವರ ಮಗಳು ರಂಜನಾ ಗಂಡ-ಮಕ್ಕಳೊಂದಿಗೆ ಬೆಳಗಾಂವಿಯಲ್ಲಿ ಇದ್ದಾರೆ. ೧೯೯೩ರ ಹೊಸ ವರ್ಷದ ಶುಭಾಶಯವನ್ನು ಅವರು ಕಳಿಸಿದಾಗ ಕಾರಂತರ ಪ್ರತಿಕ್ರಿಯೆ ಹೀಗಿದ್ದಿತು : "ನೀವು ಮೂರು

ಜನ ಸೇರಿ ಹೊಸ ವರ್ಷವನ್ನು ಬೆಳಗಾಂನಿಂದ ಸಾಲಿಗ್ರಾಮಕ್ಕೆ ತಳ್ಳಿದ್ದೀರಿ. ಇಲ್ಲದೆ ಹೋದರೆ ೧೯೮೨ನೇ ವರ್ಷ ಮುಗಿಯುತ್ತಿರಲಿಲ್ಲ. ಥೇಂಕ್ಸ್.'

ತಮ್ಮ ಈ ಸೋದರ ಸೊಸೆಯ ಕುಟುಂಬದ ಬಗ್ಗೆ ಕಾರಂತರದು ವಿಶೇಷ ವಾತ್ಸಲ್ಯ. ಅವರ ಮಗಳು ರೂಪಾ ಎಸ್.ಎಸ್. ಎಲ್.ಸಿ. ಪರೀಕ್ಷೆ ಪಾಸಾದಾಗ ಬರೆದ ಪತ್ರವಿದು:

K. S. KARANTH

"Suhasa"
P. O. SALIGRAMA
Udipi Taluk (S. K.)
Pin-576225.

२४. 5. 76



est rupa
your kagada is come.
Hearing the news that you have
passed S² 50+100 went unconcious
out of Joy. Immediately Amma
came rushing, bathed me in Strong
Coffee. Now am Com ly re-
ed. What do you say!
Cong- ulations. Tell
amma to give you 108 Kisses on
this score.

ಈ ಮೋಜಿನ ಚಿತ್ರಲಿಪಿ ಅರ್ಥವಾಯಿತೆ? ಸಂಬೋಧನೆಯಲ್ಲಿಯೇ ಇದ್ದದ್ದು ಚಿಗರೆ - ಅರ್ಥಾತ್ 'ಡಿಯರ್'. $S^2$+50+100 ಎಂದರೆ ಎಸ್.ಎಸ್.ಎಲ್.ಸಿ.! ಈ ಹಿಂದೆ ವರ್ಷಗಣನೆಯಲ್ಲಿ ೫೦ಕ್ಕೆ 'L' ಎಂದೂ ೧೦೦ ಕ್ಕೆ C ಎಂದೂ ಹೇಳುವ ಕ್ರಮವಿತ್ತು. ಕಣ್ಣಿನ ಚಿತ್ರ ಇದೆಯಷ್ಟೆ. Eye = I ! ಮುಂದಿನ Completely ಶಬ್ದದ ಮಧ್ಯೆ ಹೆರಳು ಏಕೆ ಬಂದಿತು? ಹೆರಳಿಗೆ 'ಪ್ಲೇಟ್' ಎಂಬುದರಿಂದಾಗಿ. ಅನಂತರದ recovered ಇದರಲ್ಲಿ 'ಕವರ್' ಅರ್ಥಾತ್ ಮುಚ್ಚಳವಿದೆ. ಆಮೇಲಿನ Congratulations ಶಬ್ದದಲ್ಲಿಯ ratಗೆ ಬದಲಾಗಿ ಇಲಿಯ ಚಿತ್ರ! ಇದೂ ಒಂದು ಕಾರಂತರ ಮುಖ! ಮಕ್ಕಳೊಡನೆ ಮಕ್ಕಳಾಟಿಕೆಯಲ್ಲಿಯೇ ತೊಡಗಬಲ್ಲವರಾಗಿದ್ದರು - ಕಾರಂತರು.

ಇಡೀ ಪತ್ರಸಂಪದವನ್ನು ಓದಿದಾಗ ಕಾರಂತರ ಈ ಬಗೆಯ ಹಾಸ್ಯಪ್ರಿಯತೆ, ಪ್ರಾಮಾಣಿಕತೆ, ಮಾನವೀಯತೆ ಮತ್ತು ಕೃತಜ್ಞತಾಭಾವ - ಈ ನಿರ್ದಿಷ್ಟ ಸ್ವಭಾವ ವಿಶೇಷಗಳು ಪುಟಪುಟಕ್ಕೂ ಎದ್ದುಕಾಣುತ್ತವೆ. ಜೊತೆಗೆ ಸಿಟ್ಟು, ಹಟ, ವ್ಯಕ್ತಿದ್ವೇಷ - ಈ ಅವರ ಸ್ವಭಾವದ ಓರೆಕೋರೆಗಳೂ ಆಗಾಗ ಕಾಣಬರುತ್ತವೆ. ಅವರೇ ತಮ್ಮ ಪ್ರಸ್ತಾವನೆಯಲ್ಲಿ 'ಪ್ರಿಯ, ಅಪ್ರಿಯ ಸತ್ಯಗಳೆರಡನ್ನು ಸಾರುತ್ತಿರುವ ಈ ಸಂಗ್ರಹ ನನ್ನ ಮನೋವೃತ್ತಿಗೆ ಹಿಡಿದ ದರ್ಪಣ' ಎಂದು ಹೇಳಿದ್ದಾರೆ. ಹಾಗೆ ನೋಡಿದರೆ ಅವರ ಜೀವನಾಸಕ್ತಿಯ ಶಿಕ್ಷಣ, ಸಾಹಿತ್ಯ, ಕಲೆ, ಯಕ್ಷಗಾನ, ರಂಗಭೂಮಿ, ಪರಿಸರ ಕಾಳಜಿ ಇವೆಲ್ಲವುಗಳ ಮೇಲೆ ಬೆಳಕು ಚೆಲ್ಲುವ ಪತ್ರಗಳಿವೆ.

ಇನ್ನು ಅವರ ಕೃತಿಗಳ ಬಗ್ಗೆ ಯಾರಾದರೂ ಸಂದೇಹ ವ್ಯಕ್ತಪಡಿಸಿದರೆ ವಿವರಣೆ ನೀಡಿದ್ದಾರೆ. ಅವರ ಕೃತಿಯೊಂದನ್ನು ಜರೆದು ಬರೆಯುವ ಧೈರ್ಯವಿದ್ದವರು ಕಡಿಮೆ! ಹಾಗೇನಾದರೂ ಬರೆದದ್ದಾದರೆ ಚೆನ್ನಾಗಿ ಬೈಯ್ಯುತ್ತಾರೆ. ಇನ್ನು ಯಾರಾದರೂ ಅವರ ಕೃತಿಯನ್ನು ಮೆಚ್ಚಿ ಪತ್ರ ಬರೆದರೆ ಮನಃಪೂರ್ವಕವಾಗಿ ಕೃತಜ್ಞತೆ ಸಲ್ಲಿಸುತ್ತಾರೆ. ವೀರಪ್ಪ ಮೊಯಿಲಿಯವರು 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಬಗ್ಗೆ ದಿಲ್ಲಿಯಲ್ಲಿ (ಸಾಹಿತ್ಯ ಅಕಾಡೆಮಿಯ ಆಶ್ರಯದಲ್ಲಿ) ಭಾಷಣ ಮಾಡಿ ಅದರ ಪ್ರತಿಯನ್ನು ಕಾರಂತರಿಗೆ ಕಳಿಸಿಕೊಟ್ಟರು. ಅದಕ್ಕೆ ಕಾರಂತರು ಬರೆದ ಪತ್ರ ಇಂತಿದೆ:

ಸಾಲಿಗ್ರಾಮ, ದಿ. ೨೧-೬. ೧೯೯೭

ಶ್ರೀ ಮೊಯಿಲಿ ವೀರಪ್ಪ ಅವರಿಗೆ -

"ಪ್ರಿಯರೇ, ನೀವು ಕಳುಹಿಸಿದ ದಿಲ್ಲಿ ಸಾಹಿತ್ಯ ಅಕಾಡೆಮಿಯ ಭಾಷಣದ ನಕಲು ಓದಿ ನನಗೆ ಆಶ್ಚರ್ಯವಾಯಿತು. ನನ್ನ ಬಗ್ಗೆ ಸಾಕಷ್ಟು ಜನ ಹೊಗಳಿದ್ದಾರೆ. ತಾವು ಮೆಚ್ಚಿದ ಅನುರಕ್ತಿಯ ವಿಷಯಗಳಿಗಾಗಿ ಕೊಂಡಾಡಿದ್ದಾರೆ. ಈ ದೃಷ್ಟಿಯಿಂದ ಹಲವು ಶ್ರದ್ಧಾಳುಗಳನ್ನು ಕೆರಳಿಸಿದ ಮೂಕಜ್ಜಿಯ ಕತೆಯ ಬಗ್ಗೆ ನೀವು ಹರಿಯಿಸಿದ ನೋಟ ಈ ತನಕ ಯಾರೂ ಮಾಡದಿರುವ ಕೆಲಸ. ನಿಮ್ಮ appraisal ನನ್ನ ಕಲ್ಪನೆಗೆ ಸರಿಯಾದ ವಿಮರ್ಶೆ ಎನಿಸಿದೆ. ನಿಮ್ಮ ಅಷ್ಟೊಂದು ಆಳವಾದ ವಿವೇಚನೆಯನ್ನು ಕಂಡು ಸಂತೋಷವಾದಷ್ಟೇ ಆಶ್ಚರ್ಯವೂ ಆಯಿತು. ಯಾರೂ ಈ ತನಕ ಮೂಕಜ್ಜಿಗೆ ನ್ಯಾಯ ಸಲ್ಲಿಸಿದವರಿಲ್ಲ."

ಇನ್ನು ಜನಸಾಮಾನ್ಯರು ಕಾರಂತರಿಗೆ ಬರೆಯುತ್ತಿದ್ದ, ಅಸಂಖ್ಯ ಪತ್ರಗಳ ವಿಷಯಗಳೇನು? ಅವರ ಕಾದಂಬರಿಗಳಿಂದ ಹಿಡಿದು ವೈಯಕ್ತಿಕ ಸಮಸ್ಯೆಗಳು ದೇಶದ ಆಗುಹೋಗುಗಳು, ದೇವರು, ವಿಶ್ವದ ರಹಸ್ಯ - ಏನೇನೆಲ್ಲ. ಇವು ಕೆಲವು ಮಾದರಿಗಳು :

ಶೀಲವಂತಪ್ಪ ಮುಧೋಳ ಎನ್ನುವವರು ಪುನರ್ಜನ್ಮ, ಗ್ರಹಗತಿಗಳ ಬಗ್ಗೆ ವಿಚಾರಿಸಿದ್ದಾದರೆ ಬೆಳಗಾಂವಿಯ ಹಾಸ್ಯಲೇಖಕರಾದ ಅನಂತ ಕಲ್ಲೋಳರು ತ್ರಿಭಾಷಾಸೂತ್ರದ ಬಗ್ಗೆ ಕಾರಂತರ ನಿಲುವು ಏನೆಂಬುದರ ಕುರಿತು ವಿಚಾರಿಸಿದ್ದಾರೆ. ಹಗರಿಬೊಮ್ಮನಹಳ್ಳಿಯ ಹುರಕಡ್ಲಿ ಶಿವಕುಮಾರರು ದೇಶದ ಬಡತನದ ನಿವಾರಣೆಯ ಬಗ್ಗೆ ಪರಿಹಾರ ಕೇಳಿದಾಗ ಕಾರಂತರು ಪ್ರತಿಕ್ರಿಯಿಸಿದ್ದು ಹೀಗೆ :

"ಎಪ್ಪತ್ತು ಕೋಟಿ ಜನರ ಉದ್ಧಾರದ ದಾರಿಯನ್ನು ಹೇಳಲು ನಾನು ಅಶಕ್ತ. ಇಲ್ಲಿನ ಜನಸಂಖ್ಯೆ ತಗ್ಗದೆ ಹೋದರೆ ಅನ್ನದ ಸಮಸ್ಯೆ ಬಗೆಹರಿಯದು."

ಶಿವಮೊಗ್ಗದ ಡಾ. ಚಂದ್ರಶೇಖರಯ್ಯನವರು ದಿ. ೨೧-೧-೧೯೫೩ರಂದು ಬರೆದ ಪತ್ರಕ್ಕೆ ಉತ್ತರ ಹೀಗಿದ್ದಿತು: ದೇವರು; ನನಗೆ ಏನೇನೂ ಗೊತ್ತಿಲ್ಲದ ವಿಷಯ. ನಿಮಗೆ

ಅದು ಖಾತ್ರಿ ಅನುಭವವಾದಲ್ಲಿ ನನ್ನನ್ನು ಒಪ್ಪೇಕಾಗಿಲ್ಲ. ನನಗೆ ಅತೀಂದ್ರಿಯ ಅನುಭವವಿಲ್ಲ. ತಮಗೆ ಇದ್ದರೆ ಸಂತೋಷ.

ತಮ್ಮದೇ ಜೀವನದೃಷ್ಟಿಯ ಅಂಶಗಳನ್ನು ಒಮ್ಮೊಮ್ಮೆ ಬರೆಯುವುದುಂಟು. ಕೆಲವನ್ನು ಹೆಕ್ಕಿ ಇಲ್ಲಿ ಕೊಡಬೇಕೆನಿಸುವುದು.

'ನನಗೆ ಜನ್ಮಾಂತರದಲ್ಲಿ ನಂಬಿಕೆ ಇಲ್ಲ. ನಮ್ಮ ತಿಳಿವನ್ನು ಹೆಚ್ಚಿಸಿ ದುಡಿಯುವುದೊಂದೇ ಗೊತ್ತು. ಪ್ರತಿಭೆ - ಈ ವಿಚಾರವಾಗಿ ಕೇಳಿದ್ದೀರಿ. ಅದು ಎಲ್ಲಿಂದ ಬಂತೆಂದು ತಿಳಿಯದು. ಅದು ಇದ್ದರೆ ನಮ್ಮ ಅಂಕೆಯಲ್ಲಿ ಇಲ್ಲ.'
(ಶ್ರೀ ರಾಜಶೇಖರ ಮುನಿರಾಬಾದು ಇವರು ದಿ. ೨೧-೨-೧೯೮೨ರಂದು ಬರೆದ ಪತ್ರಕ್ಕೆ ಉತ್ತರ.)

'ಲೋಕ ನನ್ನಿಂದ ನಿಮ್ಮಿಂದ ತಿದ್ದದು. ದೇಶಕ್ಕಾಗಿ ಒಳ್ಳೆಯ ಭವಿಷ್ಯ ಮೇಲಿನಿಂದ ಉದುರುವುದಿಲ್ಲ. ನಡತೆಯಲ್ಲಿ ತೋರಿಸಿದರೆ ಉಂಟು - ಅದೂ ಯಾವತ್ತು ಜನರಿಂದ' (ಡಾ. ಚಂದ್ರಶೇಖರಯ್ಯ, ಶಿವಮೊಗ್ಗ, ದಿ. ೨೧-೧-೧೯೮೩)

ಪರಿಸರದ ಚಿಂತನೆಯಾಗಲೀ ಮತ್ತು ಅದರ ಬಗ್ಗೆ ತಾವು ಮಾಡಿದ ಕೆಲಸದ ಬಗೆಗಾಗಲೀ, ಕಾರಂತರು ಲೇಖನ - ಪುಸ್ತಕ ರೂಪದಲ್ಲಿ ಬರೆದದ್ದು ಕಡಿಮೆ. ಆದರೆ ಇಲ್ಲಿಯ ಅನೇಕ ಪತ್ರಗಳಿಂದ ಅವರ ವಿಚಾರ ಮತ್ತು ಕಾರ್ಯ - ಇವನ್ನು ಇನ್ನಷ್ಟು ಸ್ಪಷ್ಟವಾಗಿ ತಿಳಿಯಬಹುದು. ಅದಕ್ಕಾಗಿ ಸರ್ವಶ್ರೀ ಎಸ್.ಆರ್. ಹಿರೇಮಠ, ಧಾರವಾಡ, ಡಾ. ಜಿ.ಎಸ್. ದೇವಧರ, ಹಾವೇರಿ, ಡಾ. ಕುಸುಮ ಸೊರಬ, ಹೊನ್ನಾವರ ಇವರೇ ಮುಂತಾದ ಪರಿಸರವಾದಿಗಳೊಡನೆಯ ಪತ್ರಗಳನ್ನು ಗಮನಿಸಬಹುದು. ಬೇರೊಂದು ಸಂದರ್ಭದಲ್ಲಿ ಕಾರಂತರು ಉದಯವಾಣಿ ಸಂಪಾದಕರಿಗೆ ಬರೆದ ಪತ್ರವನ್ನು ಇಲ್ಲಿ ಉದಾಹರಿಸುವೆ:

ದಿ. ೧೨ -೯-೧೯೮೫. 'ನಾನು ಈ ಮೊದಲು ತಮಗೆ ಶಿರಾಡಿ ಪರಿಸರದಲ್ಲಿ ಆಗುತ್ತಿರುವ ಅರಣ್ಯಗಳ ಲೂಟಿಯ ವಿಚಾರದಲ್ಲಿ ಹಿಂದೆ ಅಗೊಸ್ತು ಸುಮಾರಿಗೆ ತಿಳಿಸಿದ ವಿವರಗಳನ್ನು ಯಾವತ್ತು ನಕ್ಷೆ, ಅಪರಾಧಿಗಳ ವಿವರ ಸಹಿತ ಪಡೆದವನ್ನು, ಆದರೆ ಜೆರಾಕ್ಸ್ ಪ್ರತಿ ಮಾಡಿಸಿ ಈ ಜಿಲ್ಲೆಯ ಮಂತ್ರಿ ಜಯಪ್ರಕಾಶ್ ಹೆಗಡೆಯವರಿಗೂ ಅದೇ ದಿನ ಬೆಂಗಳೂರಿನ ಮುಖ್ಯ ಅರಣ್ಯ ಅಧಿಕಾರಿಗಳಿಗೂ ತಂತಿ ಮೂಲಕ ತಿಳಿಸಿ ಈ ಯಾವತ್ತು ದಾಖಲೆಗಳನ್ನು ಕಳುಹಿಸಿರುತ್ತೇನೆ. ಆ ದೂರಿನಲ್ಲಿ ಉಪ್ಪಿನಂಗಡಿಯ ಅರಣ್ಯ ಇಲಾಖೆಯವರ ಮೇಲಿನ ದೂರೂ ಇದೆ... ಶಿರಾಡಿ ವಲಯದ ಜನತೆಗೆ ಈ ವಿವರ ತಿಳಿದಿರಬೇಕು. ಇತಿ.' (ದಿ. ೧೨-೯-೧೯೮೫)

ಕಾರಂತರು, ಜನತೆಯ ತಿಳಿವಳಿಕೆಯನ್ನು ಹೆಚ್ಚಿಸುವದರ, ಅದಕ್ಕಿಂತ ಮಕ್ಕಳ ಶಿಕ್ಷಣದ ಕುರಿತು ತಮ್ಮ ತರುಣವಯದ ಕಾಲದಿಂದ ಕೊನೆವರೆಗೂ ಚಿಂತಿತರಾಗಿದ್ದರು. ಈ ಸಂಗ್ರಹದಲ್ಲಿಯ ಆರಂಭದ ಅವಧಿಯ ಪತ್ರಗಳಲ್ಲಿ ಒಂದು, ಎನ್ನಬಹುದಾದ ಪತ್ರವನ್ನು ತಮ್ಮ ಆಪ್ತ ಮಿತ್ರ ವಿ. ಸೀತಾರಾಮಯ್ಯನವರಿಗೆ ಬರೆದಿದ್ದಾರೆ.

ಪುತ್ತೂರು
ದಿ. ೨೨-೪-೧೯೩೩

ಪ್ರಿಯ ವಿ.ಸೀ.,

ಇದು ನಿಮಗೆ S.O.S. ಕರೆ. ಇದೇ ಮೇ ತಿಂಗಳ ೩ರಿಂದ ೯ನೆಯ ತಾರೀಖಿನವರೆಗೆ ಮಂಗಳೂರಲ್ಲಿ ಶೈಕ್ಷಣಿಕ ಸಪ್ತಾಹವನ್ನು ಇಟ್ಟುಕೊಂಡಿದ್ದೇವೆ. ಮಕ್ಕಳ ಮನೋವಿಜ್ಞಾನ ಹಾಗೂ ಅವರ ಶಿಕ್ಷಣಕ್ಕಾಗಿ ಈಚಿನ ಪ್ರಯೋಗಗಳ ಕುರಿತು ಮಾತನಾಡುವವರು ಬೇಕಾಗಿದ್ದಾರೆ. ಇದರಲ್ಲಿ ತಜ್ಞರಾದ ನಿಮ್ಮ ಪರಿಚಯದವರು ಇದ್ದಾರೆಯೆ? ನಮ್ಮಲ್ಲಿಯ ಪ್ರಾಥಮಿಕ ಶಾಲಾಶಿಕ್ಷಕರಿಗೆ ಉಪನ್ಯಾಸ ಕೊಡುವವರಾಗಬೇಕು. ಕೂಡಲೇ ಅಂಥವರನ್ನು ಪತ್ತೆ ಹಚ್ಚಿ ತಿಳಿಸಿರಿ. ಇತಿ.

ಕಷ್ಟಕಾರ್ಪಣ್ಯಗಳು ಯಾರಿಗೂ ತಪ್ಪಿದ್ದಲ್ಲ. ಕಾರಂತರು ಅಂಥ ಪ್ರಸಂಗಗಳಲ್ಲಿ ತಮ್ಮ ಮನೋಗತವನ್ನಾಗಲೀ ಸ್ವಂತದ ಬೇಸರವನ್ನಾಗಲೀ ಮುಕ್ತ ಮನದಿಂದ ತಿಳಿಸುತ್ತಿದ್ದರು. ಇದೊಂದು ಪತ್ರ:

೧೬-೫-೧೯೮೪

ಡಾ. ಶ್ರೀನಿವಾಸ ಹಾವನೂರ್, ಮಂಗಳೂರು.

ಪ್ರಿಯರೇ,

ಉದಯವಾಣಿಯಲ್ಲಿ ನಿಮ್ಮ ಬಾತ್ಮಿ ಓದಿ ಪತ್ರ ಬರೆಯುವಂತಾಯಿತು. [ಪೇಜಾವರ ಸದಾಶಿವರಾಯರ ಬಗ್ಗೆ ಮಾಹಿತಿಗಾಗಿ]. ನೀವು ಮುಂಬಯಿಯಲ್ಲಿ ಇದ್ದೀರಿ; ಇರುತ್ತೀರಿ ಎಂದು ತರ್ಕಿಸಿದ್ದೆ. ಪೇಜಾವರ ಸದಾಶಿವರಾಯರ ಮಗಳು ನನ್ನ ಸೋದರಿಯ ಮಗ ಶಾಮಸುಂದರನ ಹೆಂಡತಿ.

ನನ್ನ ಮಡದಿಯ ಕಾಯಿಲೆಯಿಂದಾಗಿ ಊರು, ಮಣಿಪಾಲದ ನಡುವೆ ನನಗೆ ಓಡಾಟ. ಅನೇಕ ಕಾರಣಗಳಿಂದ ಅಶಾಂತ ಮನಸ್ಸಿನಿಂದ ದಿನ ಕಳೆಯುತ್ತಿದ್ದೇನೆ. ಇತಿ,

ತಮ್ಮ ಮುಂಬರುವ ಸಾವಿನ ಬಗ್ಗೆ ಅವರು ಆಗೀಗ ಯೋಚಿಸುತ್ತಿದ್ದರೇನೂ, ಆ ದಿನಕ್ಕಿಂತ ಕೆಲವು ತಿಂಗಳ ಹಿಂದೆ ಅಂದರೆ ದಿ. ೧-೬-೧೯೯೭ರಂದು ಶಿವಮೊಗ್ಗೆಯ ಪ್ರಗತಿ ಪ್ರಿಂಟರ್ಸ್‌ನ ನಾರಾಯಣರಾಯರಿಗೆ ಬರೆದ ಪತ್ರದಲ್ಲಿ ಆ ಧ್ವನಿ ಇದೆ:

"ತೀರ ಅವಸರದ ಕೆಲಸಕ್ಕಾಗಿ ಈ ಪತ್ರ. ನನಗೆ ಈಗ ೯೫ನೆಯ ವರ್ಷ ಎಂಬುದರಿಂದ ಈ ಅವಸರ. ಬಿಡುವು ಮಾಡಿಕೊಂಡು ಪತ್ರವ್ಯವಹಾರದ ಸಂಪುಟದ [ಅಂದರೆ ಈ ಸಂಪುಟದ್ದು] ಮುದ್ರಣವನ್ನು ಮುಗಿಸಬೇಕು.... ೯೬ಕ್ಕೆ ಕಾಲಿಡುವಾಗ ನಾನು ನನ್ನ ಹೊಣೆಯನ್ನು ಮುಗಿಸುತ್ತಿದ್ದೇನೆ ಎಂಬ ತೃಪ್ತಿ ಪಡೆಯುವಂತೆ ಮಾಡಿ. ಬಹಳ ಕಾಲ ನಾನು ನನ್ನ ಹೊಣೆಯನ್ನು ಸಾಗಿಸಿಕೊಂಡು ಹೋಗಲು ಇಚ್ಛಿಸುವುದಿಲ್ಲ. ಇತಿ."

ಕಾರಂತರು ಮಣಿಪಾಲದ ಟಿ.ಎ. ಪೈಗಳಿಗೆ (ಅವರು ಕಾಂಗ್ರೆಸಿಗರು) ಬರೆದ ಇದೊಂದು ಪತ್ರವನ್ನು ಉಲ್ಲೇಖಿಸಲೇಬೇಕು. ವ್ಯಕ್ತಿಸ್ವಾತಂತ್ರ್ಯಕ್ಕೆ ಅವರು ಎಷ್ಟೊಂದು ಬೆಲೆ ಕೊಡುತ್ತಿದ್ದರೆನ್ನುವುದಕ್ಕೆ ಇದು ಸ್ಪಷ್ಟ ನಿದರ್ಶನ. ತುರ್ತು ಪರಿಸ್ಥಿತಿಯಿಂದ ಇಡೀ ದೇಶಕ್ಕೆ ದೇಶವೇ ಬಂಧನಕ್ಕೊಳಗಾಗಿದ್ದಿತು. ಕಾರಂತರು ಬರೆದಿದ್ದಾರೆ: (ದಿ. ೧೬-೨-೧೯೭೭)

The Emergency came to me as a bolt from the blue. The series of ordinances combined with Acts nullifying human freedom and distrust of the judiciary, led me to protest by way of renouncing my 'Padmabhushan' title. If as a writer, with some conscience I stand mum without speaking against the acts of the Congress I stand myself condemned. I am not a politician. But the acts of politicians that have degraded democracy and robbed fellow Indians of their freedom do not allow me to remain a mute spectator of events that have overtaken this country.

ಇನ್ನೊಂದೇ ಪತ್ರವನ್ನು ಇಲ್ಲಿ ಕಾಣಿಸುವೆ. 'ರವೀಂದ್ರನಾಥ ಠಾಕೂರರ ಅನಂತರ ಭಾರತೀಯ ಲೇಖಕರು - ಎಂದರೆ ಕಾರಂತರೇ' ಎಂದು ದೇಶದ ಅನೇಕ ಕಡೆ ಕೇಳಿಬಂದ ಅಭಿಪ್ರಾಯವಷ್ಟೇ. ಅದಕ್ಕೆ ನಿದರ್ಶನವಾಗಿ ಈ ಪತ್ರದ ಒಕ್ಕಣಿಕೆ ಇದೆ.

ಮಧ್ಯಪ್ರದೇಶದ ಆಡಳಿತ ಅಕಾಡೆಮಿಯ ನಿರ್ದೇಶಕರು ಅಧ್ಯಾಪಕರಿಗೆ ಸಂಬಂಧಿಸಿದ ಯುನೆಸ್ಕೊ ಪ್ರೇರಿತ ಸಮ್ಮೇಳನವೊಂದನ್ನು ಏರ್ಪಡಿಸಿದ್ದರು. ಅದಕ್ಕೆ ಕಾರಂತರು ಹಾಜರಿರಲೇಬೇಕು ಎಂಬುದು ಅವರ ಉತ್ಕಟ ಅಪೇಕ್ಷೆ. ಅದಕ್ಕೇ ಬರೀತಾರೆ :

"While we are deeply conscious of the fact that as a person of eminence, your time is extremely valuable, we are confident that you will be willing to spare sometime for this noble cause... Other - wise we urge you to take the trouble of putting your thoughts on a piece of paper. When I say a piece of paper I mean it" (30-11-1995)

ತುಂಡು ಕಾಗದದ ಮೇಲೆ ಬರೆದರೂ ಅವರಿಗೆ ಸಾಕಾಗುತ್ತಿತ್ತು. ಆದರೆ ನಮಗೆ ಕಾರಂತರು ೧೫೦೦ ರಷ್ಟು ಪತ್ರಗಳನ್ನು ಬರೆದು ಸಂಗ್ರಹಿಸಿ ಬಿಟ್ಟುಕೊಟ್ಟಿದ್ದಾರೆ!



# ೧೫ ಉತ್ತರಕರ್ನಾಟಕದವರೊಡನೆ ಕಾರಂತರು

ಮುಗೀತಾ ಬಂದಿರುವ, "ಇಪ್ಪತ್ತನೆಯ ಶತಮಾನದ ಸಾಕ್ಷೀಪುರುಷ" ಎನಿಸಿದ ಶಿವರಾಮ ಕಾರಂತರಿಗಿದ್ದ ಉತ್ತರ ಕರ್ನಾಟಕದೊಡನೆಯ ಒಗೆತನ ಎಂಥದಿತ್ತೆಂದು ತಿಳಿಸಲು ಈ ಲೇಖನ. ದ. ಕ. ಜಿಲ್ಲೆಯಂತೂ ಅವರದ್ದೇ. ಅದು ಬಿಟ್ಟು ಕೊಡಗು, ಮೈಸೂರು ಸೀಮೆ, ಹೈದ್ರಾಬಾದ ಕರ್ನಾಟಕ ಈ ಪ್ರದೇಶದವರಿಗಿಂತ ಉತ್ತರ ಕರ್ನಾಟಕದವರೊಂದಿಗೇ ಅವರ ಸಂಬಂಧ ಘನಿಷ್ಠವಾದದ್ದಿತ್ತು. ಹಾಗೆ ನೋಡಿದರೆ ಅಲ್ಲಿಯ ಆಚಾರ-ವಿಚಾರ, ಆಹಾರ, ಉಡಿಗೆ-ತೊಡುಗೆ, ಮಾತುಕತೆ ಕಾರಂತರಿಗಿಂತ ತುಂಬಾ ಭಿನ್ನವಾದದ್ದು. ಅಲ್ಲದೆ, ಪ್ರವಾಸಕ್ಕೆ ನೇರ ಮಾರ್ಗವೂ ಈ ಹಿಂದೆ ಇದ್ದಿಲ್ಲ. ಆದರೂ ಉತ್ತರ ಕರ್ನಾಟಕದವರು ಅವರ ಮನವನ್ನು ಗೆದ್ದರು. ಅದರ ಬಗೆಯನ್ನು ನೋಡೋಣ.

೧೯೧೬ನೆಯ ಇಸವಿ. ಕಾರಂತ ಶಿವರಾಮನು ಕುಂದಾಪುರ ಶಾಲೆಯಲ್ಲಿ ವಿದ್ಯಾರ್ಥಿ. ಅಲ್ಲಿಗೆ ಆಲೂರ ವೆಂಕಟರಾವ್, ಮುದವೀಡು ಕೃಷ್ಣರಾವ್ ಮುಂತಾದ ಆಗಿನ ಕನ್ನಡ ಧುರೀಣರ ಆಗಮನ. ಅವರಿಂದ ಕರ್ನಾಟಕ ಗತವೈಭವದ, ಅಜಂತಾ, ಬಾದಾಮಿಗಳಲ್ಲಿಯ ಶಿಲ್ಪಕಲೆಗಳ ನವಿರೇಳಿಸುವ ವರ್ಣನೆ, ಇದು ವಿದ್ಯಾರ್ಥಿ ಶಿವರಾಮನ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿತು. ಜೊತೆಗೆ ಆ ಪ್ರದೇಶದ ಬಗ್ಗೆ ಸುಪ್ತವಾಗಿ ಆದರ ಭಾವ ಮೂಡಿತು.

ಕಾರಂತರ ತಿರುಗಾಟದ ಹುಚ್ಚು ಸುಪ್ರಸಿದ್ಧವಾದದ್ದು. ಅವರ ಅವಸಾನದ ವರ್ಷವೂ ಅಲ್ಲಿ ಇಲ್ಲಿ ಹೋಗಿ ಬಂದದ್ದಿದೆ. ದ. ಕ. ಜಿಲ್ಲೆಯನ್ನು ದಾಟಿ ಅವರು ಮೊದಲು ಸಂಚಾರ ಕೈಕೊಂಡದ್ದು ಉತ್ತರ ಕರ್ನಾಟಕಕ್ಕೇನೆ. ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿಯ ವಾಸ್ತುಶಿಲ್ಪ ನೋಡುವುದು ನಿಮಿತ್ತವಾಗಿ, ಅಲ್ಲಿಂದ ಹಲಸಂಗಿ, ವಿಜಾಪುರ, ಬಾಗಲಕೋಟೆ, ಹುಬ್ಬಳ್ಳಿ-ಧಾರವಾಡ, ಹಾವೇರಿ - ರಾಣಿಬೆನ್ನೂರ - ಒಂದೇ ಎರಡೇ, ಉತ್ತರ ಕರ್ನಾಟಕದ ಮೂಲೆ ಮೂಲೆಗಳಲ್ಲಿ ತಿರುಗಾಡಿದ್ದಾರೆ. ಜನರೊಡನೆ ಬೆರೆತಿದ್ದಾರೆ. ಈ ತಿರುಗಾಟದ ಒಂದು ವಿಶೇಷತೆ ಎಂದರೆ ಅವರು ಒಂದೇ ಊರಿಗೆ ಹೋಗಿ ಹಿಂತಿರುಗಿದ್ದು ಕಡಿಮೆ. ಅದರೊಟ್ಟಿಗೆ ಬೇರೆ ಸನಿಹದ ಸ್ಥಳಗಳಿಗೂ ಹೋಗುತ್ತಿದ್ದರು. ೧೯೨೦-೧೯೩೦ರ ಆಗಿನ ದಿನಗಳಲ್ಲಿ ಸಂಚಾರದ, ಊಟ-ವಸತಿಗಳ ಅನುಕೂಲತೆ ಇದ್ದಿರಲಿಲ್ಲ. ಅವರೀ ಮೊದಲ ಭೇಟಿಯ ವಿವರಗಳನ್ನು ಅವರಿಂದಲೇ ತಿಳಿಯೋಣ!

"ಮೊದಲ ಬಾರಿಗೆ ನಾನು ಉತ್ತರ ಕರ್ನಾಟಕದಲ್ಲಿ ಸಂಚರಿಸುತ್ತಿದ್ದಾಗ, ಅಲ್ಲಿನ ಜನರ ಸಂಬೋಧನಾ ಕ್ರಮಗಳು ನನ್ನ ಕಿವಿಗೆ ವಿಚಿತ್ರವಾಗಿ ಕೇಳಿಸುತ್ತಿದ್ದವು. ಗುರುತಿಲ್ಲದವರೊಡನೆ 'ಅಪ್ಪಾ', 'ಯಪ್ಪಾ', 'ಅವ್ವಾ', 'ಯಜಮಾನ' ಎಂದೆನ್ನುವ ಗೌರವದ ಮಾತುಗಳು ನನ್ನ ಆತ್ಮ ಪ್ರತಿಷ್ಠೆಯನ್ನು ಬೀಗಿಸುತ್ತಿದ್ದುವು. ಕೋಪ ಬಂದರೂ, ಬಾರದಿದ್ದರೂ ಮಕ್ಕಳನ್ನೂ, ಪರಿಚಿತರನ್ನೂ ಅವರು ಮಾತನಾಡಿಸುವ ಹೊತ್ತಿನಲ್ಲಿ ಕೇಳಿಸುವ ಶಬ್ದ ಪರಂಪರೆ ಬೆರಗನ್ನಲ್ಲ, ನಿಬ್ಬೆರಗನ್ನು, ಹೆಬ್ಬೆರಗುಗಳನ್ನು ಹುಟ್ಟಿಸುತ್ತಿತ್ತು. ಅಮ್ಮಾ, ಅವ್ವಾ, ಅಕ್ಕಾ... ಇವರ ಕುಲಶೀಲಗಳ ಬಗ್ಗೆ ಶಂಕೆ ಉದ್ಭವಿಸುತ್ತಿತ್ತು. 'ಅಬ್ಬಾ ಎಂಥಾ ಒರಟ ಜನ ಇವರು!' ಎಂದು ಅನೇಕ ಬಾರಿ ಅನಿಸಿದ್ದುಂಟು.

"ಒಮ್ಮೆ ನಾನು ಐಹೊಳೆ, ಪಟ್ಟದಕಲ್ಲುಗಳನ್ನು ನೋಡುವುದಕ್ಕೆ ಒಂಟಿಯಾಗಿ ಬಾಗಲಕೋಟೆಯಿಂದ ನಡೆಯುತ್ತ ಅಮೀನಗಡಕ್ಕೆ ಹೋದೆ. ಅಲ್ಲಿಂದ ತಿರುಗಿ ನಡೆದು ಐಹೊಳೆಗೆ ಹೋದೆ. ಐಹೊಳೆಯ ಐತಿಹಾಸಿಕ ಸ್ಮಾರಕಗಳನ್ನು ನೋಡಿದ್ದಾಯಿತು. ಅಲ್ಲಿ ತುಸು ಹೊತ್ತು ವಿರಮಿಸಿ ಅಲ್ಲಿಂದ ಪಟ್ಟದಕಲ್ಲಿಗೆ ನಡೆದುಹೋದೆ. ಪಟ್ಟದಕಲ್ಲನ್ನು ಸೇರುವ ಮೊದಲು ಹರಿಗೋಲಿನಲ್ಲಿ ನದಿ ದಾಟಬೇಕಿತ್ತು. ನಮ್ಮೂರಲ್ಲಿ ಮರದ ದೋಣಿಗಳಲ್ಲಿ ಕುಳಿತು ಆಗಾಗ ನದಿ ದಾಟಿದ ನನಗೆ ಈ ಹರಿಗೋಲೆಂಬ ತೊಗಲ ಬುಟ್ಟಿಯಲ್ಲಿ ಕುಳಿತು ನದಿಯನ್ನು ದಾಟುವುದಕ್ಕೆ ಭಯವಾಯಿತು. ದಾಟಿದೆ; ಆ ಊರನ್ನೂ ನೋಡಿದೆ; ಅಲ್ಲಿನ ಭವ್ಯ ದೇಗುಲಗಳನ್ನು ನೋಡಿದೆ. ಆ ಊರಲ್ಲಿ ಯಾವೊಂದು ಅಂಗಡಿಯನ್ನೂ ಕಾಣದೆ, ಇದ್ದ ಹಸಿವನ್ನು ಹೆಚ್ಚಿಸಿಕೊಂಡು, ಐಹೊಳೆಗೆ ಮರಳುವ ಯೋಚನೆ ಮಾಡಿದೆ. ತಿರುಗಿ ಹತ್ತು ಮೈಲಿನ ಪಯಣ. ಊರ ಜನಗಳನ್ನು ಕಂಡು ಬರಿಗಾಲಿಂದ ನಡೆಯಬಾರದು ಎಂಬುದನ್ನು ಕಲಿತುಕೊಂಡಿದ್ದೆ. 'ಬರಿಗಾಲಿನಲ್ಲಿ ನಡೆವವನ ಕಂಡು ಕೆರದಲ್ಲಿ ಹೊಡೆಯೋ' ಎಂದಿದ್ದಾನೆ ಸರ್ವಜ್ಞ. 'ಕೆರ' ಮತ್ತಾವ ವಸ್ತುವೂ ಅಲ್ಲ. ಚಪ್ಪಲಿ, ಎಕ್ಕಡ, ಜೋಡು, ಮಚ್ಚೆ, ಕೆರ - ಒಂದೇ ಪದಾರ್ಥಕ್ಕೆ ಇಲ್ಲಿಯ ಜನರು ಕೊಟ್ಟ ವಿವಿಧ ಬಿರುದುಗಳು.

"ಹಗಲಲ್ಲಿ ಐಹೊಳೆಯಲ್ಲಿ ಅಲೆದಾಡುವಾಗ ಆ ಊರಿನ ಪ್ರತಿ ಹತ್ತು ಮಂದಿಗೆ ಒಂದರಂತೆ ಒಂದೊಂದು ನಾಯಿಯನ್ನು ಕಂಡ ನೆನಪು ನನಗೆ. ಅವೋ! ನನ್ನ ಊರಿನ ಶುನಕಗಳಲ್ಲ. ಒಳ್ಳೆ ಸುಟಿಯಾದ ಬೇಟೆ ನಾಯಿ ಜಾತಿಯವು. ನಮ್ಮೂರ ನಾಯಿಗಳಿಗಿಂತಲೂ ಎತ್ತರ. ಅವುಗಳ ಧ್ವನಿ ನಮ್ಮೂರಿನವಷ್ಟೇ ಇಂಪು. ಆ ಊರಲ್ಲಿ ಹಗಲಿನಲ್ಲಿ ನಾಯಿಗಳನ್ನು ಕಂಡಾಗಲೇ 'ಇದೇನು ಬಂತಪ್ಪ ಗ್ರಹಚಾರ' ಅನಿಸಿತ್ತು ಮನಸ್ಸಿಗೆ. ಆದುದರಿಂದ ಕತ್ತಲ ಹೊತ್ತಿಗೆ ಶ್ವಾನಗಾವಲಿನ ಐಹೊಳೆ ಊರನ್ನು ಸೇರುವುದಕ್ಕೆ ಅಂಜಿಕೆಯಾಯಿತು. ಹೀಗಾಗಿ ಪಟ್ಟದಕಲ್ಲಿನಿಂದ ಹೊರಟ ನಾನು ಓಡಿಕೊಂಡು ಮುಸ್ಸಂಜೆಯೊಳಗೆ ಆ ಊರನ್ನು ಸೇರಲು ಹವಣಿಸಿದೆ. ನನಗಿಂತಲೂ ಅವಸರದಿಂದ ಸೂರ್ಯ ಮುಳುಗಿ ಬಿಟ್ಟ. ಬೇಗ ಆ ಊರನ್ನು ಸೇರಿದರೆ ಊರಿನ ಅಂಗಡಿಗಳನ್ನು ಅರಸಿ ಚುರುಮುರಿ (ಚರಮುರಿ, ಮಂಡಕ್ಕಿ, ಮುಂಡಕ್ಕಿ) ಕೊಂಡೋ ಶೇಂಗಾ (ನೆಲಗಡಲೆ) ತಿಂದೋ ಹೊಟ್ಟೆ ತುಂಬಿಸಿಕೊಳ್ಳಬಹುದಿತ್ತು. ಅಷ್ಟರೊಳಗೇ ಕತ್ತಲಾಯಿತು. ಆ

ಊರನ್ನು ಬಿಡುವ ಮುಂಚೆ ಅಲ್ಲೊಂದು ಗ್ರಾಮ ಚಾವಡಿಯನ್ನು ಕಂಡಿದ್ದೆ. ಕತ್ತಲು ಹರಿದ ಬಳಿಕ ಅದನ್ನು ಸೇರಿಕೊಂಡೆ. ಊಟದ ಚಿಂತೆಯನ್ನೂ ಮರೆತು, ಕೈತಂಬಿಗೆಯಲ್ಲಿ ತಂದ ನೀರನ್ನು ಕುಡಿದು, ಇದ್ದೊಂದು ಹಚ್ಚಡವನ್ನು ಹಾಸಿ ಪವಡಿಸುವ ಯೋಚನೆ ಮಾಡಿದೆ. ತುಸು ಹೊತ್ತಿಗೆ ಯಾವನೋ ಒಬ್ಬ ಮುದುಕ, ಪ್ರಾಯಶಃ ಊರಿನ ಓಲೆಕಾರನಿರಬೇಕು. ಅಲ್ಲಿಗೆ ಬಂದು ಗ್ರಾಮ ಚಾವಡಿಯಲ್ಲಿ ಮಲಗಿದ್ದ ನನ್ನನ್ನು ಕಂಡು ವಿಚಾರಿಸಿದ. ನಾನು ಪರವೂರಿನಿಂದ ಬಂದ ಒಬ್ಬ ಯಾತ್ರಿಕ ಎಂದು ತಿಳಿದು, ನನ್ನನ್ನು ಒತ್ತಾಯಿಸಿ ಸಮೀಪದ ಒಬ್ಬರು ಹಿರಿಯರ ಮನೆಗೆ ಕರೆದುಕೊಂಡು ಹೋದ. ಆ ಮನೆಯವರು ಅಷ್ಟೇ ಆದರದಿಂದ ನನ್ನನ್ನು ಮಾತನಾಡಿಸಿ, ಹಾಲು, ಹಣ್ಣುಗಳನ್ನು ಕೊಟ್ಟು ಉಪಚರಿಸಿ, ಆ ರಾತ್ರಿ ತಮ್ಮಲ್ಲಿಯೇ ಉಳಿಸಿಕೊಂಡರು. ಮರುದಿನ ಬೆಳಿಗ್ಗೆ ಅವರಿಗೆ ವಂದನೆ ಸಲ್ಲಿಸಿ ನಾನು ಮುಂದಣ ಸಂಚಾರವನ್ನು ಕೈಕೊಂಡೆ.

"ಮುಂದೆ ಆ ಪ್ರದೇಶದಲ್ಲಿ ನಾನು ಬೇಕಷ್ಟು ಊರುಗಳಲ್ಲಿ ಸಂಚರಿಸಿದ್ದೇನೆ. ಪರಿಚಿತ, ಅಪರಿಚಿತರೆಲ್ಲರಲ್ಲಿಗೂ ಹೋಗಿದ್ದೇನೆ. ತಮ್ಮ ಮನೆಗೆ ಬರುವ ಅತಿಥಿಗಳ ವಿಷಯದಲ್ಲಿ ಅವರಿಗಿರುವ ಗೌರವ ಕಂಡಿದ್ದೇನೆ. ಪೇಟೆಯ ಜನಗಳಾದರೂ ಸರಿಯೇ, ಹಳ್ಳಿಯವರಾದರೂ ಸರಿಯೆ, ಆಡಂಬರದ ಮಾತುಗಳನ್ನಾಡುವುದಿಲ್ಲ. ತಮ್ಮ ದೊಡ್ಡಸ್ತಿಕೆಯನ್ನು ಪ್ರದರ್ಶಿಸುವುದಿಲ್ಲ. ಒಂದು ಕಪ್ ಚಹಾವನ್ನೋ, ಒಂದಿಷ್ಟು ಚೂಡಾವನ್ನೋ, ಅವಲಕ್ಕಿಯನ್ನೋ ಕೊಟ್ಟು ಉಪಚರಿಸುತ್ತಾರೆ. ಕರ್ನಾಟಕದ ಇತರ ಎಲ್ಲ ಕಡೆಗಳಲ್ಲಿ ಅಂಥದೇ ಉಪಚಾರ ಸಿಕ್ಕೀತೆಂಬ ಧೈರ್ಯ ಬಾರದು. ಅಪರಿಚಿತರೊಡನೆ ದೊಡ್ಡ ಮಾತುಗಳಲ್ಲಿ ಸಂಭಾಷಿಸಿ 'ಒಂದಿಷ್ಟು ಬಾಯಾರಿಕೆ ಬೇಕೇ' ಎಂದೂ ಕೇಳದೆ, ದಣಿದು ಬಂದವರನ್ನು ಹಾಗೆಯೇ ಕಳುಹಿಸುವ ಪರಿಪಾಠದ ಹಲವು ಊರುಗಳೂ ಇವೆ." (ಸ್ಮೃತಿಪಟಲದಿಂದ - ಸಮಾಜ ಮತ್ತು ನಾನು, ಪು. ೭೩-೪)

ಕಾರಂತರಿಗೆ ಒದಗಿದ ಉತ್ತರ ಕರ್ನಾಟಕೀಯ ಸಂಬಂಧ-ಸಂಪರ್ಕ ನಾಲ್ಕು ರೀತಿಯದು.

ಅ) ಇಲ್ಲಿಯ ಕಲಾವಿತಾನಗಳದ್ದು

ಆ) ಸಾಹಿತ್ಯಿಕರದ್ದು

ಇ) ಪತ್ರ ವ್ಯವಹಾರದ ಮೂಲಕ, ಮತ್ತು

ಈ) ಪರಿಸರ ನಿಮಿತ್ತವಾದದ್ದು

ವಾಸ್ತುಶಿಲ್ಪದ ಆಸಕ್ತಿಯನ್ನು ಮೇಲೆ ಸೂಚಿಸಿದ್ದೇನೆ. ಚಾಲುಕ್ಯ ಪ್ರಣೀತವಾದ ನಮ್ಮಲ್ಲಿಯ ವಾಸ್ತುಶಿಲ್ಪವು ಅಪ್ಪಟ ಕನ್ನಡದ್ದು ಹಾಗೂ ಅದರ ಔನ್ನತ್ಯವನ್ನು ತಾವು ಬೇರೆಡೆ ಕಂಡಿಲ್ಲವಾಗಿ ಅವರು ಬರೆದಿದ್ದಾರೆ.

ಇತ್ತ ನಮ್ಮ ರಂಗಭೂಮಿಯಲ್ಲಿಯೂ ಅವರಿಗೆ ಆಸಕ್ತಿ ಇದ್ದಿತು. ಅವರ ತರುಣ ವಯದಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಂಚಾರ ಮಾಡಿದ ಶಿರಹಟ್ಟಿ ನಾಟಕ ಮಂಡಳಿ,

ಹಲಗೇರಿ ಚೆಟ್ಟಪ್ಪನ ಕಂಪನಿ, ಗರೂಡ ದತ್ತಾತ್ರೇಯ ನಾಟಕ ಮಂಡಳಿ ಇವರುಗಳ ನಾಟಕ ನೋಡಿಯೇ ಕಾರಂತರಲ್ಲಿ ರಂಗಭೂಮಿಯ ಚಟುವಟಿಕೆಗಳ ಕುರಿತು ಆಸಕ್ತಿ ಮೂಡಿತು. 'ಕಠಾರಿ ಭೈರವ' ಎಂಬ ಐತಿಹಾಸಿಕ ನಾಟಕವನ್ನು ಗರೂಡ ಕಂಪನಿಯವರಿಗೆ ಬರೆದುಕೊಟ್ಟರು. ಆ ಕಂಪನಿ ಸಾಲದ ಭಾರದಲ್ಲಿ ನರಳುತ್ತಿದ್ದಾಗ 'ನೀವು ವಹಿಸಿಕೊಂಡು ಬಿಡಿರಿ' ಎಂದು ಗರೂಡರು ಹೇಳುವಷ್ಟು ವಿಶ್ವಾಸವನ್ನು ಕಾರಂತರು ಗಳಿಸಿದ್ದರು. ಹಲಗೇರಿ ಕಂಪನಿಯಲ್ಲಿ ಸಂಗೀತದ ತಾಲೀಮು ಮಾಡಿದ್ದುಂಟು. ಪಾತ್ರಗಳನ್ನೂ ವಹಿಸಿದ್ದಾರೆ! ಅಂತೂ ಕಾರಂತರ ರಂಗಭೂಮಿಯ ಆ ಮುಂದಿನ ಪ್ರಯೋಗಗಳಿಗೆ, ಆ ನಾಟಕ ಕಂಪನಿಗಳ ಒಡನಾಟ ಪ್ರೇರಣೆ ಒದಗಿಸಿತು.

ಇದೆಲ್ಲ ಅವರ ಆರಂಭ ಜೀವನ ಕಾರ್ಯಕ್ಕೆ ಸಂಬಂಧಪಟ್ಟದ್ದು. ಆದರೆ ಆ ಮುಂದೆಯೂ ಇಲ್ಲಿಯ ಜಾನಪದ/ಶಾಸ್ತ್ರೀಯ ಸಂಗೀತದಲ್ಲಿ ಒಲವನ್ನು ತೋರಿದ ಒಂದೆರಡು ಸಂದರ್ಭಗಳನ್ನು ಮಾಲಿನಿ ಮಲ್ಯರು ನೆನಪಿಸಿಕೊಂಡಿದ್ದಾರೆ. ಬಿಜಾಪುರ ಜಿಲ್ಲೆಯ ಒಂದು ಹಳ್ಳಿ. ಅಲ್ಲಿ 'ಸೀತಾ ಕಲ್ಯಾಣ'ದ ಹಾಡುಗಳನ್ನು ಒಂದು ಕುಟುಂಬದವರು ಹಾಡುತ್ತಾರೆ ಅಂತ ಯಾರೋ ಹೇಳಿದರು. ಕಾರಂತರು ಹುಡುಕಿಕೊಂಡು ಹೋದರು. ಗುಡಿಸಲ ಮನೆ, ಬಡತನದ ಸ್ಥಿತಿ. ಅಂಥದರಲ್ಲೇ ಕಾರಂತರು ಆತ್ಮೀಯ ಭಾವದಿಂದ ಹಾಡು ಕೇಳಿ ಸಂತೋಷಪಟ್ಟರಂತೆ. ಮತ್ತೊಂದು, ಧಾರವಾಡ ಜಿಲ್ಲೆಯ ಒಂದು ಹಳ್ಳಿ, ಅಲ್ಲಿಯೂ ಬಡತನ ಒಡೆತನವಿದ್ದ ಮನೆ. ಕಾರಂತರು ಹೋದರು. ಅವರಿಗಾಗಿ ಹಿಂದೂಸ್ತಾನೀ ಸಂಗೀತ ಕಛೇರಿ ಏರ್ಪಟ್ಟಿತ್ತು! ತಬಲಾ, ಪೇಟಿಗಳನ್ನು ಅಲ್ಲಿ ಇಲ್ಲಿಂದ ತರಿಸಿ ಆ ಅತಿಥೇಯ ಹಾಡಿದ.

ಇಂಥ ಪ್ರಸಂಗಗಳು ಅವೆಷ್ಟೋ!

ಆ) ಸಾಹಿತ್ಯ, ಸಾಹಿತ್ಯಿಕರ ಮೊದಲ ಸಂಪರ್ಕ ಅವರಿಗೆ ಬಂದದ್ದು ಹಲಸಂಗಿ, ಚಡಚಣ, ಬಾಗಲಕೋಟೆ ಮೊದಲಾದ ವಿಜಾಪುರದ ಸ್ಥಳಗಳಲ್ಲಿ. ಅವರಲ್ಲಿ ಚನ್ನಮಲ್ಲಪ್ಪ, ಧೂಲಾ ಸಾಹೇಬ ಮುಂತಾದ ಜಾನಪದೀಯರು ಹೆಚ್ಚು ಆತ್ಮೀಯರಾಗಿದ್ದರು. ಅವರನ್ನು ಹೊಲಸಂಗಿಯವರು ಎಂದು ಚೇಷ್ಟೆ ಮಾಡುತ್ತಿದ್ದರು. ಬಾಗಲಕೋಟೆಯಲ್ಲಿ ಮಂಗಳವೇಢೆ ಶ್ರೀನಿವಾಸರಾಯರ 'ಕನ್ನಡಿಗ' ಪತ್ರಿಕೆಯಲ್ಲಿ 'ಕೌಶಿಕ' ನಾಮದಿಂದ ವಿಮರ್ಶಾತ್ಮಕ ಲೇಖನಗಳನ್ನು ಕಾರಂತರು ಬರೀತಿದ್ದರು. ಅವರ ಈ ಸುಪರಿಚಿತ ಕಾವ್ಯನಾಮವನ್ನು ಸೂಚಿಸಿದವರು ಮಂಗಳವೇಢೆಯವರೇ.

ಆಗ ಧಾರವಾಡದಲ್ಲಿ ಸಾಹಿತ್ಯ ದಿಗ್ಗಜರೇ ಇದ್ದರು. ಅವರುಗಳಲ್ಲಿ ಶಂ. ಬಾ. ಜೋಶಿ ಕಾರಂತರಿಗೆ ಹೆಚ್ಚು ಹತ್ತಿರದವರಾಗಿದ್ದರು. ಕವಿ ಬೇಂದ್ರೆಯವರ ಒಡನಾಟ ಅಷ್ಟಾಗಿ ಇದ್ದಿಲ್ಲ. ಒಮ್ಮೆ ಬೇಂದ್ರೆಯವರು 'ಯಾವಾಗ ಬಂದದ್ದು' ಎಂಬುದಾಗಿ ಔಪಚಾರಿಕವಾಗಿ ಕೇಳಿದಾಗ 'ಇವತ್ತಿನ ಟಪಾಲಿನಲ್ಲಿ' ಎಂಬುದಾಗಿ ಕಾರಂತರು ಉತ್ತರ ಕೊಟ್ಟಿದ್ದರಂತೆ. ನಿಕಟ ಪರಿಚಯದ ಇನ್ನೊಬ್ಬ ಸಾಹಿತಿ ಶ್ರೀರಂಗರು. ಕ್ಯಾಮರಾವನ್ನು ತೂಗು ಹಾಕಿಕೊಂಡೇ ಇರುತ್ತಿದ್ದ ಅವರನ್ನು ಶ್ರೀರಂಗರ ಮಗಳು ಉಷಾ 'ಫೋಟೋ ಮಾಮಾ' ಎಂದೇ ಕರೆಯುತ್ತಿದ್ದಳು. ಈ ಆತ್ಮೀಯ

ಬಳ್ಳಗಕ್ಕೆ ಮೊಹರೆ ಹಣಮಂತರಾಯರು, ಬೆಟಗೇರಿ ಕೃಷ್ಣಶರ್ಮ, ವಿ. ಎಂ. ಇನಾಂದಾರ, ದ. ಬಾ. ಕುಲಕರ್ಣಿ ಇವರನ್ನೂ ಸೇರಿಸಬೇಕು. ಗೀತಾ ಕುಲಕರ್ಣಿಯವರಂತೂ ಕಾರಂತರ ಪತ್ನಿಯ ಖಾಸಾ ತಂಗಿ. ಅವಳ ಮಕ್ಕಳನ್ನು ಕಾರಂತರು ಮುದ್ದಾಡಿದ್ದು ಅಷ್ಟಿಷ್ಟಲ್ಲ. ಅಲ್ಪ ಪ್ರಸಿದ್ಧಿಯ ಸಾಹಿತಿಗಳೂ ಕಾರಂತರಿಗೆ ಬೇಕಾದವರೇ. ಆದರೆ ಅವರು ನೇರ ನಡವಳಿಕೆಯ ನಿರ್ವ್ಯಾಜ ಸ್ವಭಾವದವರಾಗಿರಬೇಕು. ಅಂತಹ ಕೊಣ್ಣೂರ ಎಂಬುವವರನ್ನು ಕಾರಂತರು "ಸ್ನೇಹಿತರನ್ನು ಕಂಡೊಡನೆ ಬಾಯ್ದೆರೆದು ಸ್ವಾಗತಿಸುವರು" ಎಂದು ಒಂದೆಡೆ ವರ್ಣಿಸಿದ್ದಾರೆ.

ಮಹತ್ವದ ಮಾತೆಂದರೆ, ಕಾರಂತರ ಆರಂಭದ ಹಾಗೂ ವೈಶಿಷ್ಟ್ಯಪೂರ್ಣ ಗ್ರಂಥಗಳನ್ನು ಮೊದಲು ಪ್ರಕಟಿಸಿದವರು ಧಾರವಾಡದವರೇ. ಕಾರಂತರ ಪ್ರಥಮ ಕಾದಂಬರಿಯಾದ 'ಸರಸಮ್ಮನ ಸಮಾಧಿ' (೧೯೩೭), ಅನಂತರದ ಮರಳಿ ಮಣ್ಣಿಗೆ, ಬೆಟ್ಟದ ಜೀವ, ಬಿತ್ತಿದ ಬೆಳೆ ಇವನ್ನು ಧಾರವಾಡದ ಮನೋಹರ ಗ್ರಂಥಮಾಲೆಯ ಜಿ. ಬಿ. ಜೋಶಿ ಪ್ರಕಟಿಸಿದ್ದರು. ಅವರ 'ಬಾಳ್ವೆಯೇ ಬೆಳಕು' ಪ್ರಕಟವಾದದ್ದಕ್ಕೆ ಮೋಜಿನ ಹಿನ್ನೆಲೆ ಇದೆ. ೧೯೫೦ರ ದಶಕದಲ್ಲಿ ಕಾರಂತರು ಧಾರವಾಡಕ್ಕೆ ಹೋಗಿದ್ದಾಗ ಮಿತ್ರ ಶಂ. ಬಾ. ಅವರು 'ದೇವರಿಲ್ಲದ ಬದುಕು' ಎಂಬ ವಿಷಯದ ಮೇಲೆ ಭಾಷಣ ಏರ್ಪಡಿಸಿದ್ದರು. ಅದನ್ನು ಮೆಚ್ಚಿಕೊಂಡ ಪ್ರಕಾಶಕ ಘಾಣೇಕರರು (ಸಮಾಜ ಪುಸ್ತಕಾಲಯ) ಕಾರಂತರಿಗೆ ಗಂಟುಬಿದ್ದು ಪುಸ್ತಕ ರೂಪದಲ್ಲಿ ಬರೆಯಿಸಿ 'ಬಾಳ್ವೆಯೇ ಬೆಳಕು' ಎಂಬ ಹೆಸರಿನಲ್ಲಿ ಹೊರತಂದರು. ಈ ಸುಪ್ರಸಿದ್ಧ ಮೌಲಿಕ ಕೃತಿಯು ಈಚೆಗೆ 'Life is Light' ಎಂಬುದಾಗಿ ಇಂಗ್ಲೀಷ್‌ನಲ್ಲಿ ಮೂಡಿ, ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದಿದೆ.

ಹಾಂ. ಕಾರಂತರ ಮೊದಲ ಸಣ್ಣಕತೆಯನ್ನೂ ಉತ್ತರ ಕರ್ನಾಟಕದವರೇ ಹೊರತಂದರೆಂದು ಕಾಣುತ್ತದೆ. ಅದರ ಹೆಸರು 'ಕವಿ ಕರ್ಮ' ಎಂಬುದು. ಬೆಳಗಾವಿಯಲ್ಲಿ 'ಒಂದಾಣೆ ಮಾಲೆ' ಚಾಲ್ತಿಯಲ್ಲಿದ್ದಿತು. ೧೯೩೩ರಲ್ಲಿ ಈ ಸಣ್ಣಕತೆ ಆ ಮಾಲೆಯ ವತಿಯಿಂದ ಹೊರಬಂದಿದೆ. ಅದರಂತೆ ಆರಂಭಕಾಲದ ಏಕಾಂಕಗಳಿಗೆ ಹಲಸಂಗಿಯ ಅರವಿಂದ ಗ್ರಂಥಮಾಲೆಯು ಆಸರೆಯಾದದ್ದನ್ನೂ ಕಾಣಿಸಬೇಕು.

ಕಾರಂತರಿಗೆ ೧೯೫೯ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬರುವವರೆಗೆ ಮೈಸೂರ ಸೀಮೆಯಲ್ಲಿ ಮಾಸ್ತಿ, ವಿ. ಸೀ. ಮುಂತಾದ ಕೆಲವೇ ಜನ ಹಿರಿಯ ಲೇಖಕರನ್ನು ಬಿಟ್ಟರೆ ಯಾವ ಸಾಹಿತಿಯೂ, ಯಾವ ಪ್ರಕಾಶಕರೂ ಕಾರಂತರ ಸಾಹಿತ್ಯವನ್ನು ಗಮನಿಸಿದವರೇ ಅಲ್ಲ! ಇದು ನಿಷ್ಠುರ ಸತ್ಯದ ಕಟು ಮಾತು. (ಈ ಮಾತಿಗೆ ಒಂದೆರಡು ಅಪವಾದಗಳಿವೆ. ಬಹು ದೊಡ್ಡ ಅಪವಾದವೆಂದರೆ ೧೯೩೬ರಲ್ಲಿ ನಿಟ್ಟೂರು ಶ್ರೀನಿವಾಸ ರಾಯರು ಕಾರಂತರ 'ಬಾಲಪ್ರಪಂಚ'ದ ಮೂರು ಬೃಹತ್ ಸಂಪುಟಗಳನ್ನೂ ೧೯೪೯ರಲ್ಲಿ ಎಸ್. ಅನಂತನಾರಾಯಣರು 'ಕಾರಂತರ ಕಾದಂಬರಿಗಳು' ಎಂಬ ವಿಮರ್ಶಾತ್ಮಕ ಗ್ರಂಥವನ್ನೂ ಪ್ರಕಟಿಸಿದ್ದುದು. ಅವರ ಉಪನ್ಯಾಸಗಳನ್ನು ಅಲ್ಲಿ ಇಲ್ಲಿ ಜರುಗಿಸಿರಲೂಬಹುದು. ಆದರೆ ಎದ್ದು ಕಾಣುವಂತಹದಲ್ಲ) ಉತ್ತರ ಕರ್ನಾಟಕದ ಸಾಹಿತ್ಯ ಪ್ರೇಮಿಗಳು ಅವರ ಕೃತಿಗಳನ್ನು

ಪ್ರಕಟಿಸುವುದಕ್ಕೆ ಮುಂದಾದದ್ದು ಮಾತ್ರವಲ್ಲ, ಕೊಂಡು ಓದುವುದರಲ್ಲಿಯೂ ಮುಂದಾದರು. "ನನ್ನ ಹೆಚ್ಚಿನ ಪುಸ್ತಕಗಳು ಮೆಲುಗತಿಯಿಂದ ವಿಕ್ರಯಗೊಂಡರೂ ಅವನ್ನು ಕೊಂಡವರು ಹೆಚ್ಚಾಗಿ ಉತ್ತರ ಕರ್ನಾಟಕದ ಜನಗಳೇ" ಎಂಬುದಾಗಿ ಕಾರಂತರು ತಮ್ಮ 'ಸ್ಮೃತಿಪಟಲದಿಂದ'ದಲ್ಲಿ ಹೇಳಿಯೇ ಇದ್ದಾರೆ. (ಸಂಪುಟ ೩. ಪು. ೧೯೩). ಕಾರಂತರಿಗೆ ೬೦ ವರ್ಷ ತುಂಬಿದಾಗ ಉಡುಪಿ, ಮುಂಬೈಗಳಲ್ಲಿ ಷಷ್ಟ್ಯಬ್ದಿ ಆಚರಿಸಲಾಯಿತು. ಆದರೆ ಅವರಿಗೆ ೬೦ ತುಂಬಿದ್ದನ್ನು ಮುದ್ದಾಂ ನೆನಪಿಟ್ಟುಕೊಂಡು ಮೊತ್ತಮೊದಲಿಗೆ ಆ ಹುಟ್ಟುಹಬ್ಬವನ್ನು ಆಚರಿಸಿದವರೆಂದರೆ ಧಾರವಾಡದ ವಿದ್ಯಾರಣ್ಯ ಹೈಸ್ಕೂಲಿನವರು!

ಸಾಹಿತಿಗಳು ಎಷ್ಟೆಂದರೂ ಅಲ್ಪಸಂಖ್ಯಾತರು. ಆದರೆ ಉತ್ತರ ಕರ್ನಾಟಕದ ಜನಸಾಮಾನ್ಯರನೇಕರು ಕಾರಂತರ ಸಂಪರ್ಕ ಇಟ್ಟುಕೊಳ್ಳುವುದಕ್ಕೆ ಪತ್ರವ್ಯವಹಾರವು ಬಹು ವ್ಯಾಪಕ ಮಟ್ಟದ ಸಾಧನವಾಯಿತು. ಸಾವಿರ ಸಾವಿರ ಲೆಕ್ಕದ ಪತ್ರಗಳನ್ನು ಅಲ್ಲಿಯವರು ಬರೆದಿದ್ದಾರೆ. ಪ್ರತಿಯೊಂದು, ಹೌದು, ಅಕ್ಷರಶಃ ಪ್ರತಿಯೊಂದು ಪತ್ರಕ್ಕೆ ಅದು - ಯಾವ ಯಃಕಶ್ಚಿತ ವ್ಯಕ್ತಿಯದೇ ಇರಲಿ, ಕಾರಂತರು ಉತ್ತರ ಕೊಡುತ್ತಿದ್ದರಾದ್ದರಿಂದ ಅಷ್ಟೇ ಅಗಣಿತ ಸಂಖ್ಯೆಯ ಪತ್ರಗಳು ಆ ಆ ಜನರನ್ನು ತಲುಪಿವೆ. ಈ ಪತ್ರವ್ಯವಹಾರದಲ್ಲಿ ವಿದ್ಯಾರ್ಥಿಗಳಿದ್ದಾರೆ, ವ್ಯಾಪಾರಸ್ಥರಿದ್ದಾರೆ. ಶಾಲಾ ಮಾಸ್ತರರಿದ್ದಾರೆ, ಡಾಕ್ಟರ್, ವಕೀಲರಿದ್ದಾರೆ. ಹಿರಿಯ ಸಾಹಿತಿಗಳಂತೂ ಸೈಯೆ.

ಈ ಪತ್ರವ್ಯವಹಾರದ ಬಳ್ಳಿ ಏನೂ ಸದ್ದಿಲ್ಲದೆ ಔತ್ತರೇಯ ಕರ್ನಾಟಕದ ಸಂದಿಗೊಂದಿಗಳಲ್ಲಿ ಹರಡಿದ್ದುದು ನಿಜಕ್ಕೂ ಅಗಾಧವೆನಿಸುತ್ತದೆ. ಕಾರಂತರು ಬರೆದ ಉತ್ತರ ಪತ್ರಗಳು ಅವೆಷ್ಟು ಮನೆಗಳ ನಾಗೊಂದಿಗೆ, ಕಪಾಟುಗಳಲ್ಲಿ ಭದ್ರವಾಗಿ ಉಳಿದಿವೆಯೋ!

ಉತ್ತರ ಕರ್ನಾಟಕದೊಡನೆಯ ಪರಿಸರ ಸಂಪರ್ಕ ಮತ್ತು ಸಂಬಂಧ ಅವರ ಉತ್ತರಾರ್ಧ ಜೀವನದಲ್ಲಿ ಒದಗಿ ಬಂದದ್ದು. ನಿಸರ್ಗದ ಅನೇಕ ವಸ್ತುಗಳಲ್ಲಿ ಕಾರಂತರಿಗೆ ಎಂದಿನಿಂದಲೂ ಆಸ್ಥೆ. ಹೂವು ಮತ್ತು ಪಕ್ಷಿ - ಈ ಸುಕೋಮಲ ವಸ್ತುಗಳಲ್ಲಿ ವಿಶೇಷ ಅನುಕಂಪೆ; ತಾಯಿ ತನ್ನ ಮಕ್ಕಳಲ್ಲಿ ತೋರಬಹುದಾದ ಕಕ್ಕುಲಾತಿ ಕೂಡ. ಉತ್ತರ ಕರ್ನಾಟಕದ ಅನೇಕರಿಗೆ ಅವರೀ ಒಲವು ಚೆನ್ನಾಗಿ ಮನವರಿಕೆಯಾಗಿತ್ತು. ಧಾರವಾಡದ ಎಗ್ರಿಕಲ್ಚರಲ್ ಕಾಲೇಜಿನ ಪ್ರಾಂಶುಪಾಲರಾಗಿದ್ದ ಡಾ. ಮೆಣಸಿನಕಾಯಿಯವರ ಹೆಸರನ್ನು ಕೇಳಿ ಬಲ್ಲೆವು. ಅವರು ಅನಂತರ ಎಗ್ರಿಕಲ್ಚರ್ ಖಾತೆಯ ಡೈರೆಕ್ಟರರೂ ಆಗಿದ್ದರು. ಅವರೊಮ್ಮೆ ಸರ್ಕಾರೀ ಕೆಲಸದ ನಿಮಿತ್ತ ಮಾರ್ವಾಡಿಗೆ ಹೋದಾಗ ಬೆಳ್ಳಪ್ಪ ಎಂಬುವರ ಹೊಲದಲ್ಲಿ ಒಂದು ವಿಶಿಷ್ಟವೆನಿಸುವ ಭತ್ತದ ತೆನೆ ನೋಡಿದರು. ಅದನ್ನು ಹಿಡಿದುಕೊಂಡು ಕಾರಂತರಿಗೆ ವಿವರಿಸಲೆಂದು ಸಾಲಿಗ್ರಾಮಕ್ಕೆ ಧಾವಿಸಿದರಂತೆ.

ಕಾರಂತರು, ಈ ಭಾಗದಲ್ಲಿ ಪರಿಸರ ರಕ್ಷಣೆಗೆ ಸಂಬಂಧಿಸಿದಂತೆ ನಡೆದ, ಪಲ್ಪ್‌ವುಡ್ ಹೋರಾಟ, ಅಪ್ಪಿಕೋ ಚಳವಳಿ, ಧಾರವಾಡ ನಗರದಲ್ಲಿರುವ ಪರಿಸರ ವೇದಿಕೆ ಇವುಗಳಲ್ಲೆಲ್ಲಾ ಸಕ್ರಿಯವಾಗಿಯೂ ಸಲಹೆ ಕೊಡುವುದರ ಮೂಲಕವೂ ಪಾಲ್ಗೊಂಡಿದ್ದರು. ಅವರು ವಿಶೇಷವಾಗಿ

ಆಸಕ್ತರಿದ್ದುದು ರಾಣಿಬೆನ್ನೂರಿನ ಪಕ್ಷಿಧಾಮ. ಅಭಯಾರಣ್ಯಗಳಲ್ಲಿ. ಬಸ್ಟರ್ಡ್ ಎನ್ನುವ ಪಕ್ಷಿ ಕುಪ್ಪಳಿಸುತ್ತ ಹಾರುವ ದೃಶ್ಯ ಅತ್ಯಂತ ಮನಮೋಹಕವಾದದ್ದು. ಅನ್ಯದೇಶದ ಪಕ್ಷಿಗಳು ವರ್ಷದ ನಿರ್ದಿಷ್ಟ ಕಾಲಕ್ಕೆ ವಲಸೆ ಬರುವುದನ್ನು ಕಾಣಲೆಂದೇ ಕಾರಂತರು ಹಲವು ಬಾರಿ ಹೋಗಿದ್ದರು.

ರಾಣಿಬೆನ್ನೂರಿನಿಂದ ಹಾವೇರಿಯು ಅರ್ಧ ತಾಸಿನ ಹಾದಿ. ಅಲ್ಲಿಯ ಡಾ. ದೇವಧರ ದಂಪತಿಗಳದ್ದು ಈಚಿನ ಪರಿಚಯ. ಆ ಪರಿಚಯದ ಒಂದು ಕಾರಣ ಈ ದಂಪತಿಗಳು ತಮ್ಮ ಮೊಗಸಾಲೆಯಲ್ಲಿ ಬೆಳೆಸಿ, ಪೋಷಿಸುತ್ತಿದ್ದ ಹೂಬಳ್ಳಿಗಳು. ಇನ್ನೊಂದು ಕಾರಣ ಡಾ. ದೇವಧರರು ಲೆಪ್ರೊಸ್ಕೋಪಿಗೆ ಸಂಬಂಧಿಸಿದಂತೆ ಕಂಡುಹಿಡಿದ ನವೀನ ಹಾಗೂ ಸುಲಭ ವಿಧಾನ. ಆ ಕುರಿತ ಲೇಖನವನ್ನು ಬರೆಯಲು ಕಾರಂತರು ಮೂರು ಸಲ ಒತ್ತಾಯಿಸಿ ಕೊನೆಗೆ ಬರೆಸಿದುದೇ ಅಲ್ಲದೆ, ಅದರ ಅನುವಾದವನ್ನು ತಾವೇ ಮಾಡಿಕೊಟ್ಟರು. ಅಷ್ಟೊಂದು ಪರಸ್ಪರ ಆತ್ಮೀಯತೆ.

ಹಾವೇರಿ, ರಾಣಿಬೆನ್ನೂರುಗಳತ್ತ ಬಂದಾಗಲೆಲ್ಲ ಕಾರಂತರು ಅಲ್ಲಿಯ ಸಣ್ಣ ಸಂಸ್ಥೆಗಳು, ಶಾಲೆಗಳಲ್ಲೆಲ್ಲ ಭಾಷಣ ಮಾಡುತ್ತಿದ್ದರು; ಸಾಹಿತ್ಯ ಕುರಿತು ಅಲ್ಲ, ಪರಿಸರದ ಬಗ್ಗೆ ಎಚ್ಚರ ಮೂಡಿಸುವ ಅಂಶಗಳು. ಆಗೆಲ್ಲ 'ಬೇವು, ಅಶ್ವತ್ಥ ಮುಂತಾದ ದೊಡ್ಡ ಗಿಡಮರಗಳನ್ನು ಬೆಳೆಸಿರಿ' ಎಂದು ಹೇಳುತ್ತಿದ್ದರು. ಹಳ್ಳಿಗಳ ಪ್ರಾಥಮಿಕ ಶಾಲೆಗಳಿಗೆ ಹೋದಾಗ ಮಕ್ಕಳ ಆಟದ ಸ್ಥಳದಲ್ಲಿ ಉಸುಕು ಹಾಕಲು ಸೂಚಿಸುತ್ತಿದ್ದರು. ಅಷ್ಟರಮಟ್ಟಿಗೆ ತಾದಾತ್ಮ್ಯ.

ನೆನಪಾಯಿತು. ಒಂದು ಹಳ್ಳಿಯ ಪ್ರಾಥಮಿಕ ಶಾಲೆಯ ಆಟದ ಬಯಲಿನ ಜಾಗವನ್ನು ಓರ್ವ ಪುಢಾರಿ ಆಕ್ರಮಿಸಿದ್ದನಂತೆ. ಹೆಡ್ ಮಾಸ್ಟರರು ಅಕಸ್ಮಾತ್ ಶಾಲೆಗೆ ಭೇಟಿ ಕೊಟ್ಟಿದ್ದ ಕಾರಂತರೆದುರು ತಮ್ಮ ಅಳಲನ್ನು ತೋಡಿಕೊಂಡರು. ಕಾರಂತರು ಆ ಕೂಡಲೇ ಸಂಬಂಧಪಟ್ಟ ಅಧಿಕಾರಿಗಳಿಗೆ ಪತ್ರ ಬರೆದರು. ಇದು ನಡೆದದ್ದು ಅವರ ಬದುಕಿನ ಕೊನೆಯ ವರ್ಷ ೧೯೯೭ರಲ್ಲಿ. ಕೆಲ ಸಮಯದ ಅನಂತರ, ಕಾರಂತರಿಗೆ ಸರ್ಕಾರದಿಂದ ಪತ್ರ ಬಂದಿತು - ಆಕ್ರಮಣವನ್ನು ತೆಗೆಯಿಸಲಾಗುವುದು, ಎಂದು. ಆ ಪತ್ರವನ್ನು ಕಾರಂತರು ಹೆಡ್‌ಮಾಸ್ಟರಿಗೆ ಕಳುಹಿಸಿಕೊಟ್ಟರು. ಹೆಡ್‌ಮಾಸ್ಟರರಿಗಾದ ಹಿಗ್ಗು ಇಷ್ಟೇ ಎಂದು ಹೇಳಸಾಧ್ಯವೇ? ಮುಂದೆ ಹದಿನೈದೇ ದಿನಗಳಲ್ಲಿ ಕಾರಂತರ ಮರಣದ ಸುದ್ದಿ ಬರಸಿಡಿಲಿನಂತೆ ಎರಗಿದಾಗ ಆ ಮಾಸ್ತರರು ಪರಿತಪಿಸಿದ್ದು ಅಷ್ಟೇ ಮನೋವೇಧಕವಾಗಿತ್ತು.

ಉತ್ತರ ಕರ್ನಾಟಕದ ಇನ್ನೊಬ್ಬರ ಹೆಸರನ್ನು ಪ್ರಸ್ತಾಪಿಸಿ ಈ ಲೇಖನ ಮುಗಿಸುವೆ. ಅವರೇ ಈ ಮುನ್ನ ಉಲ್ಲೇಖಿಸಿದ ಡಾ. ಎ.ಟಿ. ಪಾಟೀಲರು. ಸದ್ಯ ದಾವಣಗೆರೆಯಲ್ಲಿ ಅವರ ವೃತ್ತಿ ಜೀವನ. ಅಪಾರ ಸಾಹಿತ್ಯ ಪ್ರೇಮಿ. ಈಗೇನೋ ಕಾರಂತರ ಪ್ರತಿಯೊಂದು ಬರಹವು, ಮಾಲಿನಿ ಮಲ್ಯ ಅವರ ಬಳಿ ಇದೆ. ಕೆಲವು ವರ್ಷಗಳ ಹಿಂದೆ ಆಗಿದ್ದರೆ, ಯಾರ ಯಾರ ಬಳಿಯಲ್ಲಿಯೂ ಸಮಗ್ರ ಕಾರಂತ ಲೇಖನ ಸಿಗುವ ಜಾಗ ಇರಲಿಲ್ಲ - ಒಂದನ್ನು ಬಿಟ್ಟರೆ! ಅದುವೇ ನಮ್ಮ ಡಾ. ಪಾಟೀಲರ ನಿವಾಸದಲ್ಲಿ. ಜೇನಿನಂತೆ ಅವರು ಸಂಗ್ರಹಿಸುತ್ತಲೇ ಇದ್ದರು.

(ನನ್ನಿಂದಲೂ ಕಾರಂತರ 'ವಸಂತ' ಮಾಸಪತ್ರಿಕೆಯ ಒಂದು ಸಂಚಿಕೆ ಪಡೆದಿದ್ದಾರೆ.) ಬರಿ ಸಂಗ್ರಹಿಸಿದ್ದಲ್ಲ. ಎಲ್ಲವನ್ನೂ ಕೂಲಂಕಷವಾಗಿ ಓದಿದ್ದಾರೆ. ಆ ಕುರಿತು ಕಾರಂತರೊಡನೆ ಅಖಂಡವಾಗಿ ಪತ್ರವ್ಯವಹಾರ ಮಾಡುತ್ತಿದ್ದರು. "ನೀವು ಇರಿಸಿಕೊಂಡ ಅಭಿಮಾನಕ್ಕೆ ನಾನೆಷ್ಟು ಋಣಿಯಾಗಿದ್ದರೂ ಸಾಲದು" (ದಿನಾಂಕ ೧೯-೧೨-೧೯೬೩ರ ಪತ್ರ), "ನೀವು ತೋರಿದ ಪ್ರೀತ್ಯಾದರಗಳ ಭಾರ ವಿಶೇಷವಾದದ್ದು" (ದಿನಾಂಕ ೧೨-೨-೧೯೬೪) ಎಂಬಂತಹ ಪ್ರಾಮಾಣಿಕ ಅನಿಸಿಕೆಗಳನ್ನು ಕಾರಂತರು ಆಗಾಗ ವ್ಯಕ್ತಪಡಿಸುತ್ತಾ ಇದ್ದರು.

ಹೀಗಿರುತ್ತ ಅವರು ದಾವಣಗೆರೆಯ ಪಾಟೀಲರ ಮನೆಗೆ ಹತ್ತಾರು ಬಾರಿ ತಾವಾಗಿ ಹೋಗಿಯೆ ಇದ್ದಾರೆ. ಒಂದು ಬಾರಿ ಹೋದಾಗ ಡಾ. ಪಾಟೀಲರ ಮನೆಯವರು ಒಂದು ದೊಡ್ಡ ವಾಟಗದಲ್ಲಿ ಹಾಲು ತಂದುಕೊಟ್ಟರು. ಆಗ ಕಾರಂತರು ಹೇಳಿದರು, "ನಿಮ್ಮ ಆ ಎಮ್ಮೆಯನ್ನೇ ಸಾಲಿಗ್ರಾಮಕ್ಕೆ ಕಳಿಸಿಬಿಡಿರಿ!"

ಸಾಲಿಗ್ರಾಮದಲ್ಲಿ ವಾಸ್ತವ್ಯಕ್ಕೆಂದು ಹಿತಚಿಂತಕರೊಬ್ಬರು ಕಾರಂತರಿಗೆ ಒಂದು ಬಂಗಲೆಯನ್ನು ಬಿಟ್ಟುಕೊಟ್ಟಿದ್ದರಷ್ಟೇ. ೧೯೬೪ರಲ್ಲಿ ಕಾರಂತರು ಅದನ್ನು ತೆರವು ಮಾಡಬೇಕಾದ ಅನಿವಾರ್ಯ ಪ್ರಸಂಗ ಒದಗಿತು. ಎಲ್ಲಿ ಹೋಗಬೇಕು? ಈ ಯೋಚನೆಯಲ್ಲಿದ್ದಾಗ ಡಾ. ಪಾಟೀಲರು ಆ ಕೂಡಲೇ ಪತ್ರ ಬರೆದು "ದಾವಣಗೆರೆಯಲ್ಲಿ ನೀವು ಆರಾಮವಾಗಿ ಇರಲು, ನಿತಾಂತವಾಗಿ ಲೇಖನಾದಿ ಕೆಲಸಗಳನ್ನು ಮಾಡಲು ವಸತಿ, ಆಹಾರ, ಎಲ್ಲ ವ್ಯವಸ್ಥೆ ಮಾಡುವೆ, ಬಂದು ಬಿಡಿರಿ" ಎಂದು ತಿಳಿಸಿದರು. ಆ ಮುಂದೆ ಶ್ರೀಮತಿ ಮಾಲಿನಿಯವರು ಸಾಲಿಗ್ರಾಮದಲ್ಲಿಯೇ ವ್ಯವಸ್ಥೆ ಮಾಡಿದ್ದರಾದ್ದರಿಂದ ಆ ಪ್ರಸಂಗ ಬರಲಿಲ್ಲ.

ಇದುವರೆಗೆ ನಾನು ಪ್ರಸ್ತಾಪಿಸಿದ್ದು ಅಲ್ಲಿ ಇಲ್ಲಿಯ ಕೆಲವು ಪ್ರಸಂಗಗಳನ್ನು ಮಾತ್ರ. ಇನ್ನೂ ಎಷ್ಟೋ ಜ್ಞಾತ, ಅಜ್ಞಾತ ಅಂಶಗಳು - ಕಾರಂತರು - ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದುವು ಇವೆ. ನನಗನಿಸುತ್ತದೆ; ತಮ್ಮ ಹಿಂದಿನ ಜನ್ಮದಲ್ಲಿ ಕಾರಂತರು ಉತ್ತರ ಕರ್ನಾಟಕದಲ್ಲಿಯೆ ಜನಿಸಿ, ಬಾಳಿರಬೇಕು ಎಂದು!



## ಅನುಬಂಧ (ಅ)

# ಅಂಕಣಕಾರ - ಪಂಜೆ ಮಂಗೇಶರಾಯರು

ಪಂಜೆ ಮಂಗೇಶರಾಯರ ಸಾಹಿತ್ಯಿಕ ಮೌಲ್ಯವನ್ನು ಮೊದಲಿಗೆ ಬೆಳಕಿಗೆ ತಂದವರು ಅವರ ಶಿಷ್ಯರಾಗಿದ್ದ ಗೋವಿಂದ ಪೈಗಳು. ಕ್ರಿ.ಶ. ೧೯೦೦ರಲ್ಲಿ ಆರಂಭವಾದ ಸುವಾಸಿನಿಯಲ್ಲಿ ಅವರ ಕತೆಗಳು ಮತ್ತು ಕವಿತೆಗಳು ಪ್ರಕಟವಾದದ್ದನ್ನು ಎತ್ತಿ ತೋರಿಸಿ, ಪಂಜೆಯವರೇ ಕನ್ನಡ ಸಣ್ಣಕತೆಗಳ ಜನಕರು ಎಂಬುದನ್ನು ಸಾಬೀತು ಪಡಿಸಿದರು. ಅದರಂತೆ ಮಕ್ಕಳಿಗಾಗಿ ಪದ್ಯಗಳ ರಚನೆ, ಇಂಗ್ಲಿಶ್ ಕವಿತೆಗಳ ಅನುವಾದ - ಈ ವಿಷಯಗಳಲ್ಲಿಯೂ ಅವರು ಮೊದಲಿಗರೆಂಬುದನ್ನು ಸ್ಪಷ್ಟಪಡಿಸಿದರು. ಒಂದರ್ಥದಲ್ಲಿ ಪೈಗಳು ಗುರುಋಣವನ್ನು ತೀರಿಸಿದ್ದಾರೆನ್ನಬಹುದು.

ಹೊಸಗನ್ನಡ ಸಾಹಿತ್ಯಕ್ಕೆ ಪಂಜೆಯವರ ಇನ್ನೊಂದು ಕೊಡುಗೆ ಹರಟೆಗಳದ್ದು. ಗೋವಿಂದ ಪೈಗಳು (ಶಿವರಾಮ ಕಾರಂತ, ವಿ.ಸೀ. ಅವರೊಡನೆ) ಸಂಪಾದಿಸಿದ 'ಪಂಜೆಯವರ ನೆನಪಿಗಾಗಿ' (೧೯೩೭) ಎಂಬ ಸಂಸ್ಮರಣ ಗ್ರಂಥದಲ್ಲಿ ಈ ಅಂಶವನ್ನು ಪ್ರಸ್ತಾಪಿಸಿದ್ದಾರೆ. ಅವರನ್ನು ಕುರಿತ ತಮ್ಮ ವಿಸ್ತಾರವಾದ ಲೇಖದಲ್ಲಿ ಹೀಗೆ ಬರೆದಿದ್ದಾರೆ :

"ಸತ್ಯದೀಪಿಕೆ ಎಂಬ ಪತ್ರಿಕೆಯಲ್ಲಿ ಹರಟೆಯ ಮಲ್ಲ ಎಂಬ ಗೂಢನಾಮದಿಂದ ನಿತ್ಯ ನೈಮಿತ್ತಿಕ ವಿಷಯಗಳನ್ನು ಕುರಿತು ಬರೆಯುತ್ತಿದ್ದ ಲೇಖಗಳು ಬಹಳ ಸೊಗಸಾಗಿದ್ದುವು. ಅವುಗಳಲ್ಲಿ 'ಹಲ್ಲಿ' 'ಬಂದಳಿಕೆ' ಎಂಬ ಎರಡು ಲೇಖಗಳು [ಇನ್ನೂ ಇದ್ದುವೇನೊ ನೆನಪಿಗೆ ಬಾರದು] ಉತ್ತಮವಾಗಿದ್ದುವು. ಅವುಗಳ ಪ್ರತಿಗಳನ್ನು ದೊರೆಕೊಳ್ಳಲಾದರೆ ಅವು ಮರಳಿ ಪ್ರಕಟಿಸತಕ್ಕುವೇ"

ಪೈಗಳು ಪಂಜೆಯವರ ಸ್ಮರಣಗ್ರಂಥದಲ್ಲಿ ಅವರ ಒಂಬತ್ತು ಹರಟೆಗಳನ್ನೂ 'ಹಲ್ಲಿ' ಎಂಬುದನ್ನೂ ಮರುಮುದ್ರಿಸಿದ್ದಾರೆ. ಪಂಜೆ ಲೇಖನಗಳ ನಾಲ್ಕೂ ಸಂಪುಟಗಳು ಆಮೇಲೆ ಹೊರಬಂದುವಷ್ಟೆ(೧೯೭೧). ಮೂರನೆಯ ಸಂಪುಟದಲ್ಲಿ ಇವೆಲ್ಲ ಪುನರ್ಮುದ್ರಣಗೊಂಡಿವೆ.

ಸತ್ಯದೀಪಿಕೆಯಲ್ಲಿ ಅವರ ಇನ್ನೂ ಕೆಲವು ಲೇಖಗಳಿದ್ದುವೆಂಬ ಪೈಗಳ ಹೇಳಿಕೆಯ ಜಾಡನ್ನು ಹಿಡಿದು ತಡಕಾಡಿದಾಗ, ಸತ್ಯದೀಪಿಕೆಯ ಕೆಲವು ಸಂಚಿಕೆಗಳು ದೊರೆತು,

ಪಂಜೆಯವರದೆಂದು ಹೇಳಬಹುದಾದ ಐದು ಲಘು ಬರಹಗಳು ದೊರೆತವು. ಇಂತು ಹರಟೆಯ ಮಲ್ಲನನ್ನು ಅರಸಿಕೊಂಡು ಹೋದಾಗ ಇನ್ನೊಬ್ಬ ಮಲ್ಲ ಸಿಕ್ಕಿಬಿದ್ದ. ಅವನ ಹೆಸರು ವಿಕಟಮಲ್ಲ'.

ಮೊದಲಿನ ಒಂಬತ್ತು ಹರಟೆಗಳನ್ನೂ, ಈಗ ದೊರೆತ ಐದು ಹರಟೆಗಳನ್ನೂ ಜೋಡಿಸುವ ಕೊಂಡಿ ಒಂದಿದೆ. ಅದುವೆ, ಈ ಒಂದು ಪತ್ರ - ದಿ. ೧೩-೭-೧೯೦೭ರಲ್ಲಿ ಪ್ರಕಟವಾದದ್ದು.

ಎಲ್ಲೈ 'ಸತ್ಯದೀಪಿಕೆ'ಯೇ ನಿನ್ನ ಜಾಜ್ವಲ್ಯಮಾನವಾದ ಪ್ರಕಾಶದಿಂದ ಮ.ರಾ. ರಾ. 'ರಾಮಪಂ' ಅವರು ಹಿಂದೊಂದು ಸಲ ನಿದ್ದೆಯಿಂದೆದ್ದು ಕುಳಿತು, ತೂಕಡಿಸುತ್ತಾ ಏನೇನೋ ಹಲುಬಿ ಈಗ ಪುನಹ ಸದ್ದಿಲ್ಲದೆ ನಿದ್ದೆ ಹೋಗುತ್ತಿರುವರು. ಇವರ ಲೇಖನವನ್ನು ಬಹು ಜನರು ಚಾತಕದಿಂದ ನಿರೀಕ್ಷಿಸುತ್ತಿರುವರು. ಆದ್ದರಿಂದ ಇನ್ನಾದರೂ ಮ. ರಾ. ರಾ. 'ರಾಮಪಂ' ಅವರು ತೂಕಡಿಸದೇ ತಮಗೆ ಬೇಕಾದ ಹಾಗೆ ಲೋಕಸೇವೆಯನ್ನು ಮಾಡಲಿ, ಸುಮ್ಮನೇ ಬಹುಜನರ ಆಶಾಭಂಗವನ್ನು ಮಾಡುವದು R.M.P. ಅವರಿಗೆ ಭೂಷಣವಲ್ಲ.

(ಸತ್ಯದೀಪಿಕೆ, ಸಂ. ೧೧. ನಂ. ೨) - ಇತಿ ಕನ್ನಡ ರಸಿಕ

(ರಾಮಪಂ ಎಂಬುದು ಪಂಜೆಯವರ ಹಲವಾರು ಗೂಢನಾಮಗಳಲ್ಲಿ ಒಂದು.)

ಮೇಲ್ಕಂಡ ಪತ್ರದ ಪರಿಣಾಮ ಮಂಗಳೂರಿನಿಂದ ತುಸು ದೂರದಲ್ಲಿದ್ದ ಪಂಜೆಯವರ ಮೇಲೆ ಬೇಗನೆ ಆದಂತೆ ಕಾಣಲಿಲ್ಲ. ೬-೭ ತಿಂಗಳು ಗತಿಸಿ ಹೋದದ್ದರಿಂದ 'ಹರಟೆಯ ಮಲ್ಲ'ನನ್ನು ಬದಿಗಿರಿಸಿ ಪಂಜೆಯವರು ವಿಕಟಮಲ್ಲರಾದರೆ? ಈ ಹೊಸ ಅಂಕಿತದ ವಿಕಟಮಲ್ಲನ ಹೆಸರಿನಲ್ಲಿ ದೊರೆತ ಮೊದಲ ಪತ್ರರೂಪೀ ಲೇಖ ಹೀಗಿದೆ.

ದಿ. ೮-೨-೧೯೦೭

ಎಲ್ಲೈ ಸತ್ಯದೀಪಿಕಾ ಪತ್ರಕರ್ತರೇ, ಸಲಾಮು! ಮಾಜಿ ಮಲ್ಲರಿಗೆ ನನ್ನ ಸಾಷ್ಟಾಂಗ ಪ್ರಣಾಮ. ಹರಟೆ ಮಲ್ಲರು ಅಂತರ್ಧಾನವಾದರು ಎಂದು ಕೆಲವರೂ ಅಮರಾವತಿಗೆ (ಸ್ವರ್ಗಕ್ಕೆ) ತೆರಳಿದರು ಎಂದು ಅನೇಕರೂ ತರ್ಕಿಸುತ್ತಾರೆ. ಉಭಯ ಪಕ್ಷದವರ ಮಾತನ್ನು ನಂಬಲಿಕ್ಕೆ ಇಂಬು ಇರುವುದಿಲ್ಲ. ನಾನಾದರೊ ಪ್ರಾಚೀನ ಮಲ್ಲರ ದಾಯವಾದಿ. ನಮ್ಮ ಪೈಕ ಒಂದೇ. ಇವರ ವಿಷಯವಾಗಿ ನನಗೆ ಗೊತ್ತಿರುವಷ್ಟು, ಪತ್ರಿಕಾಕರ್ತರೇ, ನಿಮಗೆ ಸಹ ಗೊತ್ತಿಲ್ಲ... ಪೂರ್ವದ ಹರಟೆಮಲ್ಲರಿಗೂ ನನಗೂ ಅಣ್ಣಪ್ಪ ಐಗಳವರೇ ಓನಾಮ ಹೇಳಿಕೊಟ್ಟರು. ಪಾಠಶಾಲೆಯ ಸಮಯವಾದ ನಂತರ ನಾವು ಕಳ್ಳಾಟ, ಸುಳ್ಳಾಟ, ಗುದ್ದಾಟ ಈ ಮೂರು ಆಟಗಳನ್ನು ಆಡುತ್ತಿದ್ದೆವು. ಮೊದಲಿನ ಮಲ್ಲರು ಬಡಿಯಲಿಕ್ಕೆ ಹುಶಾರು. ನಾನು ಹೊಡೆಯಲಿಕ್ಕೆ ಹುಶಾರು."

ಇನ್ನೊಂದು ಬರಹದಲ್ಲಿ, "ದೀಪದ ಸುತ್ತು ಬೆಳಕು, ಅಡಿಗೆ (ಕೆಳಗೆ) ಮಾತ್ರ ಕತ್ತಲೆ' ಎಂದು ಮಾಜೀ ರಾವಬಹಾದೂರ ಹರಟೆಮಲ್ಲರು ವಿಕಟಸಂವತ್ಸರದಲ್ಲಿ ಹೇಳಿದರು. ಆದರೆ

ಈ ನುಡಿಗೆ ನಾನು ಒಪ್ಪಲಾರೆ" ಎಂಬ ಮಾತಿದೆ.

ಏನಿದರ ಇಂಗಿತ? ವಿಕಟಮಲ್ಲನು ತೋರಿಕೆಗೆ ತಾನು ಬೇರೆ - ಎಂದು ಹೇಳಹೊರಟರೂ ಇಬ್ಬರೂ ಒಂದೇ ಎಂಬುದನ್ನು ಸುಲಭವಾಗಿ ಗುರುತಿಸಬಹುದು. ಇದಕ್ಕೆ ಬೇರೆ ಪುರಾವೆಗಳನ್ನು ಒದಗಿಸೋಣ. ಈ ೯+೫ ಹರಟೆಗಳಲ್ಲಿ ಸತ್ಯದೀಪಿಕೆಯ ಸಂಪಾದಕರನ್ನು ಸಂಬೋಧಿಸಿದ್ದರ ಮಾದರಿ ಕೊಡುವೆ. ಎರಡರಿಂದಲೂ ಆಯ್ದುಕೊಂಡವುಗಳು.

ಸ್ವಾಮೀ ಸತ್ಯದೀಪಿಕಾಗ್ನಿಹೋತ್ರಿಗಳೇ
ಸ್ವಾಮೀ ಸತ್ಯವಾದಿಗಳೇ
ಅಯ್ಯಾ ಸಮಾಚಾರ ಸಾಮ್ರಾಜ್ಯ ಭೂಪತಿಗಳೇ
ಅಯ್ಯಾ ಪತ್ರಿಕಾ ಮುಖತಿಲಕರೇ.

ಇನ್ನೊಂದು ಪುರಾವೆ ಎಂದರೆ ಹರಟೆ ಮಲ್ಲ; ವಿಕಟಮಲ್ಲ ಇಬ್ಬರಲ್ಲೂ ಅನುಪ್ರಾಸದ ಹೆಚ್ಚಳವಿರುವ ಶೈಲಿಯು ಒಂದೇ ತೆರನಾದುದು. ಉದಾಹರಣೆಯಾಗಿ ಇವನ್ನು ಗಮನಿಸಬಹುದು.

ಹರಟೆಮಲ್ಲ ಉವಾಚ (ಉಪಾಧ್ಯಾಯರು ಮತ್ತು ಪೋಲೀಸರನ್ನು ಕುರಿತು):

ಮಾಸ್ತರನು ಪಾಸು ಮಾಡಬೇಕು; ಕನ್‌ಸ್ಟೇಬಲನು ತಪಾಸು ಮಾಡಬೇಕು. ಪೋಲೀಸಿನವರಿಗೆ ಕೈತುಂಬ ಗಂಟಾದರೂ ಉಂಟು. ಉಪಾಧ್ಯಾಯನಿಗೆ ಬೆರಳು ಗಂಟುಗಳಲ್ಲದೆ ಮತ್ತೇನೂ ಇಲ್ಲ.

ವಿಕಟಮಲ್ಲ ಉವಾಚ :

ಕಳೆದ ವರ್ಷದ ಮಾತೃಕ್ಲೇಶ (ಮೆಟ್ರಿಕ್ಯುಲೇಶನ್!) ಯಜ್ಞದಲ್ಲಿ ಅನೇಕಾನೇಕ ಹುಡುಗರನ್ನು ಆಹುತಿಯಾಗಿ ಕೊಟ್ಟರಂತೆ. ಇಂಥವರ ಪಿತೃಗಳಿಗೆಲ್ಲಾ ಮನೋಕ್ಲೇಶ. ದೊಡ್ಡ ಉಪಾಧ್ಯಾಯರಿಗೆ ಪಶ್ಚಾತ್ತಾಪ. ಸಣ್ಣ ಉಪಾಧ್ಯಾಯರಿಗೆ ಸಂತಾಪ. ಹುಡುಗರ ಪ್ರಲಾಪ.

ಆದ್ದರಿಂದ ಹರಟೆ ಮಲ್ಲ, ವಿಕಟಮಲ್ಲ ಎಂಬ ಅಂಕಿತಗಳಲ್ಲಿ ಭೇದವೇನೂ ಇಲ್ಲ. ಒಬ್ಬರೇ ವ್ಯಕ್ತಿ; ಅವರೇ ಪಂಜೆಯವರು. ಪೈಗಳು ಪ್ರಸಿದ್ಧಿಸಿದ ಹರಟೆಗಳಿಗೆ ತಾರೀಖನ್ನು ಕೊಟ್ಟಿಲ್ಲವಾದರೂ ಅವು ಒಂದು ವರ್ಷದ ಅವಧಿಯಲ್ಲಿ ಬರೆದವುಗಳು. ಆದರೆ ವಿಕಟಮಲ್ಲನ ಹೆಸರಿನಲ್ಲಿ ಇರುವ ೫ ಬರಹಗಳಿಗೆ ಮಾತ್ರ ತಾರೀಖುಗಳಿವೆ: **೮-೨-೧೯೦೭, ೧೫-೨-೧೯೦೭, ೧-೩-೧೯೦೭, ೧೫-೩-೧೯೦೭, ೨೨-೩-೧೯೦೭ ಮತ್ತು ೧೯-೪-೧೯೦೭.**

ಸತ್ಯದೀಪಿಕೆಯು ವಾರಪತ್ರಿಕೆಯಾಗಿದ್ದು, ಪಂಜೆಯವರು ಪ್ರತಿವಾರ ಎಂಬಂತೆ ಕ್ಲುಪ್ತವಾಗಿ ಅಲ್ಲದಿದ್ದರೂ ಕಾಲಕಾಲಕ್ಕೆ ತಮಗೆ ಬರೆಯುವ ಸಮಯ ಇದ್ದಾಗ ಮಾತ್ರ ಲೇಖನ ಕಳಿಸುತ್ತಿದ್ದರೆಂದು ಇದರಿಂದ ಕಂಡುಬರುತ್ತದೆ.

"ನಿತ್ಯ ನೈಮಿತ್ತಿಕ ವಿಚಾರದ ಲೇಖನಗಳು ಲಘುಹಾಸ್ಯದಿಂದಲೂ ಕಟುವಾದ ಟೀಕೆಯಿಂದಲೂ ಕೂಡಿದವುಗಳಾಗಿದ್ದವು" ಎಂದು ಗೋವಿಂದ ಪೈಗಳು ಹೇಳಿದ್ದಾರಷ್ಟೆ.

ಆ ನಿತ್ಯ ನೈಮಿತ್ತಿಕ ವಿಚಾರಗಳು ಯಾವುವು ಎಂಬುದನ್ನು ತುಸು ನೋಡುವಾ.

ಅವರು ಎತ್ತಿಕೊಂಡ ನೈಮಿತ್ತಿಕ ವಿಚಾರಗಳು ಆಗಾಗ ಮಂಗಳೂರು ಮನಸೀಪಾಲಟಿಗೆ ಸಂಬಂಧಿಸಿದವಾಗಿದ್ದವು. ಅನಾಥ ಶಿಶುವೊಂದು ಕದ್ರಿಯ ರಸ್ತೆಯಲ್ಲಿ ಕಂಡುಬಂದಿತಂತೆ. ಅದಕ್ಕೆ ಸಂಬಂಧಿಸಿ ಹೀಗೆ ಇವರ ಟೀಕೆ! "ಹಂದಿಯು ಕೂಡಾ ಹೊರಳಾಡದ ಮುನಿಸಿಪಾಲ್ ರಸ್ತೆಯು ನಿನ್ನ ಮರಣಶಯ್ಯೆಯಾಯಿತೆ?'

"ಹಂಪನಕಟ್ಟೆಯಿಂದ ಮಡಿಕೇರಿಗುಡ್ಡದವರೆಗೆ ರಸ್ತೆ ಎಲ್ಲಾ ಹುಣ್ಣು - ಹುಣ್ಣಾಗಿ ಕೀವು ನಿಂತಿದೆ. ಸರದಾರರ ಗಾಡಿ ಹೋಗುವ ರಸ್ತೆಗೆ ಈ ಅವಸ್ಥೆ. ಮಿಕ್ಕ ಹಾದಿಗಳ ಗತಿ ಕೇಳುವುದೇನು?"

ಮಗುದೊಂದು ಕಡೆ ಸರ್ವಜ್ಞನ ವಚನವೊಂದರ ಅಣಕ ಮಾಡಿ ಬರೀತಾರೆ:

ಮೂಕ ಮುನ್ಸಿಪಾಲಿಟಿಗೆ ನೂರ್ಕಾಸು ಕೊಟ್ಟರೂ
ಗೋರ್ಕಲ್ಲು ಕಟ್ಟೆಂದು ಬೇಡಿದರು - ಅದು ತಾನು
ನೀರ್ಕುಡಿಯಲಹುದೆ ಸರ್ವಜ್ಞ!

ಸಂದರ್ಭ: ಧರ್ಮಸ್ಥಳದ ಮಂಜಯ್ಯ ಹೆಗ್ಗಡೆಯ್ಯುವರು ಮತ್ತು ಮಂಜೇಶ್ವರದ ರಾಮಕೃಷ್ಣರಾಯರು ಸಾರ್ವಜನಿಕ ಸೌಕರ್ಯಗಳಿಗೆಂದು ದಾನವಾಗಿ ಕೊಟ್ಟ ಹಣದ ಉಪಯೋಗವನ್ನು ನಗರಸಭೆ ಮಾಡದಿದ್ದುದು.

ಆ ಕಾಲಕ್ಕೆ ಮಂಗಳೂರು ಮತ್ತು ಸುತ್ತುಮುತ್ತ ಪ್ಲೇಗಿನ, ಅದರ ಇಲಿಗಳ ಹಾವಳಿ. ಅದನ್ನು ನಾನಾ ರೀತಿಯಲ್ಲಿ ಲೇವಡಿ ಮಾಡಿದ್ದಾರೆ. ಮಾದರಿಗಳು : 'ಅಪ್ಪಣೆ ಇಲ್ಲದೆ ಒಳಗೆ ಬರಕೂಡದು' ಎಂಬ ಬೋರ್ಡು ಹಾಕಿದೆ. ಆದರೇನು ಪ್ಲೇಗು ಜ್ವರ ಒಳಗೆ ಬಂದು ಬಿಟ್ಟಿತು'.

ಮಂಗಳೂರಿಗೆ ಸರ್ಕಸ್ ಕಂಪನಿಯೊಂದು ಬಂದಿತಂತೆ. ಸರ್ಕಸ್ಸಿನಲ್ಲಿ ಹುಲಿಯಾಟವೇನೊ ಇದೆ. ಇಲಿಯಾಟ ಇಲ್ಲವಲ್ಲ! ಹಾಗೆಂದು ಇವರಿಗೆ ಬೇಸರವೆ? ಇಲ್ಲ, ಇಲ್ಲ. ಆ ಆಟವನ್ನು ಮುನಸಿಪಾಲಟಿಯವರು ಆಡಿಸುತ್ತಾರೆ ಎಂಬುದಾಗಿ ವಿಡಂಬಿಸಿದ್ದಾರೆ.

ಇದೇ ವೇಳೆಗೆ ಉಡುಪಿಯಲ್ಲಿ 'ಶ್ರೀಕೃಷ್ಣಸೂಕ್ತಿ' ಎಂಬ ಪತ್ರಿಕೆ ಆರಂಭವಾಯಿತು. ಅದರ ಬಗ್ಗೆ ಇವರಿಗೆ ಅಭಿಮಾನವಿದೆ. ಅನುತಾಪವೂ ಕೂಡ. ಪಂಜೆಯವರು ಹೀಗೆ ಉದ್ಗಾರವೆತ್ತಿದ್ದಾರೆ.

"ಮಾಸಪತ್ರಗಳಿಗೆ ಹುಟ್ಟುವಾಗಲೇ ಹೊಟ್ಟೆಯೊಳಗೆ ಕೂರ್ಮವುಂಟು. ತೆಲುಕಾಲಿನ ಡುಬ್ಬ ಹೊಟ್ಟೆಯ ಕೂಸನ್ನು ಯಾರೂ ಎತ್ತಿಕೊಳ್ಳುವುದಿಲ್ಲ. ನಮ್ಮ ಸುಬ್ಬರಾಯರ ಮಾಸಿಕ ಪತ್ರವು ಹೊಟ್ಟೆಯಲ್ಲಿ ಅಲಾಬಿ ವೇಷದ ಹಾಗಾಗದಂತೆಯೂ ಬಾಲ್ಯದಲ್ಲಿಯೆ ಮುಪ್ಪಾಗದಂತೆಯೂ ಆಶೀರ್ವದಿಸೋಣ."

ಇಂಥ ಹತ್ತಾರು ಸ್ಥಾನಿಕ ಸುದ್ದಿಗಳ ಬಗ್ಗೆ ಪಂಜೆಯವರು ತಮ್ಮದೇ

ವಿಚಾರಲಹರಿಯನ್ನು ಹರಿಬಿಟ್ಟಿದ್ದಾರೆ. ಉದಾ.ಗೆ ಸರಕಾರೀ ಅಧಿಕಾರಿಗಳ ಆಗಮನ, ನಿರ್ಗಮನ (ವರ್ಗಾವರ್ಗಿ); ಶಾಲೆಗಳಿಗೆ ಸಂಬಂಧಿಸಿದಂತೆ ಮಾಸ್ತರರು, ಪರೀಕ್ಷೆಗಳು; ಪೋಲೀಸ್ ಇಲಾಖೆ, ಕೃಷ್ಣಾಷ್ಟಮಿ - ಏನೆಲ್ಲ ವಿಷಯಗಳ ಪ್ರಸ್ತಾಪವಿದೆ.

ದೇಶದ ರಾಜಕೀಯವೂ ಯಥೇಚ್ಛವಾಗಿ ಕಾಣಿಸಿಕೊಂಡಿದೆ. ಲಾಲಿ ಎನ್ನುವವ ದಕ್ಷಿಣ ಆಫ್ರಿಕದಿಂದ ಮದ್ರಾಸಿಗೆ ಬಂದ - ಗವರ್ನರ್ ಆಗಿ. "ಆಫ್ರಿಕದ ಸಿಂಹಗಳನ್ನು ಶಿಕಾರಿ ಮಾಡಿ ಅಭ್ಯಾಸವಿದ್ದವರಿಗೆ ಹಿಂದುಸ್ತಾನದ ಜನಗಳ ಸ್ಥಿತಿ - ತಿಳಿಯಲಾರದು" ಎಂದು ಬರೆದಿದ್ದಾರೆ. ಇದೇ ಕಾಲದಲ್ಲಿ, ಬಂಗಾಲವನ್ನು ಇಬ್ಭಾಗ ಮಾಡಹೊರಟು ಕುಪ್ರಸಿದ್ಧನಾದ ಕರ್ಝನ್ ವೈಸರಾಯನ ನಿವೃತ್ತಿಯ ಬಗ್ಗೆ ಕಟುವಾಗಿಯೇ ಬರೆದಿದ್ದಾರೆ. ಅವನ ನಿವೃತ್ತಿಗೆ ಇನ್ನೊಂದು ಕಾರಣ ಸೇನಾವರಿಷ್ಠ ಕಿಚನರ್‌ಗೂ ಇವನಿಗೂ ನಡೆದ ಘರ್ಷಣೆ. "ಕರ್ಜನ್ ದೊರೆಯು ಹಿಂದುಸ್ತಾನದವರನ್ನು ಅಸತ್ಯವಾದಿಗಳೆಂದು" ದೂರಿದ್ದರಿಂದಲೂ ಅವರನ್ನು ತಳ್ಳಿ ದೂಡಿದರೆಂಬುದನ್ನು ಕಾಣಿಸಿದ್ದಾರೆ.

ಇಂಗ್ಲಂಡದ ಆಗಿನ ರಾಜನಾದ ಎಡ್ವರ್ಡನ ಯುವರಾಜನಾದ ಪಂಚಮ ಜಾರ್ಜ್ ಭಾರತಕ್ಕೆ ದರ್ಶನ ಕೊಟ್ಟದ್ದು ಇದೇ ಕಾಲದಲ್ಲಿ. ಬಂಗಾಲದಲ್ಲಿ ಈ ಕುರಿತು ವಿರೋಧ ವ್ಯಕ್ತವಾಯಿತಾಗಿ ಹೇಳಿದ್ದಾರೆ. ಆಮೇಲೆ ಬಂತು ಇವರ ಟೀಕೆ:

"ನಮ್ಮ ಯುವರಾಜರು ಯಾಕ ಬಂದಿದ್ದಾರೆಂಬುದು ಗೊತ್ತುಂಟೊ? ಅವರು ಈ ದೇಶದ ಸತ್ಕಾರವನ್ನು ಪಡೆಯಲು ಬಂದಿರುವುದಲ್ಲದೆ ಪ್ರಜೆಗಳ ಚೀತ್ಕಾರವನ್ನು ಕೇಳುವುದಕ್ಕಲ್ಲ, ನಮ್ಮ ಆಸ್ತಿಯ ಗಡಿಕಲ್ಲು ಸರಿಯುಂಟೊ? ಬತ್ತದ ಬೆಳೆ ಚೆನ್ನಾಗಿದೆಯ? ಒಕ್ಕಲು ಸಕ್ಕಲು ನೆಟ್ಟಗಿದ್ದಾರೊ, ಮುಖ್ಯವಾಗಿ ನೇಗಿಲನ್ನು ಕೋಣಗಳು ಸರಿಯಾಗಿ ಹೊರುತ್ತವೊ, ನೋಡಿಕೊಂಡು ಬರಬೇಕೆಂದು ನಮ್ಮ ಎಡ್ವರ್ಡ್ ಚಕ್ರವರ್ತಿಯವರು ಚೊಚ್ಚಲು ಮಗನನ್ನು ಇಲ್ಲಿಗೆ ಕಳುಹಿಸಿದ್ದಾರೆ."

ಮೇಲಣ ೧೪ ಲಘು ಬರಹಗಳನ್ನು ಶತಶಃ ಹರಟೆಗಳೇ ಎಂದು ಹೇಳಲಿಕ್ಕಾದೀತೆ?' ನೋಡುವಾ: ಹರಟೆಗಳ ಲಕ್ಷಣಗಳೆಂದು ಈ ಕೆಳಗಿನ ಅಂಶಗಳು ಸ್ವೀಕೃತವಾಗಿವೆ. ಪ್ರಚಲಿತ ವಿಷಯ ಅಥವಾ ಘಟನೆಯೊಂದನ್ನು ನಿಮಿತ್ತ ಮಾಡಿಕೊಂಡು ಮುಕ್ತ ವಿಚಾರಗಳನ್ನು ಹರಿಬಿಡುವುದು; ವಿಷಯ ದೊಡ್ಡದು ಮಾಡುವುದು; ಒಂದಷ್ಟು ಅನುಭವಕಥನ; ಉಪಕಥೆಗಳು; ಬೇರೆಡೆಯಿಂದ ಅವತರಣಿಕೆಗಳು ; ಸಡಿಲು ಬಂಧ: ಒಂದಿಷ್ಟು ವಾಚಾಳಿತನ; ಅತಿಶಯೋಕ್ತಿ; ವಿರೋಧಾಭಾಸ; ಶಬ್ದಶ್ಲೇಷೆ; ಸಡಿಲು ಬಂಧ ; ಹಾಸ್ಯ ಮತ್ತು ವಿಡಂಬನೆ.

ಜೊತೆಗೆ, ಇವು ಕೆಲವನ್ನು ಸೇರಿಸಬೇಕು: ಒಂದನೆಯದು, ಆಯ್ದುಕೊಂಡ ವಸ್ತುವಿಗೆ ತಕ್ಕುದಾದ ಶೀರ್ಷಿಕೆ ಇರುತ್ತದೆ. ಎರಡನೆಯದು, ಪುಟಗಳ ಮಿತಿ - ಇಲ್ಲ; ಮೂರರಿಂದ ಮೂವತ್ತರವರೆಗೂ ಆದೀತು. ಮೂರನೆಯದು, ನಿಯತವಾದ ಕಾಲದ ನಿರ್ಬಂಧವಿಲ್ಲ. ಎಂದರೆ ಮನಸ್ಸಿಗೆ ತೋಚಿದಾಗ, ಬೇಕೆಂದಾಗ ಬರೆಯಬಹುದು.

## ಅಂಕಣ ಬರಹ

ಹರಟೆಗಳ ಈ ಸ್ವರೂಪಕ್ಕೂ ಅಂಕಣ ಲೇಖನದಕ್ಕೂ ಏನು ಹೋಲಿಕೆ ಇದೆ - ಎಂಬುದನ್ನು ನೋಡೋಣ, ಹರಟೆಗಾಗಿ ನಿಗದಿತವಾದಂಥ ಮುಕ್ತ ವಿಚಾರ ಲಹರಿ, ಹಾಸ್ಯ, ವಿಡಂಬನೆ ಇವೆಲ್ಲ ಅಂಕಣ ಬರಹಗಳಲ್ಲಿಯೂ ಇರಬಹುದು. ಆದರೆ ಅಂಕಣಕಾರ ಹರಟೆ ಹೊಡೆಯುವುದಿಲ್ಲ. ಎಂದರೆ ಎಲ್ಲೆಲ್ಲಿಯೊ ತನ್ನ ವಿಚಾರದ ಕುದುರೆಯನ್ನು ಓಡಿಸಲಾರ. ಕಾರಣವೆಂದರೆ ತಾನು ಬರೆಯಲಿರುವ ಪತ್ರಿಕೆಯಲ್ಲಿ ಲಭ್ಯವಿರುವ ಅಥವಾ ಗೊತ್ತು ಮಾಡಿದ ಸೀಮಿತಸ್ಥಳದಲ್ಲಿ ತನ್ನ ಬರವಣಿಗೆಯನ್ನು ಮುಗಿಸಬೇಕು.

ಇದಕ್ಕಿಂತ ಮಹತ್ವದ್ದೆಂದರೆ ನಿಯತತೆ ವಾರಪತ್ರಿಕೆಯಾದರೆ ವಾರಕ್ಕೊಮ್ಮೆ, ಮಾಸಪತ್ರಿಕೆಯಾದರೆ ತಿಂಗಳಿಗೊಮ್ಮೆ ಅಂಕಣ ಲೇಖನಗಳು ಹೊರಬರ್ತಾ ಇರಬೇಕು. ಈ ನಿಯತತೆಯೇ ಅಂಕಣ ಬರಹದ ಜೀವಾಳವಾಗಿದೆ. ಅಂದಾಗ ಪ್ರಚಲಿತ ವಿಷಯವನ್ನೋ, ಸಂದರ್ಭಕ್ಕೆ ತಕ್ಕದಾದದ್ದನ್ನೋ ಸುರುವಿಗೆ ಇಟ್ಟು ಪುಟದ ಮಿತಿಯಲ್ಲಿ ತನ್ನ ಮುಕ್ತವಿಚಾರವನ್ನು ಹರಿಬಿಡುತ್ತಾನೆ; ಹೀಗಾಗಿ ಅವನ ಧೋರಣೆ, ಸ್ವಭಾವ ವಿಶೇಷತೆ - ಇವುಗಳ ಛಾಪು ತಪ್ಪದೇ ಮೂಡಿರುತ್ತದೆ. ಸಾಂದರ್ಭಿಕ ನಿಮಿತ್ತವಿರುವುದರಿಂದ ಒಂದು ಅಂಕಣ ಬರಹದಲ್ಲಿ ಒಂದಕ್ಕಿಂತ ಹೆಚ್ಚು ವಿಷಯಗಳು ಅವಕಾಶವನ್ನು ಪಡೆಯಬಹುದು. ಈ ವೈವಿಧ್ಯವೂ ಅಂಕಣಬರಹಗಳ ವೈಶಿಷ್ಟ್ಯವೆನ್ನಬೇಕು. ಹಾಗಾಗಿ 'ಓದುಗರೊಡನೆ ಹರಟೆ' (ಪಾ. ವೆಂ. ಆಚಾರ್ಯ) 'ಲೋಕಾಭಿರಾಮ' (ಕು.ಶಿ. ಹರಿದಾಸ ಭಟ್ಟರದು) ಎಂಬ general ಅಂಕಣದಲ್ಲಿ ಬರಹಗಳು ಪ್ರಕಟಗೊಳ್ಳಬಹುದು.

ಅಂಕಣ ಬರಹವನ್ನು ರೂಢಿಸಿದವರು ನಿರಂಜನರು (೧೯೪೦ರಿಂದ). ಅನಂತರದ ದೊಡ್ಡ ಹೆಸರು ಹಾ. ಮಾ. ನಾಯಕರದು. ಇವರ 'ಸಂಪ್ರತಿ' - ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾದೆಮಿಯ ಪ್ರಶಸ್ತಿ ದೊರಕಿ, ಅಂಕಣ ಬರಹಕ್ಕೆ ಶಾಶ್ವತ ಮನ್ನಣೆ ದೊರೆತಂತಾಯಿತು. ಆದರೆ ನಿರಂಜನರಿಗಿಂತ ಪೂರ್ವದಲ್ಲಿ ಎಂದರೆ ೧೯೨೦ರ ದಶಕದಲ್ಲಿ ಕಂಠೀರವ ಪತ್ರಿಕೆಯ ಹುರಳಿ ಭೀಮರಾಯರು 'ಗುಂಡನ ಗಜೇಟು' ಎಂಬ ಶೀರ್ಷಿಕೆಯಡಿಯಲ್ಲಿ ಮತ್ತು 'ರಾಷ್ಟ್ರಬಂಧು' ಪತ್ರಿಕೆಯ ಕಡೆಂಗೋಡ್ಲು ಶಂಕರಭಟ್ಟರು 'ಅಲ್ಲಲ್ಲಿ ಇಷ್ಟಿಷ್ಟು' ಎಂಬ ಶೀರ್ಷಿಕೆಯಡಿಯಲ್ಲಿ, ದೀರ್ಘಕಾಲದವರೆಗೆ ಅಂಕಣ ಬರಹಗಳನ್ನು ಕೊಟ್ಟದ್ದನ್ನು ಕಾಸರಗೋಡಿನ ಯು. ಮಹೇಶ್ವರಿಯವರು ವಿಶದಪಡಿಸಿದ್ದಾರೆ. (ಮಧುರವೇ ಕಾರಣ', ೨೦೦೪. ಪು. ೧೮೭)

ಇತ್ತ ಪಂಜೆಯವರು ಮುಖ್ಯವಾಗಿ ದಿನಾಂಕಗಳನ್ನು ಕಾಣಿಸಿ ಬರೆದಿದ್ದಾರೆ. (ಕೆಲವಕ್ಕೆ ದಿನಾಂಕಗಳು ಸದ್ಯ ಲಭ್ಯವಿಲ್ಲ. ಗೋವಿಂದ ಪೈಗಳ ಲೇಖನದಲ್ಲಿಯೂ ಕೊಟ್ಟಿಲ್ಲ.) ಇನ್ನು ಕೆಲವು ಬರಹಗಳು ದೊರೆತೇ ಇಲ್ಲ. ಏನೇ ಇರಲಿ ಇವು ಹಾಸ್ಯ, ವಿಡಂಬನೆಗಳಿಂದ ಕೂಡಿದ ಅಂಕಣ ಬರಹಗಳೇ ಆಗಿವೆ - ಅಂಕಣದ ಎರಡು ಲಕ್ಷಣಗಳಿವೆಯಾದ್ದರಿಂದ.

ಸ್ವತಹ ಪಂಜೆಯವರಿಗೆ ತಾವು ಅಂಕಣಬರಹ ಬರೀತಿದ್ದುದರ ಕಲ್ಪನೆ ಇರಲೇ ಇಲ್ಲ. (ಈ ಮಾತು ಅವರು 'ಸಣ್ಣಕತೆಗಳ ಜನಕ' ಎಂಬುದಕ್ಕೂ ಅನ್ವಯಿಸುತ್ತದೆ) ಪರಿಣಾಮವಾಗಿ ೧೯೦೫-೧೯೦೭ರಷ್ಟು ಹಿಂದೆ ಸತ್ಯದೀಪಿಕೆಯಲ್ಲಿ ಬರೆಯಲಾದ ಈ ಲಘುಬರಹಗಳು ಅಂಕಣ ಲೇಖನಗಳಾಗಿವೆ. ಆ ಕಾರಣದಿಂದ ಪಂಜೆಯವರು ಪ್ರಪ್ರಥಮ ಅಂಕಣಕಾರರೆಂದು ತಿಳಿಯತಕ್ಕುದು.



## ಅನುಬಂಧ (ಆ)

# ಕಿಟೆಲ್ ಕೋಶ ಮತ್ತು ಗೋವಿಂದ ಪೈಗಳು

ಶಬ್ದಕೋಶ/ನಿಘಂಟುವನ್ನು ಯಾವುದೊಂದು ಶಬ್ದದ ಅರ್ಥವನ್ನು ಕಂಡುಕೊಳ್ಳುವುದಕ್ಕೆಂದು ಪರಿಶೀಲಿಸುತ್ತೇವೆ. ಅಷ್ಟಕ್ಕೆ ಅದರಲ್ಲಿಯ ಆಸ್ಥೆ ಮುಗಿದಂತೆ. ಅನೇಕ ಶಬ್ದಕೋಶಗಳಲ್ಲಿ ಶಬ್ದವೊಂದರ ಅರ್ಥದ ಜೊತೆಗೆ ಅದರ ಮೂಲಧಾತು, ಬೇರೆ ಭಾಷೆಯ ಜ್ಞಾತಿಪದಗಳು, ಗಾದೆಮಾತುಗಳು ಮುಂತಾಗಿ ಕೊಟ್ಟಿರುತ್ತಾರೆ. ಕಿಟೆಲ್ ಕೋಶ ಈ ಸದರಿನಲ್ಲಿ ಬರುತ್ತದೆ. ಹಾಗಾಗಿ ಭಾಷಾಶಾಸ್ತ್ರದಲ್ಲಿ, ಶಬ್ದಗಳ ಪೂರ್ಣಸ್ವರೂಪದಲ್ಲಿ ಆಸ್ಥೆಯಿದ್ದವರು ತುಸು ವಿವರವಾಗಿ ನಿಘಂಟುವನ್ನು ತಿರುವಿ ಹಾಕುತ್ತಾರೆ. ಇಂಥವರ ಸಂಖ್ಯೆಯೂ ಕಡಿಮೆಯೇನಲ್ಲ.

ಆದರೆ ಈ ಕೋಶವನ್ನು ಒಂದು ವಾಚನ ಗ್ರಂಥವೆಂಬಂತೆ ಮನನ ಮಾಡಿದವರು ಕೆಲವೇ ಜನರಿದ್ದಾರೆ. ಅವರಲ್ಲಿ ಮುದ್ದಣನೇ ಮೊದಲಿಗ. ಅನಂತರ ಸ್ಪಷ್ಟವಾಗಿ, ತಿಳಿದುಬಂದ ಇನ್ನೊಬ್ಬರು ಗೋವಿಂದ ಪೈಗಳು. 'ಸ್ಪಷ್ಟವಾಗಿ' ಏಕೆಂದರೆ, ಅವರು ಬಳಸುತ್ತಿದ್ದ ಕಿಟೆಲ್ ಕೋಶದ ಪ್ರತೀ ಪುಟದಲ್ಲಿ (ಒಂದಾದರೂ ಖಾಲಿ ಬಿಡದಂತೆ) ಪೈಗಳ ಒಲವಿನ ನೇರಿಳೆ ಶಾಯಿಯ ಗುರುತುಗಳಿವೆ. ಬದಿಯ ಗೆರೆ, ಅಡ್ಡಗೆರೆ, ಕತ್ತರಿ ಗುರುತು, ಪ್ರಶ್ನಾರ್ಥಕ ಚಿಹ್ನೆ, ತಿದ್ದುಪಡಿ ಮೊದಲಾದ ಶಬ್ದ - ಇವೇ ಮುಂತಾಗಿ ಪುಟವೆಲ್ಲ ತುಂಬಿರುತ್ತದೆ (ಆ ಪ್ರತಿಯು ಉಡುಪಿಯಲ್ಲಿಯ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿದೆ. ಒಂದು ಮಾದರಿಯ ಪುಟ ಇಲ್ಲಿ ಕೊಟ್ಟಿದೆ.)

ಅವುಗಳ ವಿಶ್ಲೇಷಣೆ ಮಾಡಿದಾಗ ಅ) ಕಿಟೆಲ್ ಕೋಶದ ತಪ್ಪುಗಳು ಆ) ಸೇರ್ಪಡೆಗಳು ಇ) ಸೇರಿಸಲಾದ ಅನ್ಯ ಭಾಷಾ ಶಬ್ದಗಳು. ಈ) ಕಿಟೆಲ್ ಕೊಡದೇ ಇದ್ದ ಅರ್ಥಗಳು ಕಂಡುಬರುತ್ತವೆ.

**ತಪ್ಪುಗಳು**

| ಕೋಶದಲ್ಲಿದ್ದದ್ದು | ತಪ್ಪಾದದ್ದು |
|---|---|
| ಏಕಾಮ್ಬ್ರನಾಥ | ಇಲ್ಲಿ 'ಬ' ಒತ್ತು ಬೇಕಿಲ್ಲ. |
| ಅಚ್ಚುಬೆಲ್ಲ ಅಚ್ಚಪ್ಪಗೆ | |
| ನುಚ್ಚು ಬೆಲ್ಲ ವೆಂಕಪ್ಪಗೆ | 'ವೆಂಕಪ್ಪಗೆ' ಅಲ್ಲ. (ನುಚ್ಚು ಬೆಲ್ಲ ನಚ್ಚಪ್ಪಗೆ) |
| ತಾ ರಾಮನೋ ವಲ್ಲಭಂ | ತಾರಾಮನೋವಲ್ಲಭಂ (ಬಿಡಿಸಿ ಅಲ್ಲ) |

**೨. ಇವು ಕೆಲವು ಸೇರ್ಪಡೆಗಳು**

| **ಕೋಶದಲ್ಲಿದ್ದದು** | **ಪೈ ಸೇರ್ಪಡೆ** |
|---|---|
| ಕಾವಡಿ | ಇದು ಹಿಂದಿಯಲ್ಲಿಯೂ ಇದೆ. |
| ಕುಱಿಚೆ; ಪಡಿಗ | ತುಳುವಿನಲ್ಲಿ ಗುಜ್ಜೆ ಮತ್ತು ಪಡ್ಗೆ |
| ತಲಬು | ಪರ್ಶಿಯ ಭಾಷೆಯಲ್ಲಿ ತಲ್ಬೀದನ್ |
| ತಱ(ದಿ) | ಅರಬಿಕ್‌ನಲ್ಲಿ ತರಹ್ |
| ಹವ್ಯಾಸ | ಸಂಸ್ಕೃತವಲ್ಲ ; ಅರಬಿಕ್‌ನ ಹವ್ವಸ್ |
| ಪಾಲುದಾರ | ಕನ್ನಡ ದೇಶ್ಯವಲ್ಲ; ಪರ್ಶಿಯದ ಪಾಲ್ದಾರ್ |

**೩. ಕೋಶದಲ್ಲಿ ಕಿಟೆಲ್ ಕೊಡದಿದ್ದ ಹೆಚ್ಚಿನ ಅರ್ಥಗಳು**

| | | |
|---|---|---|
| ಅಕ್ಷಿಗತ - | detestable | ಇನ್ನೊಂದು ಅರ್ಥ eyesore |
| ಕೆಂದು - | to lean on | ಇನ್ನೊಂದು ಅರ್ಥ to lie down |

ಇನ್ನು ಪೈಗಳು ಗುರುತು ಹಾಕಿದ ಈ ಕೆಲವಕ್ಕೆ ತುಸು ವಿವರಣೆ ಕೊಡಬೇಕು:

**ಕೊನೆ:** ಇದರ ಅರ್ಥ ನಮಗೆಲ್ಲ ಗೊತ್ತಿದ್ದ ಹಾಗೆ 'The end'. ಆದರೆ ಕಿಟೆಲ್ to thrive or to succeed ಎಂದು ಕೊಟ್ಟಿದ್ದಾರಲ್ಲ! ಮೇಲಾಗಿ 'ಗಿರಿಜಾಕಲ್ಯಾಣ'ದಲ್ಲಿ ಆ ಶಬ್ದ ಬಂದಿದೆ ಎಂದು ಹೇಳಿದ್ದಾರೆ. ಪೈಗಳು ಗಿರಿಜಾಕಲ್ಯಾಣವನ್ನು ವಿವರವಾಗಿ ಪರಿಶೀಲಿಸಿ, ಆ ಶಬ್ದ ಬಂದ ಸಂದರ್ಭದಿಂದ ಅದು 'ಕೊಂಡುಕೊನೆ' ಎಂದು ಗುರುತಿಸಿದರು. ಈ 'ಕೊಂಡುಕೊನೆ' ಎಂಬುದನ್ನು ಮಾರ್ಜಿನ್‌ನಲ್ಲಿ ಕಾಣಿಸಿದ್ದಾರೆ, ಕಿಟೆಲ್ ಹೇಳಿದ್ದಂತೆ ಬರಿ 'ಕೊನೆ' ಅಲ್ಲ.

**ಘಾತಾಳಿ :** ಕಿಟೆಲ್ ಕೊಟ್ಟ ಅರ್ಥ a mischievous woman. ಎಂದರೆ ಅದು ಸ್ತ್ರೀ-ವಾಚಿ ಮಾತ್ರವೆ? 'ಆಳಿ' ಇದನ್ನು ಸ್ತ್ರೀವಾಚಿಯಾಗಿ ಪರಿಭಾವಿಸಿ ಕಿಟೆಲ್ ಹಾಗೆ ಹೇಳಿರಬೇಕು. ಪೈ ತಮ್ಮ ಕೋಶದ ಪ್ರತಿಯಲ್ಲಿ ಇದನ್ನು ಕಾಣಿಸಿ 'ವಾಚಾಳಿ' ಮುಂತಾದ್ದರಲ್ಲಿ ಅದು ಪುರುಷವಾಚಿಯೂ ಆಗಿರುವುದನ್ನು ತೋರಿಸಿದ್ದಾರೆ.

**ಮುಕ್ತಾಯ:** ಈ ಶಬ್ದ ಸಂಸ್ಕೃತದ್ದು ಎಂದು ಕಿಟೆಲ್ ಕಾಣಿಸಿದ್ದಾನೆ. ಹಾಗೇನಲ್ಲ, ಅದು ಕನ್ನಡ ಶಬ್ದ. 'ಮುಗಿತಾಯ'ದಿಂದ ರೂಪುಗೊಂಡಿರಬೇಕು - ಎಂಬುದು ಪೈ ಅವರ ಅಭಿಪ್ರಾಯ.

**ಮತ್ರ್ಯಾವತಾರ :** ಇದನ್ನು ಮರ್ತ್ಯ + ಅವತಾರ ಎಂದೇನೊ ಸಂಧಿ ಬಿಡಿಸಬಹುದು. ಆದರೆ ಅರ್ಥ ಸ್ಪಷ್ಟವಾಗದು. ಕಿಟೆಲ್‌ರೇ ಕೊಟ್ಟ 'ವಿಷ್ಣು ಪಡೆವಂ ಮತ್ಸ್ಯಾವತಾರಕ್ಕೆ' ಎಂಬ ಪ್ರಯೋಗ ವಾಕ್ಯದ ಮೇಲಿಂದ ಅದು 'ಮತ್ಸ್ಯಾವತಾರ' ಎಂದಿರಬೇಕು ಎಂಬುದಾಗಿ ಪೈಗಳು ಕಾಣಿಸಿದ್ದಾರೆ.

ನೃಪತುಂಗ - ಎಂಬ ಅಂಕಿತನಾಮವೂ ಇದೆಯಷ್ಟೆ. ಆದರೆ ಕಿಟೆಲ್ ಕೋಶದಲ್ಲಿ ಅದನ್ನು the most prominent king' ಎಂದು ರೂಢನಾಮವಾಗಿ ಮಾತ್ರ ಕಾಣಿಸಿದ್ದಾನೆ. ಅಂತೂ ರಾಷ್ಟ್ರಕೂಟ ದೊರೆ ಇಲ್ಲಿ ಮರೆಯಾಗಿದ್ದಾನೆ.

ಕೋಶದಲ್ಲಿಯ ಇವೇ ಮುಂತಾದ ಲೋಪ ಮತ್ತು ತಪ್ಪುಗಳಿಂದ ಕಿಟೆಲ್ಲರ ಕಾರ್ಯದ ಮಹತ್ವಕ್ಕೆ ಯಾವುದೇ ಚ್ಯುತಿ ಉಂಟಾಗಲಾರದು. ಆದರೆ ಗೋವಿಂದ ಪೈಗಳ ಬಹುಶ್ರುತತ್ವ, ಸೂಕ್ಷ್ಮಾತಿಸೂಕ್ಷ್ಮ ಗಮನ - ಇವು ದಂಗು ಬಡಿಸುವಂತಿವೆ. ಇದೊಂದು ಉದಾಹರಣೆ :

'ಬೆರಲ್' ಶಬ್ದದ ಅರ್ಥವನ್ನು ಕೊಟ್ಟು ಕಿಟೆಲ್, 'ಚಂದ್ರಪ್ರಭ ಪುರಾಣ ೧೦೪ನೆಯ ಪದ್ಯದಲ್ಲಿ ಅದರ ಪ್ರಯೋಗವಿದೆ ಎಂದು ಹೇಳುತ್ತಾನೆ. ಆದರೆ ಅದು ೧೪೪ನೆಯ ಪದ್ಯದ್ದು - ಎಂದು ಪೈಗಳು ತಿದ್ದಿದಾರೆ! ಅದೊಂದು ತಪ್ಪು ಎಂದು ಸಹಜವಾಗಿ ಅನಿಸದಿದ್ದದ್ದು. ಪೈಗಳಿಗೆ ಅದರ ಸರಿಯಾದ ಸಂಖ್ಯೆ ಏನೆಂಬುದು ಅದೆಂತು ಸ್ಫುರಣವಾಯಿತೊ!

ಆದರೆ ಪೈಗಳು ಕಿಟೆಲ್‌ಕೋಶಕ್ಕೆ ಬಹಳಷ್ಟು ಋಣಿಯಾಗಿದ್ದಾರೆ. ತಮ್ಮ ಸ್ವಂತದ ಶಬ್ದಭಂಡಾರವನ್ನು ಬೆಳೆಸಿಕೊಳ್ಳುವುದಕ್ಕೆ ಅದರಿಂದ ಪಡೆದ ನೆರವು ಅಷ್ಟಿಷ್ಟಲ್ಲ. (ಮುದ್ದಣನಿಗೂ ಈ ಮಾತು ಅನ್ವಯಿಸುತ್ತದೆ.) ಒಂದು ಸಣ್ಣ ದೃಷ್ಟಾಂತವನ್ನು ಕೊಡುವೆ. ತಮ್ಮ ಸೋದರತ್ತೆ ತೀರಿಹೋದದ್ದನ್ನು ಹೇಳುವಾಗ ತಮ್ಮ 'ತಲೆ ಬೆಪ್ಪಾಯಿತು; ಮನಸ್ಸು ಹೆಪ್ಪಾಯಿತು' ಎಂದಿದ್ದಾರೆ. ಈ ನುಡಿಗಟ್ಟಿಗೆ ಸಮಾನವಾಗಿ ಕಿಟೆಲ್ ಕೋಶದಲ್ಲಿ 'ಕಣ್ಣು ಮಬ್ಬಾಯಿತು; ಬುದ್ಧಿ ತಬ್ಬಾಯಿತು' ಎಂಬ ಮಾತಿದೆ. ಕಿಟೆಲ್ ಕೋಶದ ಅಖಂಡ ವಾಚನ, ಮನನದ ಪರಿಣಾಮವಾಗಿ ಪೈಗಳಿಗೆ 'ತಲೆ ಬೆಪ್ಪಾಯಿತು...' ಎಂಬುದು ಹೊಳೆದಿರಲಾರದೆ?



## ಡಾ. ಶ್ರೀನಿವಾಸ ಹಾವನೂರ
## ಅವರ ಆಯ್ದ ವಿಶಿಷ್ಟ ಗ್ರಂಥಗಳು

**ಅವಿವಾಹಿತೆ** ೧೯೫೬
ಸಾಮಾಜಿಕ ಸಮಸ್ಯೆಯ ವಿಶ್ಲೇಷಣೆ

**ಗೋವಿಂದ ಪೈ ವಾಙ್ಮಯ ದರ್ಶನ** ೧೯೬೬
ಪೂರ್ಣಸ್ವರೂಪದ ವಾಙ್ಮಯ ಸೂಚಿ

**ಕುಮುದಿನಿ ಹಾಗೂ ಇತರ ಕಾದಂ ಕಥನಗಳು** ೧೯೭೮
ವಿಶಿಷ್ಟ ರೀತಿಯ ಕಾದಂಬರೀ ಸಂಗ್ರಹ

**ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಕಂಪ್ಯೂಟರ್....** ೧೯೮೨

**ಹರಿದಾಸರು ಸ್ತುತಿಸಿದ ಶ್ರೀ ವಾದಿರಾಜರು** ೧೯೯೬

Epigraphical Studies By N.L. Rao
- (Edited with H.S. Gopala rao) ೧೯೯೭

**ಪಾ. ವೆಂ. ಆಚಾರ್ಯರ ಸಮಸ್ತಕೃತಿ - ಸಂ. ೧ರಿಂದ ೧೫** ೨೦೦೧-೦೪
(ಸಂಪಾದಿತ)

**ಸಮಗ್ರ ಹರಿದಾಸ ಸಾಹಿತ್ಯ ಸಂಪುಟಗಳು ೧, ೨೧, ೩೧** ೨೦೦೨-೦೪
(ಸಂಪಾದಿತ)

**ಹೊಸಗನ್ನಡದ ಅರುಣೋದಯ** ೨೦೦೦
(ಪರಿಷ್ಕೃತ)

**Rev. Dr. F. Kittel**
(ಕನ್ನಡ ಮತ್ತು ಜರ್ಮನ್ ಭಾಷೆಯಲ್ಲಿ ಸಹಿತ) ೨೦೦೪

**ಕನ್ನಡ ಪತ್ರಿಕಾ ಸೂಚಿ** (ಪತ್ರಿಕೋದ್ಯಮ ಲೇಖನ ಸಹಿತ) (೨೦೦೫)
(ಸಂಪಾದಿತ)



## ಶುಭವಾಗಲಿ

ದಕ್ಷಿಣ ಕನ್ನಡದ ಐವರು ಮಹನೀಯರನ್ನು ಪ್ರಾತಿನಿಧಿಕವೆಂದು ಪರಿಗಣಿಸಿ ಅವರ ಸಾಧನೆಗಳನ್ನು ಅವರವರ ಜೀವನದ ಧೀರೋದಾತ್ತ ಕ್ರಮಗಳ ಮೂಲಕ ; ಅವರು ನಿರ್ವಹಿಸಿರುವ ಪತ್ರಸಂಸ್ಕೃತಿಯ ಹಿನ್ನೆಲೆಯಲ್ಲಿ ಕಟ್ಟಿಕೊಡುವ ಚೇತೋಹಾರಿ ಪ್ರಯತ್ನ ಇಲ್ಲಿ ನಡೆದಿದೆ.

ಲೇಖಕರು ಸಂಶೋಧನಾತ್ಮಕ ನೆಲಗಟ್ಟಿನಲ್ಲಿ ಆಲೋಚಿಸಿ ಬರೆವಣಿಗೆ ಸಿದ್ಧಮಾಡಿರುವುದರಿಂದ ಹೊಸ ಹೊಸ ಮಾಹಿತಿಗಳು ಸಹೃದಯ ಓದುಗನ ಅವಗಾಹನೆಗೆ ದೊರೆತಂತಾಗಿ, ಕೃತಿಗೆ ಚೈತನ್ಯದ ಪರಿಚಲನೆ ಒದಗಿಬಂದಿರುತ್ತದೆ.

**ಧರ್ಮದರ್ಶಿ ಹರಿಕೃಷ್ಣ ಪುನರೂರು**
ಅಧ್ಯಕ್ಷರು